# ಪ್ರಸ್ತಾವನೆ

ಈ ಪತ್ತೆದಾರಿಯ ಕಾದಂಬರಿಯ ಮೊದಲನೆಯ ಮುದ್ರಣ ೨,೦೦೦ ಪ್ರತಿಗಳು ಅತಿ ಶೀಘ್ರವಾಗಿ ಮುಗಿದುಹೋದವು. ಕೃಷ್ಣಾಜಿಲ್ಲೆಯ ನಿಡದವೋಲು ಪಟ್ಟಣದ ಆಂಧ್ರ ಪ್ರಚಾರಿಣೀ ಗ್ರಂಥನಿಲಯದವರು ತಮ್ಮ ತೆಲುಗು ಭಾಷೆಗೆ ಇದನ್ನು ಪರಿವರ್ತಿಸಿಕೊಳ್ಳಲು ಅನುಮತಿ ಕೊಡಬೇಕೆಂದು ಕೇಳಿಕೊಂಡದ್ದಕ್ಕೆ ಭಾಷಾಬಾಂಧವ್ಯದ ಅಭಿಮಾನದಿಂದ ಸಮ್ಮತಿಸಿದುದಾಯ್ತು.

ಈ ಗ್ರಂಥವು ಎಷ್ಟುಮಟ್ಟಿಗೆ ಜನಗಳ ಅನುರಾಗಕ್ಕೆ ಪಾತ್ರವಾಗಿರುವುದೆಂಬುದಕ್ಕೆ ಇವೇ ಸಾಕಾದ ಉದಾಹರಣೆಗಳಾಗಿವೆ.

ಸಕ್ಕರೆಯ ವರ್ಣನೆಯನ್ನು ತಿಳಿಯುವುದಕ್ಕಿಂತ ಸವಿದು ರುಚಿಯನ್ನು ತಿಳಿದರೇನೆ ಅದರ ನಿಜವಾದ ಯೋಗ್ಯತೆ ಗೊತ್ತಾದೀತು.

ಭಾಷಾಭಿಮಾನಿಗಳಾದ ಹಲವರು ಮಿತ್ರರ ಒತ್ತಾಯದ ಮೇಲೆ ಪುಸ್ತಕವನ್ನು ಪುನಃ ಈ ಮುದ್ರಣಕ್ಕೆ ತಂದಿದೆ.

ಶ್ರೀರಾಮ ಪುರ
ಬೆಂಗಳೂರು ನಗರ
೧—೧೦—೧೯೩೪.

**ಜಂಗಮಕೋಟೆ ಕೃಷ್ಣಶಾಸ್ತ್ರಿ**

# ಪ್ರಫುಲ್ಲೆ

## ಒಂದನೆಯ ಪರಿಚ್ಛೇದ.

ಪ್ರಫುಲ್ಲೆ, ಜಾಗ್ರತೆಮಾಡು. ಈತನ ಕೈಹಿಡಿದುಕೊ. ಮಾಲೆಯನ್ನು ಹಾಕು. ಲಗ್ನ ಮೀರುತ್ತಿರುವುದು. ಅಯ್ಯಾ ಕಾಂತನಾಥ, ನೀನು ಈಕೆಯನ್ನು ಧರ್ಮಪತ್ನಿಯಾಗಿ ಪರಿಗ್ರಹಿಸುತ್ತೀಯೊ ?

ಆಹಾ ! ಮನಃಪೂರ್ವಕವಾಗಿಯೂ.

ಎಲೌ, ನೀನು ಈತನನ್ನು ಪತ್ನಿಯನ್ನಾಗಿ ವರಿಸಿದ್ದೀಯೋ ?

ಓಹೋ ! ನಾನು ಇಷ್ಟಪಡುತ್ತೇನೆ. ನಾವು ಮೊದಲು ವೈದ್ಯನನ್ನು ಕರೆತಂದು ತೋರಿಸುವುದು ಮೇಲಲ್ಲವೆ ?

ಸರಿಯೇ, ಈಗ ಇಷ್ಟಕ್ಕೂ ಹೊತ್ತಿಲ್ಲ. ಆಗಲಿ, ತದೇವಲಗ್ನಂ. ಈಗ ನೀವಿಬ್ಬರೂ ದಂಪತಿಗಳಾದಿರಿ.

ಆ ನಿಶೀಥದಲ್ಲಿ ನಡೆದ ವಿವಾಹ ಮಹೋತ್ಸವದಲ್ಲಿ ಸೌಮ್ಯನಾದ ಚಂದ್ರನು ದಿವ್ಯಸಾಕ್ಷಿಯಾದ ಯಜ್ಞೇಶ್ವರ. ತಾರಕೆಗಳ ಲಾಜಾಕ್ಷತೆ. ವಸಂತ ಕಾಲದ ಎಳೆಮಾವಿನ ದಾಂಗುಡಿಗಳ ಮಕರ ತೋರಣ. ಫಲಭರಿತಗಳಾದ ರಂಭಾಸ್ತಂಭಗಳ ಮನೋಹರಮಂಟಪ. ಚಕೋರಪಕ್ಷಿಗಳ ಮೃದುಸ್ವರದ ಮಧುರ ಮಂಗಳ ಗಾನ. ಅಂತು ಎಲ್ಲ ಸ್ವಭಾವಸುಂದರ. ನಿಖಿಲ ಶುಭಂಕರ.

ಕಾಂತ—“ಫುಲ್ಲೆ, ಒಂದು ಮುತ್ತುಕೊಡು,” ಎಂದು ಹೇಳುತ್ತ ಕಣ್ಣು ಮುಚ್ಚಿದನು.

ಪ್ರಫುಲ್ಲೆ—ಅಯ್ಯೋ ! ಕಾಂತನಾಥನು ಸ್ವರ್ಗಸ್ಥನಾದನಲ್ಲಾ !

ಶಾಂತವಾದ ಅರ್ಧರಾತ್ರಿಯಲ್ಲಿ ಎದೆಯೊಡೆಯುವ ಈ ದೀನಧ್ವನಿಯುಂಟಾಯಿತು. ಆಗ ಅಲ್ಲಿಗೆ ಹರಿದುಬರುತ್ತಿದ್ದ ಸಾರೋಟಿನ ಸದ್ದು ಕುದುರೆಗಳ ಖುರಹತಿಯೊಡನೆ ಸೇರಿ ಬಲವಾಗಲು ಅಳುವ ಧ್ವನಿಯು ನಿಂತುಹೋಯಿತು. ನದೀತೀರದ ಆ ಉದ್ಯಾನಕ್ಕೆ ಸಾರೋಟು ಬಂದು ನಿಂತಿತು. ಬಾಗಿಲನ್ನು ತೆರೆದರು. ಬಳಿಕ ಚಂದ್ರನು ಮೋಡಗಳ ನಡುವೆ ಅವಿತುಕೊಂಡನು. ಬೆಳುದಿಂಗಳ ಪ್ರಕಾಶ ಕಡಿಮೆ. ಸುಮಾರು ಮಸಕು. ಯಾವುದೂ ಅಸ್ಫುಟ. ಪುಣ್ಯವಶಾತ್ ಎರಡು ನಿಮಿಷಗಳ ಮಟ್ಟಿಗೆ ಶೀತಾಂಶುವು ಹೊರಕ್ಕೆ ಬಂದನು. ಸಾರೋಟಿನಲ್ಲಿ ಮೂವರು ಪುರುಷರೂ ಒಬ್ಬ ಸ್ತ್ರೀಯೂ ಸೇರಿದರು. ಆಕೆ ಚಿಕ್ಕಪ್ರಾಯದವಳು. ಉತ್ತಮವಾದ ನೀಲವರ್ಣದ ರೇಷ್ಮೆಯ ಸೀರೆಯನ್ನು ಒಲುಚೆಲುವಾಗಿ ಉಟ್ಟಿದ್ದಳು. ಕೋಮಲ ಕೇಶಪಾಶವು ಚದುರಿ ಎರಡು ಬಾಹುಗಳ ಮೇಲೂ ಜೋಲಾಡುತ್ತಿದ್ದಿತು. ಮುಖವು ಸ್ವಲ್ಪ ಕಳೆಗುಂದಿದ್ದಿತು. ಗಾಬರಿಯಿಂದ ಆ ಪುರುಷವ್ಯಕ್ತಿಯನ್ನು ದೃಷ್ಟಿಸಿ ನೋಡುತ್ತಿದ್ದಳು. ಇನ್ನಿಬ್ಬರು ಆ ವ್ಯಕ್ತಿಯ ಎರಡು ರಟ್ಟೆಗಳನ್ನೂ ಹಿಡಿದಿದ್ದರು. ಆ ಯುವಕನು ಸಾಯುತ್ತಿದ್ದುದು ದಿಟ. ಈಕೆ ಪಾಣಿಗ್ರಹಣ ಮಾಡಿದಾಗ ಆತನ ಕೈ ಆಲಿಕಲ್ಲಿನಂತೆ ತಣ್ಣಗಾಗಿದ್ದಿತು. ಕಣ್ಣುಗುಡ್ಡೆಗಳು ಗಾಜಿನ ಗೋಲಗಳಾಗಿದ್ದುವು ಮಾತು ತೊದಳುತಿದ್ದಿತು.

ಅಂತು ಮದುವೆಯೇನೋ ಆಯಿತು. ಆದರೆ ಆ ಶಾಸ್ತ್ರ ಮುಗಿಯುವುದರೊಳಗಾಗಿ ಆತನು ಸ್ನೇಹಿತರ ತೋಳುಗಳಲ್ಲಿ ಒರಗಿದನು. ಈ ಹಸುಮಗಳು ಈ ಭಯಂಕರವಾದ ನೋಟವನ್ನು ಕಾಣುತ್ತಲೆ ಚೀರುತ್ತ ಕೆಳಕ್ಕೆ ಬಿದ್ದು ಮೂರ್ಛೆಹೋದಳು.

ಆ ಇಬ್ಬರಲ್ಲಿ ಪುರೋಹಿತನಾಗಿದ್ದವನೊಬ್ಬನು—ಎಲೋ, ಬಂಡಿಯನ್ನು ಬೇಗ ಹೊಡೆ. ಪೋಲೀಸಿನವರೇನಾದರೂ ಬರುತ್ತಾರೋ ನೋಡು. ಎನ್ನಲು ಕುದುರೆಗಳಿಗೆ ಚುರುಕುಮುಟ್ಟಲು ಸಾರೋಟು ಸರ್ರನೆ ಓಡುತ್ತ ಬಂದಿತು. ಆಗ ಆ ಇಬ್ಬರು ಪುರುಷರೂ ಆ ದೇಹವನ್ನು ಬಂಡಿಯಲ್ಲಿ ಒಂದುಕಡೆ ಒರಗಿಸಿ ಸಾಧ್ವಸದಿಂದ ಪರಸ್ಪರ ಪಿಸುಮಾತಾಡಿಕೊಳ್ಳುತಿದ್ದರು. ಅವರಲ್ಲಿ ದೊಡ್ಡವನು ಕೇವಲ ಎತ್ತರ. ಆಜಾನುಬಾಹು. ಸುಮಾರು ನಲವತ್ತು ವಯಸ್ಸು.

ನರೆಗೂದಲು. ಕೊತ್ತಿಗಣ್ಣು. ಇನ್ನೊಬ್ಬನಿಗೆ ಮೂವತ್ತೈದಕ್ಕಿಂತ ಹೆಚ್ಚು ವಯಸ್ಸಿಲ್ಲ. ಕುಳ್ಳ. ತೆಳುವು. ಮುಖ ಚೂಪು.

"ಕಳ್ಳನ ಮನಸ್ಸು ಹುಳ್ಳುಹುಳ್ಳಗೆ" ಎಂಬುದು ಇಲ್ಲಿ ದೃಷ್ಟಾಂತಕ್ಕೆ ಬಂದಿತು. ಇವರ ಕೆಲಸವು ಅಷ್ಟು ದುಷ್ಟವಾಗಿದ್ದಿತು. ಹೇಡಿಯಾದ ಆ ಕುಳ್ಳನು ಕಂಪಿಸುತ್ತಿದ್ದನು. ಈಗ ಇವಳನ್ನೇನು ಮಾಡೋಣ?—ಎನ್ನುವಷ್ಟರಲ್ಲೇ ಪ್ರಫುಲ್ಲೆಯು ತನ್ನ ಮ್ಲಾನವದನವನ್ನು ಮೇಲಕ್ಕೆ ತೋರಿದಳು.

ದೊಡ್ಡವನು—ಮಾಡುವುದೇನು ? ಅವಳಿಗೆ ಪ್ರಜ್ಞಾನಬರುತ್ತಲೇ ಮನೆಗೆ ಕಳುಹಿಸುವುದೇ.

ಕುಳ್ಳ—ಅವಳು ಒಲ್ಲೆನೆಂದರೊ ? ಅಥವಾ ನಮ್ಮ ಜತೆಯಲ್ಲೇ ಬರಬೇಕೆಂದರೋ ?

ದೊಡ್ಡವನು—ಇಲ್ಲ, ಅವಳು ನಮ್ಮ ಮಾತನ್ನು ಮೀರಲಾರಳು.

ಈಗ ಬಾಲೆಯು ಕಣ್ತೆರದು ಚಿಕ್ಕವನನ್ನು ದೃಷ್ಟಿಸಿದಳು. ಅವನು ಮುಖವನ್ನು ಬೇರೇಕಡೆಗೆ ತಿರುಗಿಸಿಕೊಂಡನು. ಆಕೆಯು ಮೆಲ್ಲಗೆ ಚೇತರಿಸಿಕೊಂಡು ಪೆಟ್ಟಿಯಮೇಲೆ ಕುಳಿತು ಕಾಂತನ ಕೈ ಬೆರಳುಗಳನ್ನು ಸವರುತ್ತ 'ಅಯ್ಯೋ! ಕಾಂತನಾಥ! ಪ್ರಫುಲ್ಲಳು ನಿನ್ನನ್ನು ಎಷ್ಟು ಪ್ರೀತಿಸುತ್ತಿದ್ದಳೊ!' ಎಂದು ಪರಿಪರಿಯಾಗಿ ಹಂಬಲಿಸುತ್ತ ಎಡಗೈಯಲ್ಲಿ ಗಲ್ಲವನ್ನೂರಿ ಕಣ್ಣೀರಿಡುತ್ತ ಹೃದಯವೊಡೆದವಳಂತೆ ಕಾತರಿಸಿದಳು. ಅತ್ತೂ ಅತ್ತು ಸಾಕಾಗಿ ಕಡೆಗೆ—ಈಗ ನೀವು ಹೋಗುವುದೆಲ್ಲಿಗೆ ? ಎಂದಳು.

ದೊಡ್ಡವನು—ನಾನು ಅದನ್ನೇ ಯೋಚಿಸುತ್ತಿದೇನೆ ; ನಿನ್ನ ಈ ರೋದನದಿಂದ ನನಗೇನೂ ತೋರದು. ಈಗಿನ ಸ್ಥಿತಿ ಚೆನ್ನಾಗಿಲ್ಲ. ನಮ್ಮಲ್ಲಿ ಶವವಿದೆ. ಯಾರಾದರೂ ನಮ್ಮನ್ನು ತಡೆದರೆ ನಾವು ಏನೂ ಹೇಳಲಾರೆವು. ಇದನ್ನು ನಾವು ನಮ್ಮ ಬಿಡಾರಕ್ಕೆ ಒಯ್ಯುತ್ತೇವೆ. ನೀನು ಸುಮ್ಮನೆ ಮನೆಗೆ ಹೊರಡು. ನಾನು ಬೆಳಗ್ಗೆ ಬರುತ್ತೇನೆ. ಮುಂದಿನ ವಿಷಯವಾಗಿ ಮಾತಾಡೋಣ.

ಪ್ರಫುಲ್ಲೆ—ನಾನು ಕಾಂತನಾಥನ ಧರ್ಮಪತ್ನಿಯಲ್ಲವೆ ? ನಾನು ಈ ಕಳೆ ಬರವನ್ನಾದರೂ ಮನದಣಿಯೆ ನೋಡಕೂಡದೆ ? ಈತನಿಗೆ ಪ್ರಬಲ ವ್ಯಾಧಿಯಿರುವುದು ತಿಳಿದಿದ್ದರೆ ನಾನು ಈತನನ್ನು ಎಡೆಬಿಡುತಿ ಗೆ [illegible] !

ದೊಡ್ಡವನು—ಹೌದಮ್ಮ. ನೀನು ಕಾಂ[illegible] ಧರ್ಮಪತ್ನಿಯೇ ದಿಟ. ಆದರೆ ನಾನು ಹೇಳಿದಂತೆ ಕೇಳು. ನಿನಗೆ ಒಳ್ಳೆದಾಗಬೇಕೆಂಬುದೇ ನನ್ನಿಷ್ಟ.

ಪ್ರಫುಲ್ಲೆ ನೀವು ನನ್ನನ್ನು ಜತೆಯಲ್ಲಿ [illegible]ರದುಕೊಂಡು ಹೋಗಿ. ನಾನೇನೂ ?[illegible]ಮಾಡುವುದಿ[illegible]

ದೊಡ್ಡವನು—[illegible] ಇಲ್ಲ ! ನೀನು ಮನೆಗೆ ಹೋಗಬೇಕು. ಎಲಾ ! ಬಂಡಿಯನ್ನು ನಿಲ್ಲಿಸು.

ಸಾರೋಟು ಉದ್ಯಾನದ [illegible]ಮುಂಟಸದ್ವಾರದ ಬಳಿ ನಿಂತಿತು. ಎತ್ತರದ [illegible] ಥಟ್ಟನೆ ಆ ತರುಣ[illegible] [illegible]ಳಿಸಿ ಬೇಗ ಬಂಡಿಯ ಬಾಗಿ[illegible] ಹಾಕಿಕೊಂಡನು. ಕಡೆಗೆ [illegible] ಒಂದು ಮಾತನಾಡುವುದಕ್ಕೂ ಕೂಡ ಅವಕಾಶ ಕೊಡಲಿಲ್ಲ. ರಥಾಶ್ವಗಳು ವಾಯುವೇಗದಿಂದ ಮುಂದಕ್ಕೆ ಸರಿದುವು.

ಈ ಪ[illegible] ಹೆಂಗಸು ಸ್ವಲ್ಪಹೊತ್ತು ಗಾಬರಿಗೊಂಡು ನಿಶ್ಚೇತನಳಾದಳು. ಬಳಿಕ ಸ್ವಲ ತೆಪ್ಪತ್ತು ನೋಡಲು ಸಾರೋಟು ಸಾಗಿಹೋಗಿದ್ದಿತು. ಇನ್ನು ಅದನ್ನು ಹಿಂಬಾಲಿಸುವುದು ವ್ಯರ್ಥವೆಂದುಕೊಂಡಳು. ಆಹಾ ! ಏನು ಕ್ರೂರ ಕೃ[illegible] ! ಹೀಗೂ ಉಂಟೆ ?—ಎಂದುಕೊಳ್ಳುತ್ತ ಮುಂದುವರಿದಳು. ಆ ಬೆಳಗಿನ ಜಾವದಲ್ಲಿ ಪ್ರಕೃತಿಯು ಶಾಂತವಾಗಿದ್ದಿತು.

ಆಹಾ [illegible]ಫುಲ್ಲೆ ! ಅಧಾ[illegible] ಕಾಂತನಾಥನರಾಣಿ ! ಲಗ್ನವು ನ್ಯಾಯವಾಗಿದ್ದು [illegible]ವೇರಿದ್ದಲ್ಲಿ ಈ ಮಹಾ ಸಾಹಸನಾಟಕದಲ್ಲಿ ನೀನೇ ಪ್ರಧಾನ ಪಾತ್ರ[illegible]ಾಗಿ [illegible]ರಿಕ[illegible]ನಿಸಿಕೊಂಡು ಉತ್ತಮಪದವಿಯನ್ನು ಪಡೆಯುವೆ.

ಈಕೆಯು ಮನೆಯನ್ನು ಸಲಪು[illegible]ದಕ್ಕೇನೂ ಬಹಳ ಹೊತ್ತು ಬೇಕಾಗಲಿಲ್ಲ. ಅದೃಷ್ಟಕ್ಕೆ ತಕ್ಕಂತೆ ಆಗ ಯಾರೂ ನೋಡಲೂ ಇಲ್ಲ. ಆದರೆ ಮೆದುಳು ಕಲಕಿ ಹೋಗಿದ್ದುದರಿಂದ ಇ[illegible]ಗೆ ನಿ[illegible] ಹತ್ತಲಿಲ್ಲ. ಮನಸ್ಸಮಾ[illegible]ಧಾನಕ್ಕಾಗಿ ಎಷ್ಟು

ಯತ್ನಿಸಿದರೂ ಪ್ರಾಣಕಾಂತನ ಅಕಾಲ ಮರಣದಿಂದಾದ ಶೋಕವು ಅವಕಾಶ ಕೊಡಲಿಲ್ಲ. ಆ ರಾತ್ರಿ ಈಕೆಯ ಭಾಗಕ್ಕೆ ದುಃಖಪ್ರದವಾದ ಕಾಳರಾತ್ರಿ. ಇವಳಿಗೂ ಸುಖಕ್ಕೂ ನಡುವೆ ಒಂದು ಮರಣವು ಕಾಲಿಕ್ಕಿತು. ಈಕೆಯು ಏಕ ಕಾಲದಲ್ಲೇ ಮದುವಣಗಿತ್ತಿಯೂ ವಿಧವೆಯೂ ಆಗಬೇಕಾಯಿತು. ಇವಳು ಹುಚ್ಚಿಯಂತೆ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಸುತ್ತುತ್ತ ಕೈಕೈಹಿಸುಕಿಕೊಳ್ಳುತ್ತಿದ್ದಳು. ಕಿರುಮನೆಯಲ್ಲಿ ಮೇಜಿನಕಡೆ ನೋಡಲು ಅದರ ಮೇಲೆ ಒಂದು ಪುಟಿ ಪೆಟ್ಟಿಗೆ. ತದುಪರಿ ಒಂದು ಲಿಖಿತಪತ್ರ. ಫುಲ್ಲಳು ಆ ಕಾಗದವನ್ನು ಒಡೆದು ನೋಡಿ—ಆಹಾ! ಇದು ಕಾಂತನಾಥನ ಅಕ್ಷರ! ಎಂದು ಕಾಗದವನ್ನು ಒಂದು ಸಲ ಸರ್‍ರನೆ ಓದಿ ಮನಸ್ಸಿಗೆ ಗಲಿಬಲಿಯಾಗಲು ಪುನಃ ಗಟ್ಟಿಯಾಗಿ ಓದಿದಳು.—

"ಮೋಹನಾಂಗಿ, ಪ್ರಫುಲ್ಲೆ, ನಾನು ಇದರ ಸಂಗಡ ಅಮೂಲ್ಯವಾದ ಒಂದು ಮರಕತ ಮಂಜೂಷೆಯನ್ನು ಕಳುಹಿಸಿದೇನೆ. ಇದರಲ್ಲಿ ಬಹಳ ಮಹಿಮೆಯುಂಟು. ನಾನು ಇದನ್ನು ಕಳುಹಿಸಿರುವುದು ಯಾರಿಗೂ ಗೊತ್ತಿಲ್ಲ. ನನ್ನ ಮರಣವಾದ ಒಂದುವರ್ಷದನಂತರ ಇದನ್ನು ತೆರೆ.—ನಿನ್ನ ಪ್ರಾಣಕಾಂತನಾದ ಕಾಂತನಾಥ."

ಇದನ್ನು ಓದಿ ಮುಗಿಸಿ ಪ್ರಫುಲ್ಲಳು ಚಮಕಿತಳಾಗಿ—ಆಹಾ! ಈ ಕಾಗದವು ಕಾಂತನಾಥನಿಂದಲೇ ಬಂದಿದೆ. ಆತನು ನನಗಿದನ್ನು ಕಳುಹಿಸುವುದಕ್ಕೇನು ಕಾರಣವಿರಬಹುದು? ತನಗಪಾಯವಾಗುವುದೆಂದು ಆತನಿಗೆ ಗೊತ್ತಿದ್ದಿತೆ? ಓ! ಈಗ ತಿಳಿಯಿತು! ಕಾಂತನನ್ನು ಕೊಲೆಮಾಡಿದರು!

ಇದು ಭಯಂಕರ. ಆದರೆ ಊಹೆಯೇನೋ ಯುಕ್ತ. ಇದು ಪತ್ತೆಯಾದರೆ ಆ ಕೊಲೆಪಾತಕರಲ್ಲಿ ಒಬ್ಬರೂ ತಪ್ಪಿಸಿಕೊಳ್ಳಲಾರರು. ಇದು ಸತ್ಯ.—ಬೆಳಗಾಯಿತು. ಆ ವಿಚಿತ್ರವಿವಾಹದಲ್ಲಿ ನೆರೆದಿದ್ದ ಇಬ್ಬರಲ್ಲಿ ಯಾವನೊಬ್ಬನೂ ಬರಲಿಲ್ಲ. ಇವಳಿಗೆ ಅವರಲ್ಲಿ ಯಾರೊಬ್ಬರ ಹೆಸರಾಗಲಿ ಅವರ ಸ್ಥಳವಾಗಲಿ ಗೊತ್ತಿರಲಿಲ್ಲ. ತುಂಬ ಹೆದರಿದಳು. ತಾನು ಮೋಸಹೋದಳೆಂದುಕೊಂಡಳು. ಈಗ ಇವಳೇನು ಕನ್ಯಕೆಯೇ? ಅಥವಾ ವಿಧವೆಯೇ? ವಿವಾಹವು ಶಾಸ್ತ್ರೋಕ್ತವಾಗಿ ನೆರವೇರಿತೆ? ಕಾಂತನಾಥನ ಬಿಡಾರವು ತಿಳಿಯದಿದ್ದುದರಿಂದ ಏನನ್ನೂ ವಿಚಾರಿಸಲಾಗಲಿಲ್ಲ. ಕಡೆಗೆ ಈ ವಿಷಯವಾಗಿ ಯಾರಾದರೊಬ್ಬ ಅನುಭವಶಾಲಿಯ

ಬುದ್ಧಿವಾದವನ್ನು ಪಡೆಯಬೇಕೆಂದು ಪ್ರಫುಲ್ಲೆಯು ನಿರ್ಧರಿಸಿಕೊಂಡಳು. ಇವಳ ಸಹೋದರ ವಾರಣಲಾಲನಾದರೂ ಊರಲ್ಲಿರಲಿಲ್ಲ. ಇದ್ದರೂ ಈ ವಿಚಿತ್ರ ವಿಷಯದಲ್ಲಿ ಅವನಿಗಿಂತ ಹೆಚ್ಚು ಅನುಭವಶಾಲಿಗಳನ್ನೇ ಕೇಳಬೇಕು.

ಇವಳು ಹೀಗೆ ಯೋಚಿಸುತ್ತಿದ್ದಾಗ ಪರಿಚಾರಿಕೆಯು ಬಂದು ಯಾರೋ ಒಬ್ಬ ವೃದ್ಧನು ಇವಳನ್ನು ನೋಡಬೇಕೆಂದು ಬಂದಿರುವುದಾಗಿ ತಿಳಿಸಲು ಫುಲ್ಲಳು ಮಹಡಿಯಿಂದಿಳಿದು ಪಟಶಾಲೆಗೆ ಬಂದು ನೋಡಿದಳು. ಆತನು ಸುಮಾರು ಎತ್ತರವಾಗಿದ್ದನು. ಮೀಸೆಗಳಿರಲಿಲ್ಲ. ಹಿಂದಿನದಿನ ಕ್ಷೌರಮಾಡಿಸಿಕೊಂಡಿದ್ದನು. ದೃಷ್ಟಿಯೂ ಚಹರೆಯೂ ಬಲು ಚಮಕು. ದೃಢಾಂಗ. ಒಬ್ಬ ಲಾಯರಂತೆ ತೋರುತ್ತಿದ್ದನು.

ಪರಸ್ಪರ ಉಪಚಾರೋಕ್ತಿಗಳಾದ ಬಳಿಕ ಪ್ರಫುಲ್ಲೆಯು ಆತನನ್ನು ವಿಚಾರಿಸಲು ಆತನು—ನನ್ನ ಹೆಸರು ಆದಿವಿಠಲಮೂರ್ತಿ. ಯಜಮಾನವಿಠಲನೆಂದೂ ಕರೆಯುತ್ತಾರೆ. ನಾನೊಬ್ಬ ಪತ್ತೆದಾರ,—ಎನ್ನಲು, ಪ್ರಫುಲ್ಲೆಯು ವಿಠಲನ ಆಗಮನವನ್ನು ಅಭಿನಂದಿಸಿದಳು. ಈ ಆಗಂತುಕನು ಬಹಳ ಪ್ರಸಿದ್ಧ. ಆಪ್ರಾಂತದಲ್ಲಿ ಅಕಾರ್ಯಕಾರಿಗಳಿಗೆಲ್ಲ ಈತನ ಹೆಸರು ಸಿಂಹ ಸ್ವಪ್ನ. ಪ್ರಫುಲ್ಲಳು ವಿನಯದಿಂದ ಆತನ ಆಗಮನಕ್ಕೆ ಕಾರಣವೇನೆಂಬುದನ್ನು ಕೇಳಲು ವಿಠಲನು ಇನ್ನೂ ಹತ್ತಿರಕ್ಕೆ ಬಂದು ಕನಿಕರದಿಂದ ಫುಲ್ಲಳ ಮುಖವನ್ನು ನೋಡುತ್ತ—ಮಗು, ನಿನಗೆ ಪ್ರಾಣಾಪಾಯವುಂಟಾಗುವಂತಿದೆ. ನೀನು ಜಾಗರೂಕಳಾಗಿರಬೇಕು. ಎಂದು ಎಚ್ಚರಿಸುವುದಕ್ಕೋಸ್ಕರ ಬಂದಿದೇನಮ್ಮ—ಎಂದನು.

---

## ಎರಡನೆಯ ಪರಿಚ್ಛೇದ.

ವಿಠಲಮೂರ್ತಿಯ ಮಾತನ್ನು ಕೇಳಿ ಪ್ರಫುಲ್ಲಳಿಗೆ ಎದೆಯೊಡೆಯಿತು. ಎರಡು ನಿಮಿಷ ಸ್ತಬ್ಧಳಾಗಿ ನಿಂತಳು. ಬಳಿಕ ಸ್ವಲ್ಪ ಚೇತರಿಸಿಕೊಂಡು ನಡು

ಗುತ್ತ ಗದ್ಗದಸ್ವರದಿಂದ–ಹಾಗೆಂದರೇನು ? ನನ್ನನ್ನು ಯಾರು ಕೊಲ್ಲಬೇಕೆಂದಿದಾರೆ ? ನಾನು ಯಾರಿಗೂ ಯಾವ ಕೆಡುಕನ್ನೂ ಮಾಡಿಲ್ಲವಲ್ಲಾ! ಇದನ್ನು ಕೇಳಿ ನನಗೆ ಹುಚ್ಚು ಹಿಡಿಯುತ್ತಿದೆ.

ವಿಠಲ–ಅಮ್ಮಯ್ಯ, ಫುಲ್ಲ, ಈ ಪಿತೂರಿಯು ನನಗಿನ್ನೂ ಅಷ್ಟು ಚೆನ್ನಾಗಿ ಗೊತ್ತಿಲ್ಲ. ಇಬ್ಬರು ಮಾತಾಡುತ್ತಿದ್ದುದು ಅಕಸ್ಮಾತ್ತಾಗಿ ನನ್ನ ಕಿವಿಗೆ ಬಿದ್ದಿತು. ನಿನ್ನ ವಶದಲ್ಲಿ ಅಮೂಲ್ಯವಾದ ಒಂದು ಪಚ್ಚೆಯಪೆಟ್ಟಿಗೆ ಇರುವುದುಂಟವ್ರೊ ?

ಪ್ರಫುಲ್ಲೆ–ಹೌದು, ಇದೆ.

ವಿಠಲ–ನಿನ್ನೆರಾತ್ರಿ ನಾನು ಒಂದು ಮೊಕದ್ದಮೆಯ ಪತ್ತೆಗೆ ಪ್ರವರ್ತಿಸಿದ್ದೆ. ಆಗ ಇಲ್ಲಿಗೆ ಸ್ವಲ್ಪದೂರದಲ್ಲಿ ಇಬ್ಬರನ್ನು ಕಂಡೆನು. ಒಬ್ಬನು ಎತ್ತರ, ಮತ್ತೊಬ್ಬ ಕುಳ್ಳು. ಅವರು ಪರಸ್ಪರ ಪಿಸುಮಾತಿನಲ್ಲಿ–‘ ಈಗ ಎಲ್ಲಾ ಅನುಕೂಲಿಸಿತು. ನಿಧಿಯೇ ಕೈಸೇರಿತು. ’ ಎಂದುದು ಸಮೀಪಸ್ಥನಾದ ನನಗೆ ಚೆನ್ನಾಗಿ ಕೇಳಿಸಿತು. ಇದರ ಮೂಲವನ್ನು ತಿಳಿಯಲು ನನಗೆ ತುಂಬ ಕುತೂಹಲ ಹುಟ್ಟಿತು. ನಾನು ಆಗ ಒಬ್ಬ ಕೂಲಿಯ ವೇಷವನ್ನು ಧರಿಸಿದ್ದೆನು. ನಾನಿನ್ನೂ ಸಮೀಪಿಸಲು ನಿನ್ನ ಹೆಸರು ಕೇಳಿಸಿತು. ಮತ್ತು ಪಚ್ಚೆಯ ಪೆಟ್ಟಿಗೆಯನ್ನು ಪಡೆಯಬೇಕಾದರೆ ಮೊದಲು ನಿನ್ನನ್ನು ನಿರ್ಮೂಲಮಾಡಬೇಕೆಂದು ಅಂದುಕೊಂಡುದನ್ನೂ ಕೇಳಿದೆನು. ಅವರು ದೊಡ್ಡ ಮನುಷ್ಯರಂತೆ ಉಡುಪನ್ನು ಧರಿಸಿದ್ದರು. ಅವರು ನನಗೆ ಕೇವಲ ಹೊಸಬರು. ನಿನ್ನಿಂದ ನಿಜಸ್ಥಿತಿಯೆಲ್ಲ ತಿಳಿದೀತೆಂದು ಭಾವಿಸಿದ್ದೆನು. ಅಂತು ನಿನಗೆ ಹಗೆಗಳಿರುವುದೇನೋ ಖಂಡಿತ. ಆ ಇಬ್ಬರಲ್ಲಿ ಯಾವನೊಬ್ಬನನ್ನಾದರೂ ನೀನು ಬಲ್ಲೆಯಾ ?

ಪ್ರಫುಲ್ಲೆ–ವಿಠಲ, ಅವರಿಬ್ಬರನ್ನೂ ಬಲ್ಲೆ. ಹೆಸರು ನನಗೆ ಗೊತ್ತಿಲ್ಲ. ಈಗತಾನೇ ಒಂದಾಶ್ಚರ್ಯಕೃತ್ಯ ನಡೆದಿದೆ. ನೀನು ದಯವಿಟ್ಟು ಕೇಳಿದರೆ ನನ್ನದೊಂದು ಕಥೆಯನ್ನೇ ಹೇಳುತ್ತೇನೆ. ನನ್ನ ತೊಂದರೆಯನ್ನು ಪರಿಹರಿಸಲು ನೀನು ಒತ್ತಾಸೆಯಾಗಬೇಕು.

ವಿಠಲ—ಆಗಲಿಯಮ್ಮ, ಸಂತೋಷವಾಗಿ ನಿನಗೆ ಸಹಾಯ ಮಾಡುತ್ತೇನೆ.

ಈಗ ಪ್ರಫುಲ್ಲೆಯು ಶಾಂತಳಾದಳು. ಮುಖವು ಸ್ವಲ್ಪ ಕಳೆಗುಂದಿತು ಸುಂದರವಾದ ತನ್ನ ಗುಂಗುರುಕೂದಲುಗಳನ್ನು ಕರಾಂಗುಳಿಗಳಿಂದ ನೇವರಿಸಿ ಕೊಂಡಳು. ತರುವಾಯ ಸ್ವಲ್ಪ ಹೊತ್ತು ಮೌನವಾಗಿದ್ದು ಕಡೆಗೆ ತನ್ನ ಕಥೆ ಯನ್ನು ಹೇಳತೊಡಗಿದಳು.—ನನ್ನ ಕಥೆ ವಿಚಿತ್ರವಾಗಿದೆ. ನನಗೆ ಬುದ್ಧಿವಾದ ಹೇಳಲು ಯಾರೂ ದಿಕ್ಕಿಲ್ಲ. ಬಾಲ್ಯದಲ್ಲೇ ತಾಯ್ತಂದೆಗಳು ಸ್ವರ್ಗಸ್ಥರಾದರು. ಸಹೋದರನು ಮಿತ್ರಮಂಡಲಿಯನ್ನು ಕಟ್ಟಿಕೊಂಡು ಊರೂರೂ ಸುತ್ತುತ್ತಿರು ವನು. ಆಪ್ತರಾದ ಬಂಧುಗಳು ಯಾರೂ ಹತ್ತಿರದಲ್ಲಿಲ್ಲ. ಎಲ್ಲಕ್ಕೂ ನಾನೊಬ್ಬಳೇ. ನೀನೇ ನನ್ನ ಆಪದ್ಬಂಧು. ಹೋದವರ್ಷದ ವಸಂತಕಾಲದಲ್ಲಿ ನಾನು ವಿಹಾರ ಕ್ಕೋಸ್ಕರ ಚೈತ್ರಕವೆಂಬ ಆರೋಗ್ಯಸ್ಥಾನಕ್ಕೆ ಹೋಗಿದ್ದೆ. ಅಲ್ಲಿಗೆ ಲಲಿತಪಟ್ಟಣ ದಿಂದ ಪ್ರಸಿದ್ಧನಾದ ಚಾರುಚಂದ್ರನ ಕಿರೀಮಗ ಕಾಂತನಾಥನೂ ಬಂದಿ ದ್ದನು. ಆತನಿಗೂ ನನಗೂ ಅಕಸ್ಮಾತ್ತಾಗಿ ಪರಿಚಯವುಂಟಾಯಿತು. ಕ್ರಮೇಣ ಮೈತ್ರಿಯೂ ಬೆಳೆಯಿತು. ಕಡೆಗೆ ನಾನೂ ಆತನೂ ಲಗ್ನವಾಗಬೇಕೆಂದೂ ಅದೂ ಆ ಚೈತ್ರಮಾಸದಲ್ಲೇ ನಡೆಯಬೇಕೆಂದೂ ಗೊತ್ತಾಯಿತು. ಆದರೆ ಕಾಂತನಾಥ ನಿಗೆ ಅವರ ಊರಿನಿಂದ ತಂತೀವರ್ತಮಾನ ಬಂದುದರಿಂದ ಥಟ್ಟನೆ ಆತನು ಅಲ್ಲಿಗೆ ಹೊರಡಬೇಕಾಯಿತು. ಬಳಿಕ ಬಹುದಿನಗಳವರೆಗೂ ಆತನು ಈ ಪ್ರಾಂತ ಬರ ಲೇ ಇಲ್ಲ. ಆದರೂ ತಪ್ಪದೆ ಆಗಾಗ್ಗ ನನಗೆ ಕಾಗದ ಬರೆಯುತ್ತಿದ್ದನು. ಕಡೆಯ ಕಾಗದವನ್ನು ಕಂಡಾಗ ಮಾತ್ರ ನನ್ನ ಮನಸ್ಸು ಕೇವಲ ಕ್ಷುಭಿತವಾಯಿತು. ಆತನು ಪ್ರಬಲವಾದ ವ್ಯಾಧಿಯಿಂದ ಪೀಡಿತನಾಗಿದ್ದಾನೆಂದು ಅದರಿಂದ ತಿಳಿ ಯಿತು. ಅದರ ಮರುದಿನ ಎತ್ತರವಾದೊಬ್ಬನು ನನ್ನ ಬಳಿಗೆ ಬಂದು ತಾನೂ ಕಾಂತನಾಥನ ಪರಮಾಪ್ತಮಿತ್ರನೆಂತಲೂ, ಕಾಂತನು ಈ ನವನಗರಿಗೆ ಬಂದಿ ರುವುದಾಗಿಯೂ ಆತನು (ಕಾಂತನು) ಕ್ಷಯಪೀಡಿತನಾಗಿ ಬದುಕುವಹಾಗಿಲ್ಲ ವೆಂತಲೂ ನನಗೆ ಅವನಲ್ಲಿ ಸಹಜವಾದ ಮಮತೆಯಿದ್ದರೆ ಇಂತಹ ಸಮಯದಲ್ಲಿ ತಿರಸ್ಕರಿಸದೆ ನಾನು ಆತನನ್ನು ಮದುವೆಯಾಗಬೇಕೆಂತಲೂ ತಾನೂ ಕಾಂತ ನಾಥನ ಮಿತ್ರಮಾತ್ರನಲ್ಲದೆ ಪುರೋಹಿತನೂ ಹೌದೆಂದೂ ಹೇಳಿ ಕಾಗದವನ್ನು ನನ್ನಕೈಗೆ ಕೊಟ್ಟನು. ಅದನ್ನು ನೋಡಿದರೆ ನನ್ನ ಪ್ರಾಣಾಪ್ತನಾದ ಕಾಂತ ನಾಥನ ಸ್ವಂತ ಅಕ್ಷರ. ಆಗ ನಾನೇನು ಮಾಡಬೇಕು? ನಾನು ಬಲು ದುಡುಕು

ಹುಡುಗಿ. ಕಡೆಗೆ ನಾನು ವಿಧವೆಯಾದರೂ ಚಿಂತೆಯಿಲ್ಲ, ಹೇಗಾದರೂ ಕಾಂತ ನನ್ನು ಕಂಡು ಅವನ ಇಷ್ಟವನ್ನೀಡೇರಿಸಬೇಕೆಂದು ನಿಶ್ಚಯಿಸಿ ಎಲ್ಲಿಗಾದರೂ ಯಾವಾಗಬೇಕಾದರೂ ಬಂದು ಆತನನ್ನು ಲಗ್ನವಾಡಿಕೊಳ್ಳುತ್ತೇನೆಂದು ವಾಗ್ದಾನ ಮಾಡಿಬಿಟ್ಟೆ. ಇದನ್ನು ಕೇಳಿ ಆ ಬಂದಿದ್ದಾತನು ತಾನೂ ಕಾಂತ ನಾಥನೂ ಮತ್ತೊಬ್ಬ ಗೆಳೆಯನೂ ಮರುದಿನ ರಾತ್ರಿ ಬರುವುದಾಗಿಯೂ ಆಗ್ಗೆ ನಾನೂ ಅವರ ಸಂಗಡ ಹೊರಟು ಯಾವುದಾದರೊಂದು ಉದ್ಯಾನದಲ್ಲಿ ಲಗ್ನ ಮಾಡಿಕೊಂಡು ಬರಬೇಕೆಂದೂ ಗೊತ್ತಾಯಿತು. ಅದರಂತೆಯೇ ಆ ರಾತ್ರಿ ಹನ್ನೊಂದು ಘಂಟೆಗೆ ನಮ್ಮ ಬಂಗಲೆಯ ಮುಂದೆ ಸಾರೋಟು ಬಂದು ನಿಂ ತಿತು. ಹಿಂದಿನ ದಿನ ಬಂದಿದ್ದವನೇ ನನ್ನನ್ನು ಬಂದು ಕರೆದನು. ನಾನು ಹೋಗಿ ಕಾಂತನನ್ನು ಕಂಡೆನು. ಆದರೆ ಅಯ್ಯೋ ! ತುಂಬ ಕೃಶವಾಗಿ ಬಿಟ್ಟಿ ದ್ದನು. ಮುಖದಲ್ಲಿ ಕಳೆಯೇ ಇರಲಿಲ್ಲ. ಸುತರಾಂ ಅಶಕ್ತ. ಗಟ್ಟಿಯಾಗಿ ನಾನು ಮಾತಾಡಿಸಿ ನೋಡಿದೆ. ಮಾತನಾಡುವುದಕ್ಕೂ ಆಗುತ್ತಿರಲಿಲ್ಲ. ಉಸಿ ರುಕಟ್ಟಿಕೊಳ್ಳುತ್ತಿದ್ದಿತು. ಆದರೂ ನಾನು ಕೇಳಿದ್ದಕ್ಕೆಲ್ಲ ಆತನು ತಾನು ಎಲ್ಲಾ ಸರಿಮಾಡಿರುವುದಾಗಿಯೂ ನಾನು ಆ ಪುರೋಹಿತನು ಹೇಳಿದಂತೆ ಕೇಳಬೇ ಕೆಂದೂ ಉತ್ತರಕೊಟ್ಟನು.

ಈ ರೀತಿಯಾಗಿ ಪ್ರಫುಲ್ಲೆಯು ತನ್ನ ವಿವಾಹ, ಕಾಂತನ ಮರಣ, ಪೆಟ್ಟಿಗೆ ಬಂದ ಬಗೆ, ಇವನ್ನೆಲ್ಲ ವಿಸ್ತಾರವಾಗಿ ತಿಳಿಸಿ ಕಟ್ಟಕಡೆಗೆ—ಅಯ್ಯ, ನನ್ನ ಕಾಂತನ ಶವವನ್ನು ಎಲ್ಲಿಗೆ ಕೊಂಡುಹೋದರೆಂಬುದಾಗಲಿ ಆ ಇಬ್ಬರು ಎಲ್ಲಿರುವರೆಂಬು ದಾಗಲಿ ನನಗೆ ತಿಳಿಯದು. ನನಗೆ ಕಾಂತನಾಥನ ಸಂಗಡ ಶಾಸ್ತ್ರೋಕ್ತ ವಾಗಿ ಮದುವೆಯಾಯಿತೇ ಎಂಬುದೂ ತೋರದು. ಅಂತು ಏನೋ ಒಂದು ನಿಧವಾದ ಹತ್ಯೆಯು ನಡೆದಿರಬೇಕು. ನನಗೆ ಉನ್ಮಾದ ಉಂಟಾಗುತ್ತಿದೆ. ಇದರ ತತ್ವವೇ ಗೊತ್ತಾಗದು. ಅಯ್ಯ ವಿಠಲಮೂರ್ತಿ, ನನ್ನನ್ನು ರಕ್ಷಿಸು, ಎಂದು ಗೋಳಿಡುತ್ತ ಆತನ ಕಾಲಮೇಲೆ ಬಿದ್ದಳು.

ವಿಠಲನು ಈ ಕಥೆಯನ್ನೆಲ್ಲ ಕೇಳುತ್ತ ಮೌನವಾಗಿ ನಿಂತಿದ್ದನು. ಆತನ ಮುಖದಲ್ಲಿ ವಾತ್ಸಲ್ಯರಸವು ತಾನೇತಾನಾಗಿದ್ದಿತು. ಪ್ರಫುಲ್ಲೆಯನ್ನು ತನ್ನ ಸಾಕ್ಷಾತ್ತಾದ ಮಗಳೆಂದೇ ಭಾವಿಸಿಕೊಂಡು—ಮಗೂ, ನೀನು ಶಂಕಿಸಬೇಡ,

ನೀನು ಹೇಳುವುದೆಲ್ಲ ಅದ್ಭುತವಾಗಿದೆ. ಆದರೂ ನಾನು ನಿನ್ನನ್ನು ನಂಬುತ್ತೇನೆ. ಇದರ ರಹಸ್ಯವು ತಿಳಿಯುವುದು ಬಹು ಕಷ್ಟ. ಆಗಲಿ ಪತ್ತೆಮಾಡುತ್ತೇನೆ. ನೀನು ಎದೆಗುಂದಬೇಡ. ನಮ್ಮ ಶಾಸ್ತ್ರರೀತಿಯಾಗಿ ಪುಷ್ಪಮಾಲಾ ಸಂಬಂಧದಿಂದ ನಿನಗೆ ಲಗ್ನವಾಗಿರುವುದರಿಂದ ನೀನೇನೋ ಕಾಂತನಾಥನ ಕುಟುಂಬವೇ. ಸಂಶಯವೇ ಇಲ್ಲ. ಮತ್ತು ಆತನ ಸ್ವತ್ತಿಗೆಲ್ಲ ನೀನೇ ಹಕ್ಕುದಾರಳು. ಆದರೆ ನಿನ್ನ ಪತಿಯು ಅಪ್ಪಣೆಗೆ ವಿರೋಧವಾಗಿ ನೀನು ಆ ಪೆಟ್ಟಿಗೆಯನ್ನು ತೆರೆಯಬಾರದು.

ಪ್ರಫುಲ್ಲೆ—ಒಂದು ವರ್ಷದವರೆಗೂ ತೆರೆಯಕೂಡದಂತೆ.

ವಿಠಲ—ಆಗಬಹುದು. ಕಾಂತನಾಥನ ಅಕಾಲಮರಣದ ವಿಷಯವಾಗಿ ನಿನಗೆ ಯಾರಮೇಲಾದರೂ ಅನುಮಾನವುಂಟೊ ?

ಪ್ರಫುಲ್ಲೆ—ಅದನ್ನು ಹೇಳುವುದು ಕಷ್ಟ. ಅವರ ಮನೆಯವರ ಮೂಲಕ ತಿಳಿಯಬೇಕು. ವಿಠಲ, ಈ ಪೆಟ್ಟಿಗೆಯು ನಿನ್ನಲ್ಲಿರುವುದುತ್ತಮವೆಂದು ತೋರುವುದು.

ವಿಠಲ—ಅಮ್ಮ, ನೀನು ಹೇಳುವುದನ್ನೆಲ್ಲ ನಾನು ಮಾಡುತ್ತೇನೆ. ನೀನೇನೋ ಮೋಸಹೋಗಿದ್ದೀಯೆ. ಈಗ ಆ ಪುರೋಹಿತನನ್ನೂ ಅವನ ಸಖನನ್ನೂ ಪತ್ತೆಮಾಡಬೇಕಾಗಿದೆ. ಅವರು ಮಾತಾಡಿಕೊಂಡುದನ್ನು ನಾನು ಹೊಂಚಿ ಕೇಳಿರುವುದೊಂದು ಅದೃಷ್ಟವೇ ಆಯಿತು. ಮಗು, ನೀನು ಈಗ ಬಲು ಎಚ್ಚರಿಕೆಯಿಂದಿರಬೇಕು. ಒಬ್ಬಳೇ ಹೊರಕ್ಕೆ ಹೋಗಬೇಡ. ಎಲ್ಲಿ, ಪೆಟ್ಟಿಗೆಯನ್ನು ಕೊಡು. ನಾನು ಹೊರಡುತ್ತೇನೆ.

ಪ್ರಫುಲ್ಲೆಯು ಮರಕತಮಂಜೂಷೆಯನ್ನು ತಂದುಕೊಟ್ಟಳು. ವಿಠಲನು ಮರುದಿನ ಪುನಃ ಬರುವುದಾಗಿ ಹೇಳಿ ಹೋದನು. ವಿಠಲನು ತನ್ನ ಆಫೀಸಿಗೆ ಹೋಗಿ ಈ ಪೆಟ್ಟಿಗೆಯನ್ನು ಮೇಜಿನಮೇಲಿಟ್ಟು ಹೊರಮುಚ್ಚಳವನ್ನು ತೆರೆದು ಒಳಗಿದ್ದ ಪುಟ್ಟ ಪಚ್ಚೆಯ ಪೆಟ್ಟಿಗೆಯನ್ನು ಹೊರಕ್ಕೆ ತೆಗೆದನು. ವಿಠಲನು ತನ್ನ ಕೆಲಸದ ಸಹಾಯಕ್ಕಾಗಿ ಅನುಭವಶಾಲಿಯಾದ ನಟೇಶನೆಂಬೊಬ್ಬ ಪತ್ತೇದಾರನನ್ನು ನೇಮಿಸಿಕೊಂಡಿದ್ದನು. ಆತನಿಗೆ ಸುಮಾರು ಅರವತ್ತೈದುವರ್ಷ. ಆದರೂ

ಕೇವಲ ಶಕ್ತ ಮತ್ತು ಮೇಧಾವಿ ಆತನು ವಿಶಾಲದೇಶದವನು. ತನ್ನ ವಯಸ್ಸಿನಲ್ಲಿ ಅಲ್ಲಿ ಪತ್ತೇದಾರನಾಗಿದ್ದು ವಿಶೇಷ ಪ್ರಖ್ಯಾತನಾಗಿದ್ದವನು. ಮತ್ತು ಒಟ್ಟು ಈ ಭೂಗೋಳವನ್ನೆಲ್ಲ ಸಂಚರಿಸಿ ಬಂದಿದ್ದವನು. ಆತನು ಸ್ವವಿಷಯವನ್ನು ಯಾರಮುಂದೆಯೂ ಜಂಭ ಹೇಳಿಕೊಳ್ಳತಕ್ಕವನಲ್ಲ. ಯಜಮಾನ ವಿಠಲನಿಗೆ ಹೊರತು ಇಲ್ಲಿ ಮತ್ತಾರಿಗೂ ಅವನ ವಿಷಯ ಗೊತ್ತಿಲ್ಲ. ವಿಠಲನು ಯಾವ ಮೊಖದ್ದಮೆಯಲ್ಲೂ ನಟೇಶನ ಸಲಹೆಯನ್ನು ಪಡೆಯದೆ ಇರುತ್ತಿರಲಿಲ್ಲ. ಈದಿನವೂ ವಿಠಲನು ಪಟ್ಟಿಯ ಸಂದೂಕವನ್ನು ಆತನ ಮುಂದಿಡಲು ನಟೇಶನು ಚೆನ್ನಾಗಿ ನೋಡಿ ತುಂಬ ಗಾಬರಿಗೊಂಡು ತರುವಾಯ—ಓಹೊ! ಇದನ್ನು ಮೊದಲೇ ನೋಡಿದೇನೆ. ಇದು ನಿನಗೆಲ್ಲಿ ಬಂದಿತು? ಅಬ್ಬಬ್ಬಾ! ಇದು ಮಹಾ ಅದ್ಭುತವಾದುದು. ಮಹಾ ಮೋಸಗಾರಪೆಟ್ಟಿಗೆ. ವಿಠಲ, ಅದು ಅನೇಕರ ಪ್ರಾಣವನ್ನು ಆಹುತಿ ತೆಗೆದುಕೊಂಡಿದೆ. ನನ್ನ ಪ್ರಾಣಕ್ಕೂ ಮೃತ್ಯುಸ್ವರೂಪವಾಗುತಿದ್ದಿತು. ವಿಠಲ! ವಿಠಲ! ಮೊದಲು ಇದನ್ನು ತೊಲಗಿಸು.

ವಿಠಲ—ಏನು, ನೀನು ನಕಲಿಮಾಡುತ್ತೀಯೊ?

ನಟೇಶ—ಇಲ್ಲ, ಇಲ್ಲ. ವಿಠಲ, ಇದು ಒಂದಾನೊಂದು ಕಾಲದಲ್ಲಿ ನನ್ನ ವಶದಲ್ಲೂ ಇದ್ದಿತು.

ವಿಠಲ—ನೀನು ತಪ್ಪು ತಿಳಿದುಕೊಂಡಿರಬಾರದೇನು? ಇಂತಹುದೇ ಇನ್ನೊಂದು ಪೆಟ್ಟಿಗೆಯನ್ನು ನೀನು ನೋಡಿರಬಹುದಲ್ಲಾ!

ನಟೇಶ—ಹಾಗಲ್ಲ. ಇದು ಈಗ್ಗೆ ಸ್ವಲ್ಪಕಾಲಕ್ಕೆ ಮುಂಚೆ ನಮ್ಮದೇಶದ ಚಾರುಚಂದ್ರನಲ್ಲಿದ್ದಿತು. ಆಗ ಇದಕ್ಕೆ ಬಹುಜನರು ಬಲಿಯಾದರು

ವಿಠಲನು ಪ್ರಫುಲ್ಲಳ ಕಥೆಯನ್ನು ಮೊದಲಿಂದ ಹೇಳಿ ಮುಗಿಸಿ ಬಳಿಕ—ಆಯ್ಯಾ, ಈಗ ಇದರ ವಿಷಯದಲ್ಲಿ ನಿನಗೆ ತಿಳಿದಿರುವುವನ್ನೆಲ್ಲಾ ಹೇಳು, ಎಂದನು.

ನಟೇಶನು ಎಲ್ಲವನ್ನೂ ಜ್ಞಾಪಿಸಿಕೊಂಡು—ವಿಠಲ, ಕೇಳು. ಈಗ್ಗೆ ನಲವತ್ತು ವರ್ಷದಲ್ಲಿ ಚಾರುಚಂದ್ರನ ಪ್ರಪಿತಾಮಹನು ಮಳಯಾಳಕ್ಕೆ ಹೋಗಿ ಅಲ್ಲಿ ಯಕ್ಷಿಣೀವಿದ್ಯೆ, ಮಾಟಕೂಟಗಳು ಮುಂತಾದುವನ್ನೆಲ್ಲ ಕಲಿತನು. ಕಡೆಗೆ ಮನುಷ್ಯರನ್ನು ಮೃಗಗಳನ್ನಾಗಿ ಅಥವಾ ಪಕ್ಷಿಗಳನ್ನಾಗಿ ಕೂಡ ಮಾಡಬಲ್ಲವ

ನಾದನು. ಆಗ್ಗೆ ಅವನಿಗೆ ಎಂಭತ್ತು ವಯಸ್ಸಂತೆ. ಆದರೂ ಮೂವತ್ತು ವರ್ಷದವನಂತೆಯೇ ಕಾಣುತ್ತಿದ್ದನು. ಅಲ್ಲಿಂದ ನೀಲಗಿರಿ ಪ್ರಾಂತ್ಯಕ್ಕೆ ಹೋಗಿ ಕಾಡುಜನರ ಜತೆಯಲ್ಲೇ ಬಹುಕಾಲವಿದ್ದು ಅವರಿಂದಲೂ ಅನೇಕ ಮುಖ್ಯವಿಷ ಯಗಳನ್ನು ಕಲಿತುಕೊಂಡುದಲ್ಲದೆ ಅವರಲ್ಲೆ ಒಬ್ಬ ಮಂತ್ರಗಾತಿಯನ್ನು ಮದುವೆ ಯಾದನು. ಒಂದು ದಿನ ಅವನು ಆಕಸ್ಮಾತ್ತಾಗಿ ಆ ಬೆಟ್ಟದ ಗಡಿಯನ್ನು ಮೀರಿ ಹೊರಕ್ಕೆ ಬಂದುಬಿಟ್ಟನು. ಆಗ ಅವನು ಅಲ್ಲಿಂದ ತಂದ ಅಮೂಲ್ಯವಾದ ನಿಕ್ಷೇ ಪವೇ ಈ ಪೆಟ್ಟಿಗೆ. ಇದನ್ನು ಒಬ್ಬ ಮುನೀಶ್ವರನು ಅವನಿಗೆ ಅನುಗ್ರಹಿಸಿದ್ದ ನಂತೆ. ಅವನು ಹಾಗೆ ಹೊರಟುಬಂದಮೇಲೆ ಆ ಕಾಡುಜನರು ಅವನನ್ನು ಎಲ್ಲೆಲ್ಲೋ ಹುಡುಕಿದರಂತೆ. ಚಾರುಚಂದ್ರನ ಪ್ರಪಿತಾಮಹನು ತನ್ನ ಊರಿನ ಬಳಿಯಣ ವನದಲ್ಲಿ ಆಶ್ರಮಮಾಡಿಕೊಂಡಿದ್ದನು. ಒಂದುದಿನ ನೋಡುವಲ್ಲಿ ಯಾರೋ ಅವನನ್ನು ಕೊಂದುಹಾಕಿದ್ದರು. ಎಷ್ಟು ಪ್ರಯತ್ನಪಟ್ಟರೂ ಅವರು ಯಾರೆಂಬುದು ಗೊತ್ತಾಗಲಿಲ್ಲ. ಆತನ ಕಾಗದಪತ್ರಗಳನ್ನೆಲ್ಲ ನೋಡುವಲ್ಲಿ ಒಂದು ಕಾಗದದ ಮೇಲೆ ಕೆಂಪುಮಸಿಯಿಂದ ಈ ಪಚ್ಚೆಯ ಪೆಟ್ಟಿಗೆಯ ವಿವರ ವನ್ನೂ ಇದು ಇಂತಹ ಸ್ಥಳದಲ್ಲಿದೆ ಎಂಬುದನ್ನೂ ಇದರ ಮಹಿಮೆಯನ್ನೂ ವಿಶದವಾಗಿ ಬರೆದಿತ್ತು. ತರುವಾಯ ಆತನ ಮಗನೇ ಇದಕ್ಕೆ ಹಕ್ಕುದಾರನಾ ದುದರಿಂದ ಈ ಪೆಟ್ಟಿಗೆಯನ್ನು ವಶಪಡಿಸಿಕೊಂಡನು. ಇದು ಕೈಸೇರಿದ ಆರು ತಿಂಗಳೊಳಗಾಗಿ ಅವನೂ ಕೊಲ್ಲಲ್ಪಟ್ಟನು. ಬಳಿಕ ಇದು ಅವನ ಮಗನ ವಶಕ್ಕೆ ಬಂದಿತು. ಅವನಿಗೂ ಅದೇ ಗತಿಯಾಯಿತು. ಪದೇಪದೆ ಅವನ ಮನೆತನದ ವರ ಕೊಲೆಯು ಯಾರಿಂದ ನಡೆಯುವುದೆಂಬುದನ್ನು ಪತ್ತೆಮಾಡುವುದಕ್ಕೋಸ್ಕರ ಆ ಮೊಕದ್ದಮೆಯು ನನ್ನವಶಕ್ಕೆ ಬಂದಿತು. ನಾನೂ ಎಷ್ಟೋ ಸಾಹಸಮಾಡಿ ದೆನು. ಎಲ್ಲೆಲ್ಲಿಂದಲೋ ಸಮಾಚಾರಗಳನ್ನು ತರಿಸಿಕೊಂಡೆನು. ಏನೇಮಾಡಿ ದರೂ ಪತ್ತೆಯ ಹೆಗ್ಗುರುತೂ ತಿಳಿಯಲಾಗಲಿಲ್ಲ. ನಾನು ಎಲ್ಲಿಗೆ ಹೋದರೂ ಯಾರೋ ನನ್ನ ಹಿಂದೆಯೇ ಇದ್ದಂತೆ ತೋರುತಿದ್ದಿತು. ನಾನು ಯಾವುದಕ್ಕೂ ಸಗ್ಗಿರಲಿಲ್ಲ. ಒಂದುದಿನ ಅದೇ ವನದಲ್ಲಿ ನಾನು ಸಂಚರಿಸುತಿದ್ದಾಗ ಯಾರೋ ನನ್ನನ್ನು ರೆಟ್ಟೆ ಹಿಡಿದು ಎಳೆದುಕೊಂಡು ಹೋದಂತಾಯಿತು. ಅಲ್ಲಿ ನೋಡಲು ಒಂದು ಬಂಡೆ ಅಲ್ಲಾಡುತಿದ್ದಿತು. ನಾನು ಅದನ್ನು ಎತ್ತಿ ನೋಡಲು ಅಲ್ಲಿ ಈ ಪಚ್ಚೆಯ ಸಂದೂಕವು ಪ್ರಕಾಶಿಸುತ್ತಿದ್ದಿತು. ಅದರಮೇಲೆ ಮೊದಲು ಕೆಂಪು

ಉರಿಯೂ ಬಳಿಕ ನೀಲದ ಉರಿಯೂ ಆಮೇಲೆ ವಿಶೇಷ ಹೊಗೆಯುಂಟಾಯಿತು. ನನಗೆ ಕೈಕಾಲು ನಡುಗಿತು ಸ್ತಬ್ಧನಾಗಿ ನಿಂತುಬಿಟ್ಟೆ. ಅನಂತರ ಈ ಪೆಟ್ಟಿಗೆಯ ಮೇಲೆ ಸ್ಪಷ್ಟವಾದ ಸುವರ್ಣಾಕ್ಷರಗಳು ಕಾಣಬಂದುವು. “ನನ್ನ ಅಪಾಯವನ್ನು ತಪ್ಪಿಸಿಕೊಂಡವರಿಗೆ ದೀರ್ಘಾಯುಸ್ಸನ್ನೂ ಅಷ್ಟೈಶ್ವರ್ಯವನ್ನೂ ಕೊಡುತ್ತೇನೆ,” ಎಂದು ಬರೆದಿದ್ದಿತು. ಆಗ ನನ್ನ ಕಾಲ ಬಳಿಯಲ್ಲಿ ಒಂದು ಕಾಗದವು ಬಿದ್ದಿತ್ತು. ಓದುವಲ್ಲಿ—“ಈ ಪೆಟ್ಟಿಗೆಯನ್ನು ಪಡೆದವನು ಒಂದು ವರ್ಷದವರೆಗೂ ಬದುಕಿದ್ದರೆ ಇದನ್ನು ತೆರೆಯಬಹುದು. ತರುವಾಯ ಏನೂ ಅಪಾಯವಿಲ್ಲ.” ಎಂದು ಬರೆದಿದ್ದಿತು. ಬಳಿಕ ಎಲ್ಲವೂ ಶಾಂತವಾಯಿತು. ನಾನು ಈ ಪೆಟ್ಟಿಗೆಯನ್ನು ಜೇಬಿನಲ್ಲಿಟ್ಟುಕೊಂಡು ತಂದುಬಿಟ್ಟೆನು. ಇದು ನನ್ನಲಿದ್ದಷ್ಟು ದಿನವೂ ನನಗೆ ಒಂದು ಕ್ಷಣವಾದರೂ ಮನಸ್ಸಮಾಧಾನವಿರಲಿಲ್ಲ. ದಿನಗಂಡ ಕ್ಷಣಗಂಡಗಳು ಸಂಭವಿಸುತಿದ್ದವು. ಅದನ್ನೆಲ್ಲಾ ನೋಡಿ ನೋಡಿ ಬೇಸತ್ತು ನಾನು ಇದನ್ನು ಆಗ ಮೃತನಾಗಿದ್ದವನ ಸಹೋದರನ ವಶಕ್ಕೇ ಕೊಟ್ಟುಬಿಟ್ಟು ಆ ಮೊಕದ್ದಮೆಯನ್ನು ಬಿಟ್ಟುಬಿಟ್ಟೆನು. ಅಲ್ಲದೆ ನಾನು ಈ ಸೀಮೆಗೆ ಹೊರಟು ಬಂದುಬಿಟ್ಟೆ. ಈಚೆಗೆ ವಿಚಾರಿಸುವಲ್ಲಿ ಆತನೂ ಇನ್ನಿಬ್ಬರು ಹಕ್ಕುದಾರರೂ ಹಾಗೆಯೇ ಕೊಲ್ಲಲ್ಪಟ್ಟರೆಂದು ಗೊತ್ತಾಗಿದೆ. ಪ್ರಕೃತದಲ್ಲಿ ಕಾಂತನಾಥನ ತಂದೆ ಜೀವಿಸಿದ್ದಾನೆ. ಆತನು ಬದುಕಿರುವಾಗಲೇ ಈ ಪೆಟ್ಟಿಗೆಯು ಕಾಂತನಾಥನ ಕೈ ಸೇರಿದುದಕ್ಕೆ ಕಾರಣವೇನೋ ಗೊತ್ತಿಲ್ಲ. ಅಂತು ಅವನೂ ಉಳಿಯಲಿಲ್ಲ. ಇದರ ಮಹಿಮೆಯನ್ನು ನೋಡಿದೆಯೊ ?

ಹೀಗೆ ಹೇಳುವಾಗ ನಟೇಶನು ನಡುಗಿದನು. ಮುಖವು ಕೆಂಪೇರಿತು ಕೇವಲ ಭಯಗ್ರಸ್ತನಾದನು. ಇದನ್ನು ಕೇಳಿ ವಿಠಲನೂ ಸ್ವಲ್ಪ ಮಟ್ಟಿಗೆ ಪಂಚಾಕ್ಷರಿಯನ್ನು ಜಪಿಸುವಂತಾಯಿತಾದರೂ ಅವನು ದೃಢಪ್ರತಿಜ್ಞೆಯಿಂದ— ನಟೇಶ, ಈ ಪೆಟ್ಟಿಗೆ ಒಳ್ಳೆಯದಾದರೂ ಆಗಲಿ ಕೆಟ್ಟದ್ದಾದರೂ ಆಗಲಿ, ಅಂತು ಈ ಮೊಕದ್ದಮೆಯನ್ನೇನೋ ನಾನು ನಡೆಸದೆ ಬಿಡುವುದಿಲ್ಲ. ಇದರಿಂದ ಬೇಕಾದುದಾಗಲಿ. ಆ ಅನಾಥಬಾಲಕೆಯನ್ನು ಕಾಪಾಡುವುದೇ ಸಿದ್ಧ. ಇದೊಂದನ್ನೂ ಮನಸ್ಸಿಗೆ ಹತ್ತಿಸಿಕೊಳ್ಳುವುದಿಲ್ಲ. ಇದೆಲ್ಲ ಮೂಢಭಕ್ತಿಯಿಂದುಂಟಾ

ಗುವ ಹೆದರಿಕೆ ಮತ್ತು ಹೇಡಿತನ, ಎಂದನು. ಅನಂತರ ಭಯಂಕರವಾದ ಇನ್ನೊಂದು ಸಂಗತಿ ನಡೆಯಿತು.

---

## ಮೂರನೆಯ ಪರಿಚ್ಛೇದ

ವಿಠಲಮೂರ್ತಿಯು ಪೆಟ್ಟಿಗೆಯ ಮುಚ್ಚಳವನ್ನು ತೆರೆಯುವುದಕ್ಕೆ ಕೈ ನೀಡಲು ಆ ಪೆಟ್ಟಿಗೆಯೊಳಗಿನಿಂದ ಥಟ್ಟನೆ ಹೊಗೆ ಹೊರಟಿತು. ಈ ಇಬ್ಬರೂ ಪತ್ತೆದಾರರಿಗೂ ಏನೂ ತೋರದೆ ಭ್ರಾಂತರಾಗಿ ನಿಂತರು. ಕೆಲವು ನಿಮಿಷಗಳವರೆಗೆ ಅಷ್ಟರಿನ ಕಟ್ಟಡವೆಲ್ಲಾ ಕತ್ತಲೆಯಾಯಿತು. ಬಳಿಕ ಪೆಟ್ಟಿಗೆಯೊಳಗಿನಿಂದ ಉತ್ತಮ ಪ್ರಕಾಶದ ಕಿರಣಗಳು ಹೊರಡತೊಡಗಿದವು. ಮಧ್ಯದಲ್ಲಿ ಅಕ್ಷರಗಳು ಕಾಣಬಂದವು. ಮೊದಲು ಅವು ಅಷ್ಟು ಸ್ಫುಟವಾಗಿರಲಿಲ್ಲ. ತರುವಾಯ ನೋಡಲು' ನೀವು ಹುಡುಕಿ, ಪತ್ತೆಯಾಗುವುದು ' ಎಂದು ಕಾಣಿಸಿತು. ಕೂಡಲೆ ಆ ಬರವಣಿಗೆ ಮಾಯವಾಗಿ ಹೊಗೆ ನಿಂತಿತು. ವಿಠಲನು ಮಂಜೂಷೆಯನ್ನು ಮುಚ್ಚಿ ಅದನ್ನು ಕಬ್ಬಿಣದ ಪೆಟ್ಟಿಗೆ (Iron safe) ಯಲ್ಲಿಟ್ಟನು. ಹೇಗೂ ತನ್ನ ಸಾಹಸವನ್ನೆಲ್ಲಾ ವೆಚ್ಚಮಾಡಿ ಇದರ ತತ್ವವನ್ನು ಕಂಡುಹಿಡಿಯುವುದಾಗಿ ದೃಢಪ್ರತಿಜ್ಞೆ ಮಾಡಿದನು. ತರುವಾಯ ಪತ್ತೆಗೆ ಪ್ರಾರಂಭಿಸಿದನು. ಮೊಟ್ಟಮೊದಲು ಶವವಾಹಕರನ್ನೆಲ್ಲ ವಿಚಾರಿಸುತ್ತ ಬಂದನು. ಯಾಕೆಂದರೆ—ಆ ಕಾಂತನಾಥನ ಶವವನ್ನು ನವನಗರದ ಬಳಿಯಲ್ಲಿ ಎಲ್ಲಿ ಹೂತಿರುವರೆಂಬುದು ಮೊದಲು ತಿಳಿಯಬೇಕಾಗಿದ್ದಿತು. ಹೇಗೂ ಅದು ಗೊತ್ತಾಗಲಿಲ್ಲ. ಕಡೆಗೆ ಕಾಂತನಾಥನ ತಂದೆಯಾದ ಚಾರುಚಂದ್ರನಿಗೇ ತಂತೀ ಕೊಟ್ಟು ಕೇಳುವಲ್ಲಿ ಆತನು ಕಾಂತನಾಥನು ನವನಗರಿಯಲ್ಲಿ ಸತ್ತುಹೋದಂತೆಯೂ ಅವನ ಶವವನ್ನು ಪಾಲಪಾಣಿಯೆಂಬೂರಿನ ಸ್ಮಶಾನದಲ್ಲಿ ಹೂತಿರುವುದಾಗಿಯೂ ತನಗೆ ಸಮಾಚಾರ ಬಂದಿರುವುದೆಂದು ತಿಳಿಸಿದನು.

ಈಗ ವಿಠಲನು ಪಾಲಪಾಣಿಗೆ ಹೋಗಿ ಅಲ್ಲಿನ ಜನನಮರಣದ ರಿಜಸ್ಟ ರನ್ನು ಹುಡುಕಿಸಿ ನೋಡುವಲ್ಲಿ ಕಾಂತನಾಥನು ಸತ್ತದಿನವೇ ಕ್ಷಯರೋಗ ದಿಂದ ಅಲ್ಲಿ ಒಂದು ಮರಣ ನಡೆದಂತೆ ದಾಖಲೆ ದೊರೆಯಿತು. ಆದರೆ ಹಾಗೆ ಸತ್ತವನು ಒಬ್ಬ ಮುದುಕಿಯ ಭೋಜನಶಾಲೆ (Hotel) ಯಲ್ಲಿ ವಾಸವಾಗಿದ್ದ ನೆಂದಿದ್ದಿತು. ವಿಠಲನು ಆ ಮುದುಕಿಯನ್ನು ವಿಚಾರಿಸುವಲ್ಲಿ ಅವಳು ತನ್ನ ಸತ್ರವನ್ನು ಸ್ಥಾಪಿಸಿದಂದಿನಿಂದಲೂ ಎಂದೂ ಯಾರೂ ತನ್ನ ಮನೆಗೆ ಬಂದು ಸತ್ತದ್ದಿಲ್ಲವೆಂದು ತಿಳಿಸಿದಳು. ಅಲ್ಲದೆ ಆ ರಿಜಸ್ಟರಿನಲ್ಲ ವೈದ್ಯನ ಮತ್ತು ವಾಹಕರ ಕೈ ರುಜುವುಗಳೆಲ್ಲ ಒಂದೇವಿಧವಾಗಿದ್ದುದರಿಂದ ವಿಠಲನ ಸಂಶ ಯವು ಇನ್ನೂ ರೂಢಮೂಲವಾಯಿತು. ವಿಠಲನು ಪತ್ತೇದಾರಿ ಹುದ್ದೆಗೆ ಬಂದ ಎಷ್ಟೋ ವರ್ಷಗಳಿಂದ ಯಾವ ವ್ಯವಹಾರದಲ್ಲೂ ಎಂದೂ ರುಜುವಾತು ಸಿಕ್ಕುವುದಕ್ಕೆ ಇಷ್ಟು ಕಷ್ಟವಾಗಿರಲಿಲ್ಲ. ಆದರೂ ಇವನು ನಿರಾಶೆಯಾಗಿ ಕುಳ್ಳಿರಲಿಲ್ಲ. ಅಲ್ಲಿ ಗೋರಿ ಅಗೆಯುತಕ್ಕವರನ್ನೆಲ್ಲ ಗುಟ್ಟಾಗಿ ವಿಚಾರಿಸುತ್ತ ಬರಲು ಆ ಶವವನ್ನು ಹೂಳುವಾಗ ಇಬ್ಬರು ಗಂಡಸರು ಬಂದಿದ್ದಂತೆಯೂ ಅಗೆಯುತಕ್ಕವರಿಗೆ ಕೈತುಂಬ ದಕ್ಷಿಣೆ ಬಿದ್ದಿತೆಂದೂ ಶವವನ್ನು ತಂದಿದ್ದ ಪೆಟ್ಟಿಗೆ ಯನ್ನೇ ಹೂತುಬಿಟ್ಟರೆಂದೂ ಅಂದಿನಿಂದ ಎಂದೂ ಆ ಇಬ್ಬರನ್ನೂ ಕಾಣಲಿಲ್ಲ ವೆಂದೂ ತಿಳಿಯಬಂದಿತು. ಅವರು ಆ ಪಾಲಪಾಣಿಯ ಜನಗಳನ್ನೆಲ್ಲ ಮರುಳು ಮಾಡಿ ಈ ಕೃತ್ಯವನ್ನು ಹೇಗೆ ನಡೆಸಿದರೆಂಬ ವಿಷಯವಾಗಿ ಎಷ್ಟೆಷ್ಟೋ ಯೋಚಿ ಸಿದರೂ ಏನೂ ಬಗೆ ಹರಿಯಲಿಲ್ಲ. ಕಡೆಗೆ ತನ್ನ ಯುಕ್ತಿ ಶಕ್ತಿಗಳನ್ನೆಲ್ಲ ವೆಚ್ಚ ಮಾಡಿ ಆ ಶವವನ್ನು ಹೊರವೆಗೆಯಬಹುದೆಂದು ಸರ್ಕಾರದಿಂದ ನಿರೂಪವನ್ನು ಪಡೆದನು. ಬಳಿಕ ಪ್ರಫುಲ್ಲೆಯನ್ನೂ ನಟೇಶನನ್ನೂ ಅಲ್ಲಿಗೆ ಕರೆಯಿಸಿಕೊಂಡನು. ಒಂದುದಿನ ಬೆಳಗಿನ ಜಾವದಲ್ಲಿ ಈ ಮೂವರೂ ಆಪ್ತನಾದ ಒಬ್ಬ ವೈದ್ಯನೊಡನೆ ಹೋಗಿ ಆ ಗೋರಿಯನ್ನು ಅಗೆಯಿಸಿ ಪೆಟ್ಟಿಗೆಯನ್ನು ಹೊರಕ್ಕೆ ತೆಗೆಯಿಸಿದರು. ಪ್ರಫುಲ್ಲೆಯು ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡುತ್ತಿದ್ದಳು. ವಿಠಲನು ಆಕೆಯ ಮಗ್ಗುಲಲ್ಲಿ ನಿಂತಿದ್ದನು. ಮುಚ್ಚಳವನ್ನು ತೆರೆದರು. ಪ್ರಫುಲ್ಲೆಯು ಕಿಟ್ಟನೆ ಕಿರುಚುತ್ತ ಮೂರ್ಛೆಬಿದ್ದಳು. ಎಲ್ಲರಿಗೂ ದಿಗ್ಭ್ರಮೆಯುಂಟಾಯಿತು. ವಿಠ ಲನು ಸರಿಯಾಗಿ ನೋಡುವಲ್ಲಿ ಆ ಪೆಟ್ಟಿಗೆಯೊಳಗೆ ಕಲ್ಲು ಗುಂಡುಗಳು ಹೊರತು

ಮತ್ತೇನೂ ಇರಲಿಲ್ಲ. ವಿಠಲನು ಊಹಿಸಿದ್ದಂತೆಯೇ ಇದೆಲ್ಲ ಮೋಸವೆಂಬುದು ಸ್ಪಷ್ಟವಾಯಿತು. ಬಳಿಕ ಆ ಪೆಟ್ಟಿಗೆಯನ್ನು ಪುನಃ ಅಲ್ಲೇ ಹೂಳಿಸಿಬಿಟ್ಟು ಹೊರಟುಹೋದರು.

ವಿಠಲ—ಬಲು ಚಮತ್ಕಾರವಾಗಿ ಮೋಸಮಾಡಿದಾರೆ. ಅಂತು ಅವರು ಏನೋ ಒಂದು ದೊಡ್ಡ ಫಲಕ್ಕೆ ಹದಿಹಾಕಿರುವುದು ದಿಟ.

ಪ್ರಫುಲ್ಲೆ—ಕಾಂತನ ಶರೀರವನ್ನೆಲ್ಲಿ ಹೂತಿದ್ದಾರು ?

ವಿಠಲ—ಅದನ್ನು ಹೇಳುವುದು ಕಷ್ಟ. ಹೊಳೆಗೆಸೆದಿರಬಹುದು. ಅಥವಾ ಮತ್ತೆಲ್ಲಾದರೂ ಹೂತಿರಬಹುದು. ಆದರೂ ಆಗಲಿ, ಚಿಂತಿಸಬೇಡ. ಈ ಹೊತ್ತಲ್ಲ ನಾಳೆಯಾದರೂ ನಾನು ಪತ್ತೆಮಾಡುತ್ತೇನೆ. ಅಂತು ಕಾಂತನ ಶವವನ್ನು ಪಾಲ ಪಾಣಿಯ ಬಳಿಯಲ್ಲೇನೋ ಹೂತಿಲ್ಲ. ಪ್ರಾಯಶಃ ನವನಗರಿಯ ಬಳಿಯಲ್ಲೇ ಹೂತಿರಬಹುದು. ಅವರು ಪೂರಾ ಹೆದರಿರಬೇಕು. ಇಲ್ಲದಿದ್ದರೆ ಮೊದಲೇ ಇಷ್ಟು ಜಾಗರೂಕರಾಗಿರಬೇಕಾಗಿರಲಿಲ್ಲ.

ಪ್ರಫುಲ್ಲೆ—ಅವರು ಏತಕ್ಕೆ ಹೀಗೆ ಮಾಡಿರಬಹುದೆಂದು ನಿನಗೆ ತೋರುವುದು ?

ವಿಠಲ—ಅವರು ದೊಡ್ಡದೊಂದು ಕಪಟನಾಟಕವನ್ನೇ ಆಡುತ್ತಿರುವುದಾಗಿ ಭಾವಿಸುತ್ತೇನೆ. ಕಾಂತನಾಥನ ಮರಣದಿಂದಲೇ ಅವರು ಏನೋ ಮಹತ್ತಾದ ಫಲವನ್ನು ಪಡೆಯಬೇಕೆಂದಿರಬಹುದು. ಆ ಮರಣವು ಸ್ವಾಭಾವಿಕವಾದುದಾಗಿದ್ದರೆ ಆ ಶವವನ್ನು ಹೂಳುವುದಕ್ಕೆ ಅವರು ಇಷ್ಟು ಆಯಾಸ ಪಡಬೇಕಾಗಿರಲಿಲ್ಲ.

ಹೀಗೆಂದು ಮಾತಾಡಿಕೊಳ್ಳುತ್ತ ಎಲ್ಲರೂ ಪುನಃ ನವನಗರಿಗೆ ಬಂದರು. ಭಯಂಕರವಾದ ಈ ನೋಟವನ್ನು ನೋಡಿದಾಗಿನಿಂದ ನಟೇಶನು—ಇನ್ನು ಮುಂದೆ ವಿಠಲನಿಗೆ ಏನೇನು ಅಪಾಯ ಸಂಭವಿಸುವುದೋ ಎಂದು ಕೇವಲ ಭೀತನಾಗಿ ಕಂಪಿಸುತ್ತಿದ್ದನು. ಇದೇ ಪೆಟ್ಟಿಗೆಯ ಸಂಬಂಧದಲ್ಲಿ ಹಿಂದೆ ತಾನು ಶೇಖರಿಸಿದ್ದ ಕಾಗದಪತ್ರಗಳನ್ನೆಲ್ಲ ಈಗ ವಿಠಲನಿಗೆ ಸಹಾಯವಾಗಲೆಂದು ಕೊಟ್ಟನು.

ಪ್ರಫುಲ್ಲೆಯ ಮನೆಯಬಳಿಯಲ್ಲಿ ಬಲವಾದ ಕಾವಲಿಡಲ್ಪಟ್ಟಿತು. ವಿಠಲನು ಆ ಇಬ್ಬರು ಪುರುಷರ ಮೇಲೂ ಒಂದು ಕಣ್ಣಿಟ್ಟಿರಬೇಕಾಗಿದ್ದಿತು. ಅದು ಅವನಿಗೆ ತೋರಲಿಲ್ಲ. ವಿಠಲನು ಎಷ್ಟೋ ಜಾಗರೂಕನಾಗಿದ್ದರೂ ಹೇಗೋ ಅವನ ಗುಟ್ಟೆಲ್ಲಾ ರಟ್ಟಾಗುವ ಸಂಗತಿಯು ಕಟ್ಟಕಡೆಗೆ ಅವನಿಗೇ ಗೊತ್ತಾಗುತ ಬಂದಿತು. ಹೀಗೆ ಸುಮಾರು ಎರಡು ತಿಂಗಳು ಕಳೆಯಿತು. ಯಾವುದೊಂದೂ ಪತ್ತೆಯಾಗಲಿಲ್ಲ. ಈ ಮಧ್ಯೆ ವಿಠಲನು ಕೆಲವು ಸಣ್ಣಪುಟ್ಟ ಸಾಹಸಗಳನ್ನು ಮಾಡಿದನು. ಒಂದುದಿನ ವಿಠಲನು ಮನೆಯಿಂದ ಆಫೀಸಿಗೆ ಬರುವಾಗ್ಗೆ ಪ್ರಫುಲ್ಲೆಯ ಸಹೋದರನಾದ ವಾರಣಲಾಲನು ಇವನ ಆಗಮನವನ್ನು ನಿರೀಕ್ಷಿಸುತ್ತ ಆಫೀಸಿನಲ್ಲಿ ಕುಳಿತಿದ್ದನು. ಅದುವರೆಗೆ ವಿಠಲನು ಅನೇಕವೇಳೆ ತಮ್ಮ ಮನೆಗೆ ಬಂದು ತನ್ನ ತಂಗಿ ಪ್ರಫುಲ್ಲೆಯೊಡನೆ ಮಾತನಾಡಿಕೊಂಡು ಹೋಗುತ್ತಿದ್ದರೂ ವಾರಣನು ಅದೇನೆಂದುಕೂಡ ಒಂದುದಿನವೂ ವಿಚಾರಿಸಿದವನಲ್ಲ. ವಾರಣನು ಇಪ್ಪತ್ತೈದುವರ್ಷದ ತರುಣ. ನೋಡುವುದಕ್ಕೆ ಲಕ್ಷಣವಾಗಿಯೂ ಇದ್ದನು. ಇಷ್ಟರಮೇಲೆ ಮನೋಹರವಾದ ಉಡುಪನ್ನೂ ಧರಿಸುತ್ತಿದ್ದನು. ತಾನು ಬಳಸುವ ಸಮಾಜದಲ್ಲೆಲ್ಲ ತಕ್ಕಮಟ್ಟಿಗೂ ಗಣ್ಯನೆಂದೆನಿಸಿಕೊಂಡಿದ್ದನು. ಆದರೆ ಕೆಲಸಕಾರ್ಯಗಳನ್ನು ಮಾಡುವುದು ತನ್ನ ಘನತೆಗೆ ಕಡಿಮೆಯೆಂದು ತಿಳಿದಿದ್ದ ವಿವೇಕಶಾಲಿ ! ಸ್ವಭಾವತಃ ಶಾಂತಚಿತ್ತ. ಆದರೆ ಈ ಹೊತ್ತು ಮಾತ್ರ ಅವನ ಚಿತ್ತಕ್ಷೋಭೆಗೆ ಪಾರವೇ ಇಲ್ಲ. ವಿಠಲನು ಒಳಕ್ಕೆ ಕಾಲಿಟ್ಟ ಕ್ಷಣವೇ ಅವನು— ವಿಠಲ, ನಿನಗೂ ನನ್ನ ಸಹೋದರಿ ಪ್ರಫುಲ್ಲೆಗೂ ಚೆನ್ನಾಗಿ ಪರಿಚಯವಿರುವುದೆಂದು ಭಾವಿಸುತ್ತೇನೆ. ನಾನು ನಮ್ಮ ಮನೆಯಲ್ಲೇ ನಿನ್ನನ್ನು ಅನೇಕವೇಳೆ ನೋಡಿದೇನೆ.

ವಿಠಲ—ಹೌದು, ಪ್ರಫುಲ್ಲೆಗೋಸ್ಕರ ನಾನು ಏನೇನೋ ಸಾಹಸ ಮಾಡುತ್ತಿದೇನೆ. ಒಂದು ರಹಸ್ಯ ವಿಷಯದಲ್ಲಿ ಆಕೆಗೆ ಒಂದು ಬುದ್ಧಿವಾದವನ್ನು ಹೇಳಿದೇನೆ.

ವಾರಣ— ಓ, ಹಣವನ್ನು ರಾಜಕೀಯನಿಧಿ (ಸೇವಿಂಗ್ಸ್‌ಬ್ಯಾಂಕ್) ಗೆ ಹಾಕುವ ವಿಷಯವೇನೋ ! ಒಳ್ಳೇದು. ವಿಠಲ, ಈಗ ನಾನು ಅದಕ್ಕಿಂತ ಅತಿ ಮುಖ್ಯವಾದ ಬೇರೆ ಕೆಲಸಕ್ಕೋಸ್ಕರ ಬಂದಿದೇನೆ.—ನಮ್ಮ ಪ್ರಫುಲ್ಲೆಯು ಸದಾ

ಸಂತೋಷಚಿತ್ತಳಾಗಿಯೇ ಇರುತಿದ್ದಳು. ಆದುದರಿಂದ ನಾನು ಯಾವುದನ್ನೂ ವಿಚಾರಿಸಬೇಕಾದುದಿರಲಿಲ್ಲ. ಒಂದು ವಿಷಯವೂ ನನಗೆ ಗೊತ್ತಿಲ್ಲ.

ವಿಠಲ—ನಿನಗೇನು ಗೊತ್ತಿಲ್ಲ ?

ವಾರಣ—ಓಹೋ ! ಮರೆತೆನು. ಮರೆತನು. ನಿನಗೂ ಅದೊಂದೂ ತಿಳಿಯದು. ತಿಳಿದಮಟ್ಟಿಗೆ ನಾನೇ ಹೇಳಬೇಕಾಗಿದೆ. ಈಗ ಪ್ರಫುಲ್ಲೆ ಎಲ್ಲೋ ಮಾಯವಾಗಿ ಬಿಟ್ಟಿದ್ದಾಳೆ.

ವಿಠಲ—ಹಾ ! ಏನು !

ವಿಠಲನು ಹಾರಿಬಿದ್ದನು. ಸಿಡಿಲಿನ ಪೆಟ್ಟು ತಗಲಿದವನಂತೆ ಕುರ್ಚಿಯಿಂದ ಕೆಳಕ್ಕುರುಳಿ ಸ್ವಲ್ಪ ಚೇತರಿಸಿಕೊಂಡು ನಿಟ್ಟು ನೋಟದಿಂದ ವಾರಣನ ಮುಖವನ್ನು ನಿರುಕಿಸುತ್ತ ನಿಂತನು.

ವಾರಣ—ಪ್ರಫುಲ್ಲೆಯು ಹೋಗಿ ಮೂರುದಿನಗಳಾದವಂತೆ. ನಾನು ಒಂದುವಾರದ ಹಿಂದೆ ಪರಸ್ಥಳಕ್ಕೆ ಹೋಗಿದ್ದವನು ಈಗತಾನೇ ಬಂದೆನು. ನೋಡಿದರೆ ಪ್ರಫುಲ್ಲೆಯಿಲ್ಲ. ಮನೆಯ ಪರಿಚಾರಿಕೆಯನ್ನು ವಿಚಾರಿಸುವಲ್ಲಿ ಅವಳು—ಪ್ರಫುಲ್ಲೆ ಹೊರಟುಹೋಗಿ ಮೂರುದಿನವಾಯ್ತೆಂದೂ ಅವಳು ಎಲ್ಲಿರುವಳೆಂಬುದು ಕೂಡ ಗೊತ್ತಿಲ್ಲವೆಂದೂ ಹೇಳಿದಳು. ಅವಳು ಏನನ್ನೂ ಬರೆದಿಟ್ಟು ಕೂಡ ಹೋಗಲಿಲ್ಲ. ನಾನು ನಮ್ಮ ಗುರುತು ಪರಿಚಯವಿರುವ ಎಲ್ಲ ಸ್ನೇಹಿತರ ಮತ್ತು ನೆಂಟರಿಷ್ಟರ ಮನೆಗಳಿಗೆ ಕೂಡ ಹೋಗಿ ನೋಡಿದರೂ ಆಕೆಯ ಸುಳಿವೇ ಇಲ್ಲ. ಅಯ್ಯೋ ! ಏನುಗತಿಯಾದಳೋ ಏನೋ ! ವಿಠಲ, ಹೇಗಾದರೂ ಅವಳನ್ನು ಪತ್ತೆಮಾಡಲಾರೆಯಾ ?

ವಿಠಲ—ಅಯ್ಯಾ, ಸಾಧ್ಯವಾದ ಮಟ್ಟಿಗೂ ಯತ್ನಿಸುತ್ತೇನೆ.

ವಾರಣ—ಅವಳಿಗೇನಾದರೂ ಗಂಡ ಸಂಭವಿಸಿರಬಹುದಾಗಿ ನಿನಗೆ ತೋರುವುದೆ ?

ವಿಠಲ—ತಿಳಿಯದು. ದಾದಿಯು ಕಡೆಯಸಲ ಅವಳನ್ನು ಕಂಡುದು ಯಾವಾಗ ?

ವಾರಣ—ಸೋಮವಾರ ರಾತ್ರಿ ೮ ಘಂಟೆಯ ಸಮಯವಂತೆ.

ವಿಠಲ—ಆ ದಾದಿಯು ಇನ್ನೇನಾದರೂ ವಿಶೇಷವನ್ನು ಹೇಳಿದಳೋ ?

ವಾರಣ—ಉಂ, ಪ್ರಫುಲ್ಲೆಯು ದಿವಾನ್‍ಖಾನೆಯಲ್ಲಿ ಕುಳಿತು ಪುಸ್ತಕವನ್ನು ಓದುತ್ತಿದ್ದಾಗ ಯಾವನೋ ಒಂದು ಕಾಗದವನ್ನು ತಂದು ಕೊಟ್ಟನಂತೆ. ಪ್ರಫುಲ್ಲೆಯು ಅದನ್ನು ಓದಿಕೊಂಡು ಮುಖ ಚಿಕ್ಕದು ಮಾಡಿಕೊಂಡಳಂತೆ. ಬಳಿಕ ಒಳ್ಳೇ ಸೀರೆಯನ್ನುಟ್ಟು ಇಂತಹ ಕಡೆಗೆ ಹೋಗುತ್ತೇನೆಂಬುದನ್ನೂ ತಿಳಿಸದೆ ಎಲ್ಲಿಗೋ ಹೋದಳಂತೆ. ಅಲ್ಲಿಂದೀಚೆಗೆ ಅವಳ ವಿಷಯವೇ ಗೊತ್ತಿಲ್ಲ.

ವಿಠಲ—ಅವಳು ಆ ಕಾಗದವನ್ನು ಜತೆಯಲ್ಲೇ ತೆಗೆದುಕೊಂಡು ಹೋದಳಂತೊ ? ಇನ್ನೇನು ನಡೆಯಿತಂತೆ !

ವಾರಣ—ತೆಗೆದುಕೊಂಡು ಹೋದಂತೆಯೂ ಅದರ ಮರುದಿನ ಆ ಕೋಣೆಯಲ್ಲೆಲ್ಲಾ ಯಾರೋ ಹುಡುಕಾಡಿದಂತೆಯೂ ಬೀರುಗಳ ಬಾಗಿಲುಗಳನ್ನೆಲ್ಲ ತೆರೆದು ಉಕ್ಕಿನ ಪೆಟ್ಟಿಗೆ (trunks) ಗಳನ್ನೊಡೆದು ಹಾಸಿಗೆಯನ್ನೆಲ್ಲ ಬಿಚ್ಚಿ ಎಲ್ಲವನ್ನೂ ಚೆಲ್ಲಾಪಿಲ್ಲಿಯಾಗಿ ಹರಡಿದಂತೆಯೂ ಹೇಳುತ್ತಾಳೆ.

ವಿಠಲ—ಏನಾದರೂ ಕಳುವಾಗಿದೆಯೊ ?

ವಾರಣ—ಅವಳು ಹೇಳುವುದರಲ್ಲಿ ಏನೂ ಹೋದಂತಿಲ್ಲ. ಪ್ರಫುಲ್ಲೆಯು ತನ್ನ ಜವಾಹಿರಿಗಳನ್ನೆಲ್ಲ ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರಪಡಿಸಿ ಸರ್ಕಾರದ ಬ್ಯಾಂಕಿನಲ್ಲಿಟ್ಟಿರುವುದು ನಿನಗೆ ಗೊತ್ತೇ ಇರಬಹುದು.

ವಿಠಲ—ನಿನ್ನ ತಂಗಿಗೆ ಯಾರಾದರೂ ಹಗೆಗಳಿರುವುದನ್ನು ನೀನು ಬಲ್ಲೆಯಾ ?

ವಾರಣ—ಇಲ್ಲ, ನನಗೆ ಗೊತ್ತಿಲ್ಲ. ಈಚೆಗೆ ನಾನು ಪರಸ್ಥಳದಲ್ಲೇ ಹೆಚ್ಚಾಗಿ ಕಾಲ ಕಳೆಯುತ್ತಿದ್ದೆನು.

ವಾರಣಶಾಲನು ಇಷ್ಟನ್ನು ಹೇಳಿ ಮುಗಿಸಲು ವಿಠಲನು ಪತ್ತೆಗೆ ಯತ್ನಿಸುವುದಾಗಿ ಹೇಳಿ ಅವನನ್ನು ಕಳುಹಿಸಿಬಿಟ್ಟನು. ತರುವಾಯ ವಿಠಲನು ಪ್ರಫು

ಲ್ಲೆಯ ದಾದಿಯನ್ನು ಕರೆಯಿಸಿಕೊಂಡು ಏನೇನೋ ಪ್ರಶ್ನೆ ಹಾಕಿದನು. ಪಾರಣನು ಹೇಳಿದುದಕ್ಕಿಂತ ಹೆಚ್ಚು ಅಂಶವೇನೂ ಹೊರಡಲಿಲ್ಲ. ಆದರೆ ಪ್ರಫುಲ್ಲೆಗೆ ಕಾಗದ ತಂದುಕೊಟ್ಟವನನ್ನು ಪುನಃ ಯಾವಾಗಲಾದರೂ ಕಂಡರೆ ಗುರ್ತಿಸ ಬಲ್ಲೆನೆಂದು ಆ ದಾದಿಯು ಹೇಳಿದುದು ಒಂದು ವಿಶೇಷ. ವಿಠಲನಿಗೆ ಇದರಿಂದ ಸ್ವಲ್ಪಮಟ್ಟಿಗೆ ದಾರಿ ಸಿಕ್ಕಿದಂತಾಯಿತು. ಇದರಿಂದಲೇ ಎಷ್ಟೋ ಕೆಲಸಗಳನ್ನು ಮಾಡಬಹುದೆಂದುಕೊಂಡು ಅವಳನ್ನು ಸಂಗಡ ಕರೆದುಕೊಂಡು ತಾನೂ ವೇಷ ಧಾರಿಯಾಗಿ ನವನಗರದ ಬೀದಿಬೀದಿಗಳಲ್ಲೂ ತಿರುಗಲಾರಂಭಿಸಿದನು. ಕಡೆಗೆ ಆದಿನ ಕಾಗದವನ್ನು ತಂದುಕೊಟ್ಟ ಹುಡುಗನನ್ನು ಅವಳು ತೋರಿಸಿದಳು. ಅವನು ಬಲು ಚಿಕ್ಕವನು. ಬಲು ಚುರುಕು ಬುದ್ಧಿಯವನು. ಮೊದಲು ಅವನು ಇವರ ಸಂಗಡ ಮಾತಾಡುವುದಕ್ಕೂ ಇಷ್ಟಪಡಲಿಲ್ಲ. ಪ್ರಶ್ನೆಮಾಡಲು ತಾನು ಪ್ರಫುಲ್ಲೆಯ ಮನೆಗೆ ಕಾಗದವನ್ನು ತಂದು ಕೊಟ್ಟುದೇ ಇಲ್ಲವೆಂದು ಬೊಂಕಿ ದನು. ಆದರೆ ಆ ಹುಡುಗಿಯು ನಿಜಸ್ಥಿತಿಯನ್ನೆಲ್ಲಾ ಎದುರಿಗೇ ಹೇಳಿ ಮಾಕ ರಿಸಲು ವಿಲಕ್ಷಿತನಾಗಿ ತಾನು ಕಾಗದವನ್ನು ತಂದುಕೊಟ್ಟುದುಂಟೆಂದು ಒಪ್ಪಿ ಕೊಂಡನು.

ವಿಠಲ—ನಿನಗೆ ಕಾಗದವನ್ನು ಕೊಟ್ಟವರು ಯಾರು ?

ಹುಡುಗ—ಅನಂತರಾಯರ ಬೀದಿಯಲ್ಲಿರುವ ಒಬ್ಬ ದೊಡ್ಡ ಮನುಷ್ಯರು.

ವಿಠಲ—ಅದು ಆ ಬೀದಿಯ ಎಷ್ಟನೇ ಮನೆ ?

ಈಗ ಆ ಹುಡುಗನಿಗೆ ಬಹು ಕಷ್ಟಕ್ಕೆ ಬಂದಿತು. ಹೇಗೂ ತಪ್ಪಿಸಿಕೊಳ್ಳು ವುದಕ್ಕಾಗಲಿಲ್ಲ. ಬಳಿಕ ಅವನು—ಇದನ್ನೆಲ್ಲ ತಿಳಿಯುವುದರಿಂದ ನಿಮಗೆ ಆಗ ಬೇಕಾದುದೇನು ?

ವಿಠಲ—(ರೇಗಿ) ಅದನ್ನೆಲ್ಲ ನಿನಗೆ ಹೇಳಬೇಕಾದುದೇನೂ ಇಲ್ಲ. ಆ ಮನೆಯ ನಂಬರೆಷ್ಟೋ ಹೇಳು. ಇಲ್ಲದಿದ್ದರೆ ನಾನು ನಿನ್ನನ್ನು ಅಪರಾಧಕ್ಕೆ ಗುರಿಮಾಡುತ್ತೇನೆ—ಎಂದು ಗದ್ದರಿಸುತ್ತ ಹೇಳಿದನು.

ಇದಕ್ಕೆ ಆ ಹುಡುಗನು ಹೆದರಿ ಬೇಗಬೇಗ ಉತ್ತರ ಹೇಳುತ್ತ ಬಂದು— ಅಯ್ಯ, ಹೇಳಿದರೆ ಮುಳುಗಿಹೋಗುವೆನಲ್ಲಾ !

ವಿಠಲ—ಇಲ್ಲ, ನೀನು ಮುಳುಗಿಹೋಗದಂತೆ ನಾನು ನೋಡಿಕೊಳ್ಳುತ್ತೇನೆ.

ಹುಡುಗ—ಅನಂತರಾಯರ ಬೀದಿಯಲ್ಲಿ ೩೧ನೇ ನಂಬರು ಮನೆ. ಅಲ್ಲಿ ಕೊಲ್ಲೂರಯ್ಯನ ಅನ್ನದಂಗಡಿಯುಂಟು.

ವಿಠಲ—ನಿನಗೆ ಕಾಗದ ಕೊಟ್ಟವನನ್ನು ಚೆನ್ನಾಗಿ ನೋಡಿದ್ದೀಯಾ ?

ಹುಡುಗ—ಚೆನ್ನಾಗಿ ಗೊತ್ತಿಲ್ಲ. ನಾನು ಒಳಕ್ಕೆ ಹೋದಾಗ ಆತನು ಎಲ್ಲರ ಜೊತೆಯಲ್ಲಿ ಇಸ್ಪೀಟ್ ಆಡುತ್ತಿದ್ದನು. ಆತನು ನನಗೆ ಒಂದು ರೂಪಾಯಿ ಕೂಲಿಯನ್ನೂ ಆ ಕಾಗದವನ್ನೂ ಕೊಟ್ಟನು.

ವಿಠಲ—ಪುನಃ ಅವನನ್ನು ನೋಡಿದರೆ ನೀನು ಗುರ್ತಿಸಬಲ್ಲೆಯೋ ?

ಹುಡುಗ— ಸಾಧ್ಯವಾದಮಟ್ಟಿಗೂ ಯತ್ನಿಸುತ್ತೇನೆ.

ವಿಠಲ—ಒಳ್ಳೆಯದು, ನೀನು ಅವನನ್ನು ತೋರಿಸಿದರೆ ಅವನು ಕೊಟ್ಟ ಒಂದು ರೂಪಾಯಿಗಿಂತ ಹೆಚ್ಚಾಗಿ ನಾನು ನಿನಗೆ ಕೊಡುತ್ತೇನೆ.

ಹುಡುಗ— ನಿಮ್ಮ ಪ್ಪಣೆಯಾದಂತೆ ನಾನು ನಡೆಯುತ್ತೇನೆ.

ವಿಠಲನು ದಾದಿಯನ್ನು ಹಿಂದಕ್ಕೆ ಕಳುಹಿಸಿಬಿಟ್ಟು ಹುಡುಗನನ್ನು ಕರೆದುಕೊಂಡು ಆ ಬೀದಿಗೆ ಹೋಗಿ ನೋಡುವಲ್ಲಿ ಆ ಮನೆಯು ಪ್ರಸಿದ್ಧವಾದ ಒಂದು ಜೂಜಿನ ಕಟ್ಟೆ. ವಿಠಲನೂ ಆ ಹುಡುಗನೂ ಬಹಳ ಹೊತ್ತು ಅಲ್ಲಿ ಮರೆಯಾಗಿ ನಿಂತು ಒಳಕ್ಕೆ ಹೋಗಿ ಬರತಕ್ಕವರನ್ನು ನೋಡುತ್ತಿದ್ದರು. ಅಷ್ಟರಲ್ಲಿ ಆ ಹುಡುಗನು ಒಬ್ಬನನ್ನು ತೋರಿಸಿದನು. ಆ ಮನುಷ್ಯನು ಎತ್ತರವಾಗಿದ್ದನು. ಅವನು ಒಬ್ಬ ಕಳ್ಳನ ಸಂಗಡ ಆ ಮನೆಯಿಂದೀಚೆಗೆ ಹೊರಟುಬರುತ್ತಿದ್ದನು.

ಹುಡುಗ ವಿಠಲನು ಅವರನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಹರ್ಷಗೊಂಡು ತನ್ನ ಕಾರ್ಯ ಕೈಗೂಡಿದಂತೆಯೇ ಭಾವಿಸಿಕೊಂಡನಲ್ಲದೆ ಮೊದಲು ತಾನು ಅವರನ್ನು ನೋಡಿದುದನ್ನು ಜ್ಞಾಪಿಸಿಕೊಂಡನು. ಇನ್ನೆಂದಿಗೂ ಅವರ ಗುರುತು ಮರೆಯಬಾರದೆಂದು ಪುನಃ ಪುನಃ ಚೆನ್ನಾಗಿ ನೋಡಿದನು.

ತಾನು ಆ ರಾತ್ರಿ ಯಾರನ್ನು ಕಂಡಿದ್ದನೋ ಪ್ರಫುಲ್ಲೆಯು ತನ್ನ ಲಗ್ನದ ಸಂಭ್ರಮದಲ್ಲಿ ನೆರದಿದ್ದರೆಂದು ಯಾರ ವಿಷಯವನ್ನು ತಿಳಿಸಿದ್ದಳೋ ಅಂತಹ ಈ ವ್ಯಕ್ತಿಗಳು ವಿಠಲನ ಮನಸ್ಸಿನಲ್ಲಿ ಸರ್ವದಾ ನೆಲಸುವಂತಾದುವು. ಆ ಎತ್ತರವಾದವನೇ ಪ್ರಫುಲ್ಲೆಯ ಬಳಿಗೆ ಬಂದು ತಾನು ಪುರೋಹಿತನೆಂದು ಹೇಳಿ ಲಗ್ನಮಾಡಿಸಿದ್ದ ಮಾಧವ. ವಿಠಲನು ಆ ಹುಡುಗನಿಗೆ ಪಾರಿತೋಷಕವನ್ನು ಕೊಟ್ಟು ಕಳುಹಿಸಿ ತಾನು ವೇಷಧಾರಿಯಾಗಿಯೇ ಇದ್ದು ಆ ಇಬ್ಬರನ್ನೇ ಅನುಸರಿಸಿ ಪುನಃ ಜೂಜಿನ ಕಟ್ಟೆಗೆ ಹೋದನು.

---

# ನಾಲ್ಕನೆಯ ಪರಿಚ್ಛೇದ.

ಹೋಟಲಿನ ಬಾಗಿಲಲ್ಲಿ ಕಾವಲು. ಎಲ್ಲರನ್ನೂ ಒಳಕ್ಕೆ ಬಿಡುತಿರಲಿಲ್ಲ. ಹಾಗೆ ಒಳಕ್ಕೆ ಹೋಗತಕ್ಕವರು ಏನೋ ಒಂದು ಹೆಗ್ಗುರುತನ್ನು ತೋರಿಸಬೇಕಾಗಿದ್ದಿತು. ಇದೆಲ್ಲ ಸಂಕೇತಪ್ರಕರಣ. ವಿಠಲನು ಈ ಮರ್ಮಗಳನ್ನೆಲ್ಲ ತಿಳಿದ ಹಳೇ ಹುಲಿಯಾದುದರಿಂದ ಕೂಡಲೆ ಆ ಗುರುತನ್ನು ತೋರಿಸಿ ತಡೆಯಿಲ್ಲದೆ ಒಳಪೊಕ್ಕನು. ಹೋಟಲಿನ ಯಜಮಾನ ಕೊಲ್ಲೂರಯ್ಯನು ಬಲು ಜಾಣ. ಆಟದ ಮರ್ಮವರಿಯದ ಹೊಸಬರಾದವರೂ ಬಂದಿದ್ದು ಹೆಚ್ಚು ಹಣವನ್ನು ಜೂಜಿಗೊಡ್ಡಿದಾಗ ಮಾತ್ರ ತಾನು ಪ್ರತಿಕಕ್ಷಿಯಾಗಿ ನಿಂತು ಆಡಿ ಗೆಲ್ಲುತ್ತಿದ್ದನೇವಿನಾ ತನಗಿಂತ ಚತುರರೊಡನೆ ಆಡಿ ಎಂದೂ ತಾನು ಒಂದು ಕಾಸನ್ನೂ ಸೋತವನಲ್ಲ. ಅಲ್ಲಿ ಜೂಜಾಡುವ ಸಂಗತಿಯು ಅದೃಷ್ಟವಶಾತ್ ಪೋಲೀಸಿನವರಿಗೆ ಗೊತ್ತಿರಲಿಲ್ಲ. ಆ ಕಟ್ಟಡದ ಮೂರನೆಯಂತಸ್ತಿನಲ್ಲಿ ಈ ಜೂಜಿನ ಕಾರ್ಯ ನಡೆಯುತಿದ್ದಿತು. ಆಗ ಅಲ್ಲಿ ಕೆಲವರು ಸ್ತ್ರೀಯರೂ ಪುರುಷರೂ ಸಹ ಇದ್ದರು. ಆಟದಲ್ಲಿ ಬಹು ಸ್ವಾರಸ್ಯ ಹತ್ತಿದ್ದುದರಿಂದ ಅಲ್ಲಿನವರಿಗೆಲ್ಲ ಅದರ ಮೇಲೆಯೇ ಗಮನವಿದ್ದಿತಾಗಿ ವಿಠಲನನ್ನು ಯಾರೂ ನೋಡಲಿಲ್ಲ. ಎಲ್ಲರೂ ಆಟಗಾರರ ಸುತ್ತಲೂ ಇಣಿಕಿ ನೋಡುತ್ತಿದ್ದರು. ವಿಠಲನೂ ಅದನ್ನೇ ನೋಡಬೇಕೆಂದು ಬಲು ಆತುರದಿಂದ ಹೋಗಿ ಮೆಟ್ಟಿಂಗಾಗಿಟ್ಟು ನಿಂತು ನೋಡುತ್ತಿದ್ದನು.

ಅವನು ಅಲ್ಲಿ ಒಂದು ಮೂರ್ತಿಯನ್ನು ಕಂಡು ಪರಮಾಶ್ಚರ್ಯಗೊಂಡನು. ಅದು ಆಟವಾಡುತ್ತಿದ್ದ ಒಂದು ಸ್ತ್ರೀವ್ಯಕ್ತಿ. ಅವಳು ಕೈಯಲ್ಲಿದ್ದ ಇಸ್ಪೀಟಿನ ಎಲೆ ಗಳನ್ನು ತೆಗೆದು ನೋಡುತ್ತಲೂ ತನ್ನ ಪ್ರತಿಕಕ್ಷಿಯ ಮೇಲೆ ಹೆಚ್ಚು ಹಣಕ್ಕೆ ಧಡ ಸವಾಲ್ ಮಾಡುತ್ತಲೂ ನಡುನಡುವೆ ವಿಠಲನ ಮುಖವನ್ನು ನೋಡುತ್ತಲೂ ಇದ್ದಳು. ಅವಳು ಮಾಡಿ ಕೂಡಿಸಿದ ಶಿಲಾಪ್ರತಿಮೆಯಂತೆ ಪದ್ಮಾಸನದಲ್ಲಿ ಕುಳಿ ತ್ತಿದ್ದಳು. ಅವಳು ಬಲುಗಟ್ಟಿಗಳಾದ ಆಟಗಾತಿಯೆಂದೂ ಈಗ ಅದೃಷ್ಟದೇವ ತೆಯು ಅವಳಿಗೇ ಒಲಿಯುವಂತಿದೆಯೆಂದೂ ಎಲ್ಲರೂ ಹೇಳುತ್ತಿದ್ದರು.

ಮೊಟ್ಟಮೊದಲು ವಿಠಲನು ಆ ವ್ಯಕ್ತಿಯನ್ನು ಚೆನ್ನಾಗಿ ಪರಿಶೀಲಿಸಲಿಲ್ಲ. ಕಡೆಕಡೆಗೆ ಹತ್ತಿರಹೋಗಿ ನೋಡಲು ತನಗೆ ಕೇವಲ ಪರಿಚಿತಳಾಗಿದ್ದವಳಂತೆ ತೋರಿದಳು. ಆಮೇಲೆ ವಿಠಲನ ಮನಸ್ಸಿನಲ್ಲಿ-ಇದೇನು ! ಪ್ರಫುಲ್ಲೆ ! ಎಂದು ಕೊಂಡನು. ಅವನಿಗೆ ಇದು ಮಹಾ ಅದ್ಭುತವಾಗಿ ತೋರಿತು. ಪ್ರಫುಲ್ಲೆ ಯಂತಹ ಮಾನವತಿಯು ಈ ಜೂಜಿನಕಟ್ಟೆಗೆ ಕಾಲಿಟ್ಟು ಇಂತಹ ಪೋಲಿಗಳ ಜತೆಗೆ ಸೇರಿ ಜೂಜಾಡಲು ಬರತಕ್ಕವಳೆ ಎಂದು ಕೂಡ ಯೋಚಿಸಲಾರದೆ ಹೋದನು. ಮಾಧವನೂ ಅವನ ಜತೆಗಾರನಾದ ಕುಳ್ಳನೂ ಅವಳ ಬಳಿಯಲ್ಲಿ ನಿಂತು ಆ ಆಟದ ಸೊಗಸನ್ನು ನೋಡಿನೋಡಿ ತಲೆದೂಗುತ್ತಿದ್ದರು.

“ ಆಠೀಣ್ ರಾಣಿಯಾಗಿದ್ದರೆ 5,000 ರೂಪಾಯಿ ಬೇಸ್ತು ” ಎಂಬ ಧ್ವನಿಯು ಅವಳ ಬಾಯಿಯಿಂದ ಬಂದಿತು. ಅದನ್ನು ಕೇಳಿದ ಕೂಡಲೇ ವಿಠಲನು ಅಯ್ಯೊ ! ಈ ಧ್ವನಿಯು ಪ್ರಫುಲ್ಲೆಯದಲ್ಲ—ಎಂದು ಗೊಣಗುಟ್ಟುತ್ತ ನಿಟ್ಟುಸಿರಿ ಟ್ಟನು. ಒಂದೇ ಆಕಾರದವರು ಇಬ್ಬರಿರುವುದೂ ಅಸಂಭವ. ಇವಳು ನಿಜ ವಾಗಿ ಪ್ರಫುಲ್ಲೆಯೇ ಆಗಿದ್ದರೆ ಅಷ್ಟು ಸಭ್ಯಳಾದ ಆ ಬಾಲಕಿಯು ಈ ಜೂಜು ಕೋರರ ಸಂಗಡ ಸೇರುವ ಬಗೆ ಹೇಗೆ ? ಈ ಕಡೆಯಲ್ಲಿ ಕಂಡ ಅಂಶವೇ ವಿಠ ಲನ ಮನಸ್ಸಿಗೆ ಸಂಪೂರ್ಣ ಸಂಶಯವನ್ನುಂಟುಮಾಡಿದುದು.

ಅವಳ ಬಾಯಿಂದ ಆ ಮಾತು ಬಂದಕೂಡಲೆ ಎಲ್ಲರೂ ಸುಮ್ಮನಾದರು. ಎಲೆಗಳು ಹೇಗೆ ಬೀಳುವುವೋ ನೋಡಬೇಕೆಂದು ಉಸಿರಿಕ್ಕದೆ ತುಂಬಾ ಕುತೂ ಹಲಪಡುತ್ತಿದ್ದರು. ಕೋಲ್ಹಾರಯ್ಯನ ಕಡೆ ಆಡುತ್ತಿದ್ದವನ ಮುಖವು ಬಾಡಿತು.

ಮುಖದಮೇಲೆ ಅಲ್ಲಲ್ಲಿ ಮುತ್ತುಗಳಂತೆ ಬೆವರ ಹನಿಗಳು ಕುಳಿತವು. ಎಲೆಗಳನ್ನು ತೋರಿಸಿದುದೂ ಆಯಿತು. ಒಂದು ಕ್ಷಣದಲ್ಲಿ ಈ ಹೆಂಗಸು ೫,೦೦೦ ರೂಪಾಯಿಗಳನ್ನು ಸಂಪಾದಿಸಿದಳು. ಕೊಲ್ಲೂರಯ್ಯನ ಮುಖವು ಸೀದ ಮಡಕೆಯಂತಾಯಿತು. ಜನರೆಲ್ಲ—"ಭಲ! ಶಾಬಾಸ್! ಹೆಂಗಸಾದರೂ ತುಂಬ ಅದೃಷ್ಟವಂತೆ! ಚತುರೆ!' ಎಂದು ಹೊಗಳುತ್ತ ಬಂದರು. ಈ ಸ್ತ್ರೀಯು ತನಗೆ ಬಂದ ಹಣದ ನೋಟುಗಳನ್ನೆಲ್ಲ ತೆಗೆದುಕೊಂಡು ಅವುಗಳಲ್ಲಿ ೧೦೦ ರೂಪಾಯಿಗಳ ನೋಟಿಗೆ ಚಿಲ್ಲರೆ ಕೊಡೆಂದು ಕೊಲ್ಲೂರಯ್ಯನನ್ನು ಕೇಳಲು ವಿಠಲನು ಪುನಃ ಈ ಧ್ವನಿಯನ್ನು ಚೆನ್ನಾಗಿ ಆಲಿಸಿದರೂ ಇದು ಪ್ರಫುಲ್ಲೆಯದಾಗಿರಲಿಲ್ಲ. ಅವಳ ಧ್ವನಿಯು ಮೃದುವಾಗಿಯೂ ಮಧುರವಾಗಿಯೂ ಇದ್ದಿತು. ಇವಳದಾದರೋ ಒರಟು, ಸುಮಾರು ಗಂಡಸಿನ ಕಂಠ. ಕೊಲ್ಲೂರಯ್ಯನು ಚಿಲ್ಲರೆಯನ್ನು ತರಿಸಿಕೊಂಡನು. 'ನಮಗೆ ಇನ್ನೊಂದಾಟವನ್ನು ಕೊಟ್ಟರೆ ನಾವೂ ನಮ್ಮ ಕೈಯನ್ನು ತೋರಿಸಬಲ್ಲೆವು' ಎಂದನು. ಅದಕ್ಕವಳು—ಓಹೋ! ಅಗತ್ಯವಾಗಿ ಆಗಬಹುದು. ಮತ್ತೊಂದುವೇಳೆ ಯಾವಾಗಲಾದರೂ ಎಷ್ಟುಹೊತ್ತು ಬೇಕಾದರೂ ಆಗಬಹುದು. ಈಗ್ಗೆ ಇಷ್ಟು ಸಾಕು.' ಎನ್ನುತ್ತ ಮಾಧವ ಮುಂತಾದವರ ಕಡೆ ತಿರುಗಿ,

"ಇನ್ನು ಬನ್ನಿ, ಹೊರಡೋಣ," ಎನ್ನುತ್ತ ಅವರ ಸಂಗಡ ಹೊರಟು ಹೋದಳು.

ಮಾಧವ—'ಪ್ರಫುಲ್ಲೆ, ಈ ದಿನ ನಿನ್ನದೇ ಅದೃಷ್ಟ' ಎಂದು ಕುಳ್ಳನ ಕಡೆ ತಿರುಗಿ—'ಏನೋ ಭಾಸ್ಕರ, ಅಲ್ಲವೆ?

ಭಾಸ್ಕರ—ಅಹಾ, ಸಂಶಯವೇನು?

ಮೂವರೂ ಒಟ್ಟಿಗೆ ಹೊರಟರು. ವಿಠಲನು ರಹಸ್ಯವಾಗಿ ಅವರನ್ನು ಹಿಂಬಾಲಿಸಿದನು. ಅವರಿಬ್ಬರೂ ಇವಳನ್ನು ಪ್ರಫುಲ್ಲೆಯೆಂದು ಸಂಬೋಧಿಸುತ್ತಿದ್ದಾರೆ. ಇವಳ ರೂಪು, ಚಹರೆ ಮುಂತಾದ್ದೆಲ್ಲ ಪ್ರಫುಲ್ಲೆಯದರಂತೆಯೇ ಇದೆ. ಆದರೆ ಧ್ವನಿ ಮಾತ್ರ ಬೇರೆ. ಅವರು ಅಲ್ಲಿಂದ ಬಂಡಿಯ ಚೌಕಕ್ಕೆ ಹೋಗಿ ಒಂದು ಕುದುರೆಯ ಬಂಡಿಯನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು

ಕುಳಿತು ಹೊರಟರು. ವಿಠಲನೂ ಒಂದು ಗಾಡಿಯನ್ನು ಮಾಡಿಕೊಂಡು ತನ್ನ ಸಾರಥಿಗೆ ಏನನ್ನೋ ಪಿಸುಮಾತಿನಲ್ಲಿ ಹೇಳಿದನು. ಅವನೂ ಆ ಬಂಡಿಯ ಹಿಂದೆಯೇ ತನ್ನ ಬಂಡಿಯನ್ನೂ ಬಿಟ್ಟನು ; ಮತ್ತು ಮುಂದಿನ ಬಂಡಿಯವರು ತಮ್ಮನ್ನು ನೋಡದಿರುವುದಕ್ಕೆ ತನ್ನ ಸಾರೋಟಿನ ಮುಂಭಾಗದ ಕಿಟಕಿಗೆ ತನ್ನ ವಸ್ತ್ರವನ್ನು ಕಟ್ಟಿದನು. ಆ ಕಗ್ಗತ್ತಲೆಯ ರಾತ್ರಿಯಲ್ಲಿ ಎರಡು ಬಂಡಿಗಳೂ ಹೊರಟವು. ಮೊದಲನೆಯ ಸಾರೋಟು ಇಂತಹ ಸ್ಥಳದಲ್ಲಿ ನಿಲ್ಲಬಹುದೆಂಬ ಸೂಚನೆಯು ತೋರಿದೊಡನೆಯೇ ವಿಠಲನು ತನ್ನ ಸಾರೋಟನ್ನು ಹಿಂದೆಯೇ ನಿಲ್ಲಿಸಿಬಿಟ್ಟು ತಾನು ಇಳಿದು ಗುಟ್ಟಾಗಿ ಅವರಿದ್ದೆಡೆಗೆ ಹೋದನು. ಆ ಮೂವರೂ ಇಳಿದು ಒಂದು ಮನೆಯೊಳಕ್ಕೆ ಹೋದರು. ಇನ್ನು ಮುಂದಕ್ಕೂ ಅವರನ್ನು ಹಿಂಬಾಲಿಸುವುದು ಅಸಾಧ್ಯವಾಯಿತು. ವಿಠಲನು ಆ ಮನೆಯ ಹೊರಗೆ ಮರೆಯಲ್ಲಿ ಕುಳಿತನು. ಆಗ ಅಲ್ಲಿಗೆ ಗಸ್ತಿಗೆ ಬಂದಿದ್ದ ಪೋಲೀಸ್ ಅಧಿಕಾರಿಯನ್ನು ವಿಠಲನು ಆ ಮನೆಯ ವಿಷಯವಾಗಿ ವಿಚಾರಿಸಲು ಅಲ್ಲಿ ಅನೇಕ ತಿಂಗಳಿಂದ ಯಾರೂ ವಾಸವಾಗಿಲ್ಲವೆಂತಲೂ, ಈಗ್ಗೆ ಕೆಲವುಕಾಲದಿಂದ ಮಾತ್ರ ಯಾರೋ ಹೊಸಬರು ಬಂದು ಇಳಿದಿದ್ದಾರೆಂದೂ ತಿಳಿಯಿತು. ಇನ್ನೂ ಹೆಚ್ಚು ಸಂಗತಿಗಳನ್ನು ತಿಳಿಯಲೆಳಸಿ ವಿಠಲನು ಪುನಃ ಅವನನ್ನು ಪ್ರಶ್ನೆಮಾಡಲು ಪೋಲೀಸಿನವನು—ಈ ಮನೆಯಲ್ಲಿರುವವರು ವಿಚಿತ್ರಮನುಷ್ಯರು. ಅವರು ಎಂದೂ ಹಗಲುಹೊತ್ತು ಹೊರಕ್ಕೆ ಬಂದುದೇ ಇಲ್ಲ. ಮತ್ತು ಈ ಮನೆಯಲ್ಲಿ ಯಾವ ಕೊಠಡಿಯಲ್ಲೂ ರಾತ್ರಿ ದೀಪದ ಬೆಳಕನ್ನು ನೋಡಿದುದೇ ಇಲ್ಲ.

ವಿಠಲ—ಇಲ್ಲಿ ಸ್ತ್ರೀಯರೆಷ್ಟು ಜನರಿರುವರು ?

ಪೋಲೀಸ್—ಇಬ್ಬರು. ಈಗ ಪುರುಷರ ಸಂಗಡ ಒಳಕ್ಕೆ ಹೋದವಳೇ ಒಬ್ಬಳು. ಇನ್ನೊಬ್ಬಳು ಪ್ರಾಯಶಃ ಎಂದೂ ಹೊರಕ್ಕೆ ಬಂದುದೇ ಇಲ್ಲ. ಇವಳಾದರೋ ನಿತ್ಯವೂ ರಾತ್ರಿವೇಳೆ ಒಬ್ಬಳೇ ಹೊರಗೆ ಹೋಗುತ್ತಾಳೆ, ಬರುವಾಗ ಈ ಇಬ್ಬರನ್ನೂ ಸಂಗಡ ಕರೆತರುತ್ತಾಳೆ.

ವಿಠಲ—ಹಾಗಾದರೆ ನೀನು ಒಬ್ಬ ಸ್ತ್ರೀಯನ್ನೂ ಇಬ್ಬರು ಪುರುಷರನ್ನೂ ನೋಡಿದಿಯೊ ?

ಪೋಲೀಸ್—ಅಷ್ಟೇಅಲ್ಲ. ಕೆಲವುಕಾಲದ ಹಿಂದೆ ಇಲ್ಲಿ ಮೂರನೆಯ ಮನುಷ್ಯನೂ ಒಬ್ಬನಿದ್ದನು.

ಈ ಮಾತನ್ನು ಕೇಳಿ ಕುತೂಹಲ ಹೆಚ್ಚಲು ವಿಠಲನು ಪುನಃ—ಇವರು ಈ ಮನೆಗೆ ಬಾಡಿಗೆಗೆ ಬರುವಾಗ್ಗೆ ಆ ಮೂರನೆಯವನೂ ಸಂಗಡ ಇದ್ದನೊ ?

ಪೋಲೀಸ್—ಇದ್ದನು. ಬಹು ರೋಗಿಷ್ಠನಾಗಿದ್ದನು. ಅವನು ತರಹೆ ಯಿಂದ ವಿಶಾಲದೇಶದವನಾಗಿ ತೋರುತ್ತಿದ್ದನು.

ವಿಠಲನು ಅವನ ನಡೆನುಡಿಗಳನ್ನೂ ಚಹರೆಯನ್ನೂ ಚೆನ್ನಾಗಿ ವಿಚಾ ರಿಸಿ ತಿಳಿದನು. ಹೋಲಿಸಿನೋಡುವಲ್ಲಿ ಅದೆಲ್ಲ ಪ್ರಫುಲ್ಲೆ ಹೇಳಿದ್ದಂತೆ ಕಾಂತ ನಾಥನ ಚಹರೆಗಳಿಗೆ ತಾಳೆ ಬರುತ್ತಿದ್ದಿತು.

ವಿಠಲನು—ನೀನು ಅವರನ್ನು ಕಡೆಯಸಲ ಕಂಡು ಸುಮಾರು ಎಷ್ಟು ದಿನ ವಾಗಿರಬಹುದು ?

ಪೋಲೀಸ್—ನನಗೆ ಅಷ್ಟು ನಿಷ್ಕರ್ಷೆಯಾಗಿ ಜ್ಞಾಪಕವಿಲ್ಲ. ಅಂತು ಬಹುದಿನವಾಗಿಲ್ಲ. ಒಂದುದಿನ ರಾತ್ರಿ ಬಹಳ ಹೊತ್ತಾದಮೇಲೆ ಇಲ್ಲಿ ಒಂದು ಸಾರೋಟು ಬಂದು ನಿಂತಿತು. ಆ ಉದ್ದನೂ ಮತ್ತು ಕುಳ್ಳನೂ ಆ ರೋಗಿ ಯನ್ನು ಎತ್ತಿಕೊಂಡು ಬಂದು ಬಂಡಿಯಲ್ಲಿ ಕುಳ್ಳಿರಿಸಿ ತಾವೂ ಹತ್ತಿ ಎಲ್ಲಿಗೋ ಹೋದರು. ಪುನಃ ಒಂದು ಘಂಟೆಯೊಳಗಾಗಿ ಸಾರೋಟು ಹಿಂದಕ್ಕೆ ಬಂ ದಿತು. ನಾನು ಚೌಕದಲ್ಲಿ ನಿಂತಿದ್ದೆ. ಉದ್ದನೂ ಕುಳ್ಳನೂ ಬಂಡಿಯಲ್ಲಿ ಎದು ರುಬದರಾಗಿ ಕುಳಿತಿದ್ದರು. ಆ ರೋಗಿ ಇರಲಿಲ್ಲ ಅವರು ಇಳಿದಕೂಡಲೇ ಬಂಡಿಯೊಳಗಿನಿಂದ ಏನನ್ನೋ ಎಳೆಯತೊಡಗಿದರು. ನನಗೇನೋ ಸ್ವಲ್ಪ ಸಂಶಯ ತೋರಲು ಹತ್ತಿರ ಹೋಗಿ ನಿಂತುಕೊಂಡೆನು. ಅವರು ಒಂದು ಮನು ಷ್ಯದೇಹವನ್ನು ಕೆಳಕ್ಕೆಳೆಯುತಿದ್ದುದು ಗೊತ್ತಾಯಿತು. ನಾನು ವಿಚಾರಿಸಲು ಆತನಿಗೆ ವ್ಯಾಧಿ ಹೆಚ್ಚಿ ಸಂಕಟದಿಂದ ಮೂರ್ಛೆ ಬಂದಿದೆಯೆಂದು ಹೇಳಿದರು. ಆಗ ನಾನು—ವೈದ್ಯನನ್ನು ಕರೆತರಲೇ ಎಂದು ಕೇಳಲು ಆ ಉದ್ದನು ತಾನೇ ವೈದ್ಯನೆಂದೂ ತಕ್ಕ ಚಿಕಿತ್ಸೆಯನ್ನು ಮಾಡಬಲ್ಲೆನೆಂದೂ ಹೇಳಿದನು. ಆ ಮೇಲೆ

ಒಳಕ್ಕೆ ಒಯ್ದರು. ನಡೆದ ಸಂಗತಿಯನ್ನು ನಮ್ಮ ಇನ್ಸ್‌ಪೆಕ್ಟರಿಗೆ ಅರಿಕೆ ಮಾಡಿದರೂ ಅವರು ಮನಸ್ಸಿಗೆ ಹತ್ತಿಸಿಕೊಳ್ಳದುದರಿಂದ ನಾನು ಅಷ್ಟಕ್ಕೇ ಬಿಟ್ಟುಬಿಟ್ಟೆ.

ವಿಠಲ— ಆ ಮೇಲೆ ಪುನಃ ಆರೋಗಿಯನ್ನು ನೀನು ನೋಡಿದ್ದೆಯೊ ?

ಪೋಲೀಸು—ಇಲ್ಲ, ಎಂದೂ ಇಲ್ಲ. ಒಂದು ರಾತ್ರಿ ನಾನು ಅವನ ಗತಿಯೇನಾಯ್ತೆಂದು ಆ ಉದ್ದನನ್ನು ಕೇಳಲು, ಅದಕ್ಕವನು, ಆ ಮನುಷ್ಯನು ನೆಮ್ಮದಿಯಾಗಿದಾನೆಂದೂ ಹಳ್ಳಿಯಕಡೆಗೆ ಹೋಗಿದಾನೆಂದೂ ಹೇಳಿದನು. ಆದರೆ ನಮ್ಮ ಹಗಲಿನ ಸರದಿಯ ಕಾನ್‌ಸ್ಟೇಬಿಲ್—ನನ್ನು ವಿಚಾರಿಸಿದುದರಲ್ಲಿ ಈ ಮನೆಯಿಂದ ಯಾರೂ ಎಲ್ಲಿಗೂ ಪ್ರಯಾಣಮಾಡಲಿಲ್ಲವೆಂದು ತಿಳಿಯಿತು. ಅಲ್ಲಿಂದೀಚೆಗೆ ನನಗೆ ಇವರ ವಿಷಯದಲ್ಲೇನೋ ಸ್ವಲ್ಪ ಹಾಗೆ ಹಾಗೆಯೇ. ಈ ಮನೆಯ ಮೇಲೆ ಒಂದು ಕಣ್ಣಿಟ್ಟೇ ಇದೇನೆ.

ವಿಠಲಮೂರ್ತಿಗೆ ಈಗ ಬಹುಬೆಲೆಯಾದ ಸಂಗತಿಗಳು ತಿಳಿದವು. ಇವನು ಮೊದಲು ಆ ಹೆಂಗಸನ್ನು ಕಂಡು ಮಾತಾಡಲೇ ಎಂದುಕೊಂಡನು. ಒಂದು ವೇಳೆ ಅವಳು ಪ್ರಫುಲ್ಲೆಯಲ್ಲವೆಂದು ರುಜುವಾತಾಗಿಬಿಟ್ಟರೆ ತನ್ನ ಮುಂದಿನದಾರಿಗೆ ಕಲ್ಲುಮುಳ್ಳು ಬೀಳುವುದೆಂದು ಹಿಂದೆಗೆದನು. ವಿಠಲನು ಅವರಿಬ್ಬರ ಪಿತೂರಿಯನ್ನೂ ಕಾಂತನಾಥನ ಮರಣವನ್ನೂ ಯೋಚಿಸುತ್ತ ಅಲ್ಲಿ ನಿಂತಾಗ ಆ ಶವವನ್ನು ಅದೇ ಮನೆಯಲ್ಲೇ ಎಲ್ಲೋ ಹೂತಿರಬಹುದೆಂದು ತೋರಿತು. ಎಷ್ಟೆಷ್ಟು ಯೋಚಿಸಿದರೂ ಈ ಅಭಿಪ್ರಾಯವೇ ದೃಢಪಡುತ್ತ ಬಂದಿತು. ಆದರೆ ಆ ಮನೆಯಲ್ಲಿ ಅದನ್ನು ಹುಡುಕುವ ವಿಚಾರವಾಗಿ ವಿಠಲನು ಬಹಳ ಪರದಾಡಿದನು. ಕೊನೆಗೆ ಅದು ಆ ದಿನ ಅಸಾಧ್ಯವೆಂದುಕೊಂಡು ಮನೆಗೆ ಹೋದನು.

ಆದರೂ ವಿಠಲನು ಸುಮ್ಮನಿರಲಿಲ್ಲ. ಮಾಧವನು ವಿಶಾಲದೇಶದವನೆಂಬುದನ್ನೂ ಭಾಸ್ಕರನು ಮೌರ್ಯದೇಶದವನೆಂಬುದನ್ನೂ ಪತ್ತೆಮಾಡಿದನಲ್ಲದೆ ತನ್ನ ಆಫೀಸಿಗೆ ಬರುತ್ತಿದ್ದ ವರ್ತಮಾನಪತ್ರಿಕೆಗಳನ್ನೋದುತ್ತಿರುವಲ್ಲಿ ವಿಶಾಲದೇಶದ ತುಂಟರ ಗುಂಪಿನ ಪೈಕಿ ಅನೇಕಸಲ ಸೆರೆಮನೆಗೆ ಹೋಗಿ ಬಂದಿದ್ದವರಲ್ಲಿ ಈ ಮಾಧವನೂ ಒಬ್ಬನೆಂದು ತೋರಿಸುವುದಕ್ಕೆ ತಕ್ಕ ಇವನ ಭಾವಚಿತ್ರ (Photo) ವೂ ದೊರೆಯಿತು. ಭಾಸ್ಕರನ ವಿಷಯಮಾತ್ರ ಪತ್ತೆಯಾಗಲಿಲ್ಲ.

ಒಂದುದಿನ ವಿಠಲನು ಈ ವಿಚಿತ್ರಗಳನ್ನು ಪರೀಕ್ಷಿಸುತ್ತಿದ್ದಾಗ ವಾರಣಲಾಲನು ಬಂದು—ವಿಠಲ, ನನ್ನ ತಂಗಿಯಿಂದ ಈಗತಾನೆ ಕಾಗದ ಬಂದಿದೆ. ಅವಳು ತಾನು ಒಬ್ಬ ಮಿತ್ರರ ಮನೆಯಲ್ಲಿರುವುದಾಗಿಯೂ, ತನ್ನನ್ನು ಹುಡುಕಬೇಕಾದುದಿಲ್ಲವೆಂದೂ ಬರೆದಿದಾಳೆ.

ವಿಠಲ—ಆ ಮನೆ ಯಾವುದೆಂಬುದನ್ನು ಬರೆದಿದಾಳೆಯೊ ?

ವಾರಣ—ಓಹೋ ! ಬರೆದಿದಾಳೆ. ಇಂತಹ ಬೀದಿ, ಇಷ್ಟನೇ ನಂಬರು ಮನೆಯೆಂದು. ಇಷ್ಟೇಅಲ್ಲ, ನನ್ನನ್ನು ಬರಬೇಕೆಂದೂ ಬರೆದಿದಾಳೆ,

ಇದನ್ನು ಕೇಳುತ್ತಲೆ ವಿಠಲನು ಕುರ್ಚಿಯಿಂದ ಹಾರಿಬಿದ್ದನು. ಕೈ ಬೆರಳನ್ನು ಕಡಿದುಕೊಂಡನು. ಕೆಲವು ನಿಮಿಷ ಮಾತನಾಡಲೇ ಇಲ್ಲ. ಯಾಕೆಂದರೆ ಯಾವ ಮನೆಗೆ ಮಾಧವನೂ ಭಾಸ್ಕರನೂ ಹೋದುದನ್ನು ವಿಠಲನು ಕಂಡನೋ ವಾರಣಲಾಲನು ಹೇಳುವುದೂ ಅದೇ ಮನೆಯ ವಿಳಾಸವೇ ಆಗಿದ್ದಿತು.

ವಿಠಲ—ಎಲ್ಲಿ ? ಆ ಕಾಗದವನ್ನು ಕೊಡು, ನೋಡೋಣ.

ವಾರಣಲಾಲನು ಕೊಟ್ಟನು. ವಿಠಲನು ಓದಿ ನೋಡಿಕೊಂಡು ಬಳಿಕ—ಏನಯ್ಯ, ಇದು ನಿನ್ನ ತಂಗಿಯ ಅಕ್ಷರವೇ ಎಂಬುದು ನಿನಗೆ ಚೆನ್ನಾಗಿ ಗೊತ್ತೊ ?

ವಾರಣ—ಅವಳ ಅಕ್ಷರದಂತೆಯೇ ತೋರುತ್ತಿದೆ.

ವಿಠಲನು ಬಹಳಹೊತ್ತು ಯೋಚಿಸಿ ಕಡೆಗೆ—ಪ್ರಫುಲ್ಲೆಗೆ ರಹಸ್ಯವಾಗಿ ಲಗ್ನವಾದುದನ್ನೂ ಅವಳ ಪತಿಯ ಮರಣವನ್ನೂ ಇನ್ನೂ ನಡೆದ ಇತರ ಸಂಗತಿಗಳನ್ನೂ ವಾರಣನಿಗೆ ತಿಳಿಸಲು ಅವನು ಸ್ತಬ್ಧನಾಗಿ ಏನೂ ತೋರದೆ ಮುಗ್ಧನಾಗಲು ಪುನಃ ವಿಠಲನು—ವಾರಣ, ನೀನು ಈಗ ಆ ಮನೆಗೆ ನಡೆ, ನಾನೂ ನಿನ್ನಸಂಗಡ ಬರುವೆನು. ಸರ್ಕಾರದ ಪತ್ತೇದಾರನಾದ (Detective Officer) ನಾನು ತಮ್ಮ ಮನೆಗೆ ಬಂದಿರುವ ಸಂಗತಿಯು ಅವರಿಗೆ ಗೊತ್ತಾಗದಿರುವಂತೆ ನಾನು ಬೇರೆ ವೇಷದಲ್ಲಿ ಬರುತ್ತೇನೆ. ಅವರು ಮಿತಿಮೀರಿದ ಸಾಹಸ ಮಾಡುತ್ತಿದಾರೆ. ಈ ಹೆಂಗಸು ನಿನ್ನ ತಂಗಿಯೆಂದು ನನಗೆ ತೋರುವುದಿಲ್ಲ,

ಇವಳು ಪ್ರಫುಲ್ಲೆಯ ವೇಷಧಾರಿಣಿ. ನೀನು ಏನೂ ಅರಿಯದವನಂತೆ ಇದ್ದು ಬಿಡು. ಮತ್ತು ನನ್ನನ್ನು ನಿಮ್ಮ ಸೋದರಮಾವನಾದ ವಾಗೀಶನೆಂದೂ ಕಳಿಂಗದೇಶದಿಂದ ಬಂದವನೆಂದೂ ಹೇಳು. ಬಳಿಕ ನನ್ನ ಪಾಡಿಗೆ ನಾನು, ಮಾತಾಡಿಕೊಳ್ಳುವೆನು.

ವಾರಣ—ಪ್ರಫುಲ್ಲೆಯು ಅಲ್ಲಿಲ್ಲದಿದ್ದರೆ ಇನ್ನೆಲ್ಲಿಗೆ ಹೋಗಿದ್ದಾಳು ?

ವಿಠಲ—ನಾವು ಅದನ್ನು ಪತ್ತೆಮಾಡಬೇಕು.

ಒಂದು ಘಂಟೆಯಾದ ಮೇಲೆ ಇಬ್ಬರೂ ಹೊರಟರು ವಿಠಲನು ಬ್ಯಾಂಕಿನ ಸಾಹುಕಾರನ ವೇಷವನ್ನು ತಾಳಿ ಸೋದರಮಾವನಾಗಿದ್ದನು.

---

# ಐದನೆಯ ಪರಿಚ್ಛೇದ

ಆ ಮನೆಯ ಬಾಗಿಲು ಹಾಕಿದ್ದಿತು. ವಿಠಲನೂ ವಾರಣನೂ ಬಂದು ನಿಂತು ಕದವನ್ನು ತಟ್ಟಿದರು. ಒಳಗಿನಿಂದ ಉತ್ತರ ಬರುವುದಕ್ಕೆ ಮೊದಲೇ ಯಾರೋ ಉಪ್ಪರಿಗೆಯ ಕಿಟಕಿಯಿಂದ ಇವರಿಬ್ಬರಕಡೆ ಇಣಿಕಿ ನೋಡಿದರು. ಅದನ್ನು ವಿಠಲನು ಕಂಡನಾದರೂ ತಾನು ಅವನನ್ನು ನೋಡಿದಂತೆ ತೋರ್ಪಡಿಸಿಕೊಳ್ಳಲಿಲ್ಲ. ಬಾಗಿಲು ತೆರೆಯಲು ಒಂದು ಕ್ಷಣದಲ್ಲೇ ಪ್ರಫುಲ್ಲೆಯು—ಚಿಃ ಅಲ್ಲ ಕೃತಕಪ್ರಫುಲ್ಲೆಯು ಮುಂದೆ ನಿಂತರು. ವಾರಣಲಾಲನಿಗೆ ತುಂಬ ಗಲಿಬಿಲಿಯಾಗಿ ಏನೂ ತೋರದೆಹೋಯಿತು.

ಆ ಸ್ತ್ರೀಯು—ಅಣ್ಣಯ್ಯ, ನೀನು ಇಲ್ಲಿಗೆ ಬಂದುದು ನನಗೆ ತುಂಬ ಸಂತೋಷ—ಎಂದು ಹೇಳಿ ವಾರಣನನ್ನು ವಂದಿಸಿ ಅವನನ್ನೂ ವಿಠಲನನ್ನೂ ಒಳಕ್ಕೆ ಕರೆದೊಯ್ದು—ಅಣ್ಣ, ನೀನು ನನ್ನನ್ನು ಕಾಣದೆ ಬಹಳ ಹಲುಬಿರಬಹುದು. ನಾನು ಬರುವಾಗ ಒಂದು ಕಾಗದವನ್ನು ಬರೆದಿಟ್ಟು ಬರಬೇಕಾಗಿದ್ದಿತು. ಒಳ್ಳೆಯದು. ಆಗಲಿ. ಬನ್ನಿ. ಇದರ ವಿವರವನ್ನೆಲ್ಲ ತಿಳಿಯಿಸುತ್ತೇನೆ,

ವಾರಣ—ಪ್ರಫುಲ್ಲೆ, ಇಗೊ, ಈತನು ನಮ್ಮ ಸೋದರಮಾವ, ಕಳಿಂಗ ದೇಶದ ವಾಗೀಶ.

ಪ್ರಫುಲ್ಲೆ—ಓಹೊ ! ಹಾಗೆಯೆ ! ಮಾವಯ್ಯ, ನಾನು ಭಾವಚಿತ್ರದಲ್ಲಿ (Photo) ಮಾತ್ರ ನಿಮ್ಮನ್ನು ನೋಡಿದ್ದುದು.—ಎಂದು ನಮಸ್ಕಾರಮಾಡಿ,—ಬನ್ನಿ, ಈ ಕುರ್ಚಿಗಳ ಮೇಲೆ ಕುಳಿತುಕೊಳ್ಳಿ—ಎಂದಳು.

ಆ ಕಿರುಮನೆಯು ಬಹು ಚೆನ್ನಾಗಿ ಅಲಂಕರಿಸಲ್ಪಟ್ಟಿದ್ದಿತು. ದೊಡ್ಡ ದೊಡ್ಡ ನಿಲವುಗನ್ನಡಿಗಳೂ, ವಿಚಿತ್ರವರ್ಣದ ಚಿತ್ರಪಟಗಳೂ, ಅನೇಕ ಭಾವ ಚಿತ್ರಗಳೂ, ಪರಿಪರಿಯಾದ ಕುರ್ಚಿ, ಮೇಜು, ಬೆಂಚು, ಮಂಚ, ಸೋಫ, ಹಂಸತೂಲಿಕಾತಲ್ಪ ಮುಂತಾದವುಗಳೂ ಉತ್ಕೃಷ್ಟವಾದ ದೀಪೋಪಕರಣಗಳೂ ಇತ್ಯಾದಿಗಳೆಲ್ಲ ತುಂಬಿತುಳುಕುತ್ತಿದ್ದವು.

ವಾರಣನೂ ವಿಠಲನೂ ಕುಳಿತುಕೊಂಡರು. ಬಳಿಕ ಅವಳು—ಕೇಳಿ, ನಾನು ಅಷ್ಟು ತ್ವರೆಯಾಗಿ ಥಟ್ಟನೆ ಮನೆಯನ್ನು ಬಿಟ್ಟು ಹೊರಟು ಬರಬೇಕಾದುದಕ್ಕೆ ಕಾರಣವೇನೆಂದರೆ :—ಭರತಮಾಧವಿಯೂ ನಾನೂ ಬಾಲ್ಯದಿಂದ ಪ್ರಾಣಾಪ್ತ ಸಖಿಯರು. ಅವಳು ವಿಶಾಲದೇಶದ ಮಾಧವನೆಂಬೊಬ್ಬ ದೊಡ್ಡ ಮನುಷ್ಯ ನನ್ನು ಲಗ್ನವಾಡಿಕೊಂಡು ಈಗ್ಗೆ ಕೆಲವು ದಿನಗಳಲ್ಲಿ ಇಲ್ಲಿಗೆ ಬಂದಳು. ಬಂದ ಕೂಡಲೆ ಪ್ರಬಲವಾದ ವ್ಯಾಧಿಯಿಂದ ಹಾಸಿಗೆ ಹತ್ತಿ ಮಲಗಿದಳು. ನನ್ನನ್ನು ನೋಡಬೇಕೆಂದು ಕೇವಲ ಆಶೆಪಟ್ಟು ಒಂದು ದಿನ ಬಲು ಗಾಬರಿಯಾಗುವಂತೆ ಕಾಗದವನ್ನು ಬರೆದು ಕಳುಹಿಸಿದಳು. ಅದು ಬರುವಾಗ್ಗೆ ನಾನು ನಮ್ಮ ಮನೆಯ ದಿವಾನ್‌ಖಾನೆಯಲ್ಲಿ ಕುಳಿತು ಪುಸ್ತಕವೋದುತ್ತಿದ್ದೆನು. ಕಾಗದವನ್ನು ಕಂಡಕೂಡಲೆ ಸಿಡಿಲು ಬಡಿಸಿಕೊಂಡವಳಂತಾಗಿ, ಗೆಳತಿಯು ಕೇವಲ ಅಪಾಯ ಕರವಾದ ಗಂಡಾಂತರಕ್ಕೆ ಸಿಕ್ಕಿರುವಳೆಂದು ಭಾವಿಸಿ ಕಡೆಗೆ ಮುಖವನ್ನಾದರೂ ನೋಡಿಯೇನೋ ಇಲ್ಲವೋ ಎಂದು ತಪಿಸುತ್ತ ನಾನು ಇಂತಹ ಕಡೆಗೆ ಹೋಗು ವೆನೆಂದು ಕೂಡ ಯಾರ ಸಂಗಡವೂ ಹೇಳದೆಯೇ ಬಂದುಬಿಟ್ಟೆ. ಭರತಳಿಗೆ ರೋಗವು ಅತಿಯಾಗಿದ್ದಿತು. ಅಂದಿನಿಂದ ನಿನ್ನೆಯವರೆಗೂ ಮನೆಯ ಸಮಾ ಚಾರವೇ ತಿಳಿದಿರಲಿಲ್ಲವಾಗಿ ಬಲು ಹಂಬಲಿಸಿದೆ. ನೀನು ಊರಿಗೆ ಬಂದುದು

ನಿನ್ನೆ ಗೊತ್ತಾಗಲು ನಾನು ನಿನಗೆ ಕಾಗದ ಬರೆದೆ. ಈಗ ನಮ್ಮ ಮಾವಯ್ಯ ವಾಗೀಶನು ದಯಮಾಡಿಸಿದುದು ಮತ್ತಷ್ಟು ಸಂತೋಷ. ಮತ್ತು ನನ್ನ ಪುಣ್ಯಕ್ಕೆ ಸಖಿಗೂ ಸಂಪೂರ್ಣವಾಗಿ ಆರೋಗ್ಯವುಂಟಾಗಿದೆ. ಇನ್ನೇನು, ಈ ಹೊತ್ತೋ ನಾಳೆಯೊ ! ನಾನೂ ಮನೆಗೆ ಬರುವೆನು.

ವಾರಣ—ಈಚೆಗೆ ನಿನ್ನ ಸಂಗಾತಿಯವರಲ್ಲಿ ಯಾರಿಗೂ ಮದುವೆಯಾದ ಸಂಗತಿ ನನಗೆ ತಿಳಿದಿರಲಿಲ್ಲ, ಒಳ್ಳೆಯದು. ನಿನ್ನ ಆ ಗೆಳತಿಯ ಹೆಸರನ್ನು ಇನ್ನೊಂದು ಸಲ ಹೇಳು.

ಕೃತಕ ಪ್ರಫುಲ್ಲೆ—ಭರತ ಮಾಧವಿ. ಯಾಕೆ ಅಣ್ಣಯ್ಯ, ನೀನವಳನ್ನು ಮರೆತು ಬಿಟ್ಟೆಯ ? ಅವಳೂ ನಾನೂ ಜತೆಯಲ್ಲೇ ಪಾಠಶಾಲೆಗೆ ಹೋಗುತಿರ ಲಿಲ್ಲವೆ ? ಒಳ್ಳೇದು ಇನ್ನೇನು, ಕೂಡಲೆ ಅವಳನ್ನು ಇಲ್ಲಿಯೇ ನೋಡುವೆಯಂತೆ. ಮಾವಯ್ಯ, ಅತ್ತೆ ಸೌಖ್ಯವಾಗಿದಾರೆಯೆ ?

ವಿಠಲ—ಏನಮ್ಮ ಮಗು, ನೀನು ಎಲ್ಲವನ್ನೂ ಮರೆತಂತೆ ತೋರುವುದು ! ನಾನು ನಿತ್ಯ ಬ್ರಹ್ಮಚಾರಿಯಲ್ಲವೆ ?

ಈಗ ಕೃತಕ ಪ್ರಫುಲ್ಲೆ ಪೆಚ್ಚಾದಳು. ಬಳಿಕ ಹೇಗೂ ಈ ಐಬನ್ನು ತೋರ್ಪ ಡಿಸಿಕೊಳ್ಳಬಾರದೆಂದು ಬೇಗ ಎಚ್ಚತ್ತುಕೊಂಡು ನಗುತ— ಅಯ್ಯೊ ! ನಾನು ಎಂತಹ ಹುಚ್ಚಿ ! ಇದು ನನಗೆ ಗೊತ್ತಿದ್ದರೂ ಹೀಗೇಕೆ ಮಾತಾಡಿದೆ ! ದಯ ವಿಟ್ಟು ಒಂದುಕ್ಷಣ ಸ್ವಲ್ಪ ತಡೆಯಿರಿ. ನನ್ನ ಸಖಿಯನ್ನು ಕರೆತರುತ್ತೇನೆ.— ಹೀಗೆಂದು ವೈಯಾರದಿಂದ ಮುದ್ದುಗುಲುಕುತ್ತ ಹೊರಟಳು. ಅವಳು ಹೊಂಚಿ ಕೇಳಲಾರದಷ್ಟುದೂರ ಹೋಗಲು ವಾರಣನು ಅತಿ ಕುತುಕದಿಂದ ವಿಠಲನಂ ಕುರಿತು ಕಿವಿಯಲ್ಲಿ— ಅಯ್ಯೊ ! ಇವಳು ನನ್ನ ತಂಗಿಯಲ್ಲ. ಮೊದಲು ಪ್ರಫು ಲ್ಲೆಯೆಂದೇ ಭ್ರಮಿಸಿದೆನು. ಆದರೆ ಈ ಗಿಣಿ ಬಾಯಿಬಿಟ್ಟ ಕೂಡಲೇ ಕಾಗೆ ಯಾಗಿ ತೋರಿತು. ಅಯ್ಯೋ ದೇವರೆ ! ಇದರ ಪರಮಾರ್ಥವೇನು ವಿಠಲ ?

ವಿಠಲ—ಇದರ ಅರ್ಥ ಪಿತೂರಿ, ನೀನು ಬಹಳ ಹುಷಾರಾಗಿರಬೇಕು. ಇವಳು ನಿನ್ನ ತಂಗಿಯಲ್ಲವೆಂದು ನೀನು ಸಂಶಯಪಡುತ್ತಿ ಎಂಬುದು ಇವಳಿಗೆ

ಗೊತ್ತಾಗಕೂಡದು. ಇವಳು ಅದ್ಭುತವಾದ ನಟಕುಗಾತಿ. ಸ್ವಲ್ಪ ತಾಳು, ಇದನ್ನು ಅಮೂಲಾಗ್ರವಾಗಿ ಕಂಡುಹಿಡಿಯುತ್ತೇನೆ.

ವಿಠಲನು ಇದಕ್ಕಿಂತ ಹೆಚ್ಚಾಗಿ ಇನ್ನೇನನ್ನು ಹೇಳುವುದಕ್ಕೂ ಸಾಧ್ಯವಾಗ ಲಿಲ್ಲ. ಯಾಕೆಂದರೆ :—ಅಷ್ಟರಲ್ಲೇ ಮಹಡಿಯ ಮೇಲಿಂದ ಕಾಲ್ಗಡಗದ ಪುಲ್ ಪುಲ್ ಸದ್ದು ಒಬ್ಬ ಸ್ತ್ರೀಯು ಸನ್ನಿಹಿತಾಗಮನವನ್ನು ಸೂಚಿಸಿತು. ಕೃತಕ ಪ್ರಫುಲ್ಲೆಯು ಗೆಳತಿಯನ್ನು ಸಂಗಡ ಕರೆತಂದಳು. ಅವಳೇ ಭರತಮಾಧವಿ ಯೆಂದು ತಿಳಿಸಿದಳು. ಇಬ್ಬರೂ ಚೆನ್ನಾಗಿ ನೋಡಿದರು. ಮತ್ತು ಸಂತೋಷ ಗೊಂಡಂತೆಯೂ ನಟಿಸಿದರು. ಭರತ ಮಾಧವಿಯೂ ಇವರನ್ನು ಮರ್ಯಾದೆ ಯಿಂದ ಕಂಡಳು. ಅವಳ ಕೋಮಲ ಕಂಠಸ್ವರವು ಸಂಗೀತಕ್ಕಿಂತ ಸುಶ್ರಾವ್ಯ ವಾಗಿದ್ದಿತು. ಮತ್ತು ಅವಳು ಮಹಾಘನತೆವಂತಳಂತೆ ತೋರುತ್ತಿದ್ದಳು.

ಭರತಮಾಧವಿ—ವಾರಣ, ಪ್ರಫುಲ್ಲೆಯನ್ನು ಅವಳ ಬಂಧುವರ್ಗದವರನ್ನು ಕಂಡರೆ ನನಗೆ ಬಲು ಸಲಗೆ. ಆದುದರಿಂದಲೇ ಸ್ವತಂತ್ರಿಸಿ ನಿನ್ನ ತಂಗಿಯನ್ನಿ ಲ್ಲಿಗೆ ಕರೆಯಿಸಿಕೊಂಡೆನು. ಇದಕ್ಕಾಗಿ ನೀನೇನೂ ಅನ್ಯಥಾ ಯೋಚಿಸಬೇಡ.

ವಾರಣ—ಅದೇನೂ ಬಾಧಕವಿಲ್ಲ.

ತನ್ನ ತಂಗಿ ಪ್ರಫುಲ್ಲೆಯು ಮಾಯವಾಗಿರುವುದು. ಈ ಇಬ್ಬರು ಸ್ತ್ರೀ ಯರೂ ಈ ವಿಷಯದಲ್ಲಿ ಏನೋ ಕೈಕರಣಮಾಡಿರುವುದು ಮುಂತಾದುವೆಲ್ಲ ಚೆನ್ನಾಗಿ ಗೊತ್ತಿದ್ದರೂ ವಾರಣನು ಭರತಮಾಧವಿಯ ರೂಪಕ್ಕೂ ಅವಳ ಚಬು ಕಿಗೂ ಮರುಳಾಗಿ ಅವಳ ಬಲೆಗೆ ಬೀಳುವಂತಾದನು. ಅವನ ಹೃದಯನಾ ಡಿಯು ಬೇಗ ಬೇಗ ಬಡಿಯುತಬಂದಿತು. ಮೋಹದ ಬೀಜವು ಮೊಳೆಯಿತು. ಮತ್ತು ವಿಠಲನು ಅನೇಕ ಸ್ತ್ರೀಯರ ನಡುವೆ ಎಷ್ಟೋಸಲ ಓಡಾಡಿದ್ದರೂ ಎಂದೂ ಯಾರ ಕಟಾಕ್ಷಕ್ಕೂ ಸೋತಿರಲಿಲ್ಲ. ತನ್ನ ಗೌರವವನ್ನು ಇದರಿಂದ ಮತ್ತಷ್ಟು ಹೆಚ್ಚಿಸಿಕೊಂಡಿದ್ದನು. ಇಂತಹವನು ಈಗ ಮಾಧವನ ಪತ್ನಿಯೆಂದು ಬೊಂಕುವ ಮಾಯಗಾತಿಯಾದ ಈ ಭರತಮಾಧವಿಯ ಕಟಾಕ್ಷವೀಕ್ಷಣಕ್ಕೆ ಕಟ್ಟು ಬಿದ್ದನು. ಈ ಮೋಹಾಂಧಕಾರದಿಂದ ತನ್ನನ್ನೇ ತಾನು ಮರೆತುಬಿಟ್ಟನು.

ಆದರೆ ಅಷ್ಟರಲ್ಲೇ ವಿಠಲನು—ವಾರಣ, ಏಳು, ಹೋಗೋ, ನನಗೆ ಬೇರೆ ಸ್ವಲ್ಪ ಕೆಲಸವುಂಟು. ಮಗು, ಪ್ರಫುಲ್ಲೆ, ನಾನು ನಿಮ್ಮ ಮನೆಯಲ್ಲೆ ನಿನ್ನ ಮತ್ತು ವಾರಣನ ಜತೆಯಲ್ಲಿ ಇನ್ನೂ ಕೆಲವು ದಿನಗಳನ್ನು ಕಳೆಯಬೇಕೆಂದು ಯೋಚಿಸಿದೇನೆ.

ಕೃತಕ ಪ್ರಫುಲ್ಲೆ—ನಾನು ನಾಳೆ ಮನೆಗೆ ಬರಬೇಕೆಂದಿದೇನೆ—ಎಂದಳು.

ವಾರಣನು ಭರತಮಾಧವಿಯ ಮೇಲೆ ಕಣ್ಣು ಹಾಕಿದ ಸಂಗತಿಯು ಚತುರನಾದ ವಿಠಲನಿಗೆ ಗೊತ್ತಾಗಿ ಹೋಯಿತು. ಇಬ್ಬರೂ ಈಚೆಗೆ ಹೊರಟು ಬಂದರು. ಬಳಿಕ ವಿಠಲನು ವಾರಣನಂ ಕುರಿತು—ಅಯ್ಯ, ನಾನು ಸಂಶಯ ಪಡುತ್ತಿರುವುದು ಇವರಿಬ್ಬರು ಸ್ತ್ರೀಯರಿಗೂ ಪತ್ತೆಯಾಗಕೂಡದು, ಇದನ್ನು ಮಾತ್ರ ಮರೆಯಬೇಡ. ಇಷ್ಟರಮೇಲೆ ಬಂದುದೆಲ್ಲಾ ಬರಲಿ, ಇದಲ್ಲದೆ ವಾರಣ, .... .... .... .... .... ....

ಇಷ್ಟರಲ್ಲೇ ವಿಠಲನು ವಾರಣನ ಮುಖವನ್ನು ದೃಷ್ಟಿಸಿ ನೋಡಿ ಆದರದಿಂದ—ನಿನ್ನ ವಿವೇಕದಿಂದ ನಿನ್ನ ಸಹೋದರಿಯು ಉದ್ಧಾರವಾಗಬೇಕು, ಮತ್ತು ನೀನು ಇವರ ಸಂಗಡ ಮಾತಾಡುವಾಗ ನಾನು ವಿಠಲನೆಂಬುದನ್ನು ಹೇಳುವುದಿಲ್ಲವೆಂದು ನನಗೆ ಭಾಷೆ ಕೊಡಬೇಕು.

ವಾರಣನು ಯಜಮಾನನ ಮುಖವನ್ನು ನೋಡಿ ಕೈಯಲ್ಲಿ ಕೈಯಿಟ್ಟು—ಅಯ್ಯ, ಇಗೋ ಪ್ರಮಾಣಮಾಡುತ್ತೇನೆ. ನಾನು ಅವರೆದುರಿಗೆ ನಿನ್ನ ಹೆಸರನ್ನು ಹೇಳುವುದಿಲ್ಲ. ನಿನಗೆ ನನ್ನಲ್ಲಿ ನಂಬಿಕೆ ಸಾಲದೆ ?

ವಿಠಲ—ಅಯ್ಯ, ನೀನು ತರುಣ. ತಪ್ಪುದಾರಿಗೆ ಬಿದ್ದೀಯೆ ಎಂದು ನನ್ನ ಮನಸ್ಸು ಕಳವಳಪಡುತ್ತಿದೆ. ಆಗಲಿ, ನೀನೇನೂ ಅನ್ಯಥಾ ಎಣಿಸಬೇಡ. ನಾನು ಬಲು ಎಚ್ಚರಿಕೆಯಿಂದಿರುವೆನು. ನಾನು ಈ ಸಾಯಂಕಾಲ ನಿಮ್ಮ ಮನೆಗೆ ಬಂದು ಸೋದರಮಾವನಾಗುತ್ತೇನೆ.

ವಾರಣ—ಆಗಲಿ, ನಾನು ನಿನ್ನನ್ನು ನಿರೀಕ್ಷಿಸುತ್ತಿರುತ್ತೇನೆ.

ವಿಠಲನು ಹೋಗಿ ಮಾಧವನೂ ಭಾಸ್ಕರನೂ ಇರುವ ರಹಸ್ಯ ಸ್ಥಳವನ್ನು ಹುಡುಕಲು ಯತ್ನಿಸಿದನು.

ವಾರಣಲಾಲನು ಮನೆಗೆ ಹೋದನು. ಅವನಿಗುಂಟಾದ ಮನೋಭಾವ ಗಳನ್ನು ಹೀಗೆಂದು ಹೇಳುವುದಕ್ಕೂ ಸಾಧ್ಯವಿಲ್ಲ. ಬುದ್ಧಿಯು ಗೋಜಿಹೋ ಯಿತು. ಪ್ರಫುಲ್ಲೆಯ ಮುಖವನ್ನು ಆ ಹೊಸಬಳ ಮುಖಕ್ಕೆ ಹೋಲಿಸಿದನು. ಮನ ಸ್ಸು ನಂಬಲಿಲ್ಲ. ಆಗ ತನ್ನ ತಂಗಿಯ ಗತಿ ಏನಾಯಿತೋ ಎಂದು ಕಣ್ಣೀರಿ ಡುತ್ತ ಗೋಳಾಡಿದನು. " ಅಯ್ಯೋ! ನಾನು ಎಂತಹ ನಿರ್ಭಾಗ್ಯ! ಅಂತಹ ತಂಗಿಯನ್ನು ಕಳೆದುಕೊಂಡೆನಲ್ಲಾ! ಎಂತಹ ಮುದ್ದುಮುಖ! ಅಹಾ! ಪ್ರಫುಲ್ಲ!, ಎಂದು ಪ್ರಲಾಪಿಸುತ ಈ ಪಿತೂರಿಯ ವಿಷಯವು ಆ ಸಾಧುಬಾಲಿಕೆಗೆ ಗೊತ್ತೇ ಇರಲಾರದೆಂದೂ ಯಾರೋ ಮೋಸದಿಂದ ಅವಳನ್ನು ಕದ್ದೊಯ್ದರೆಂದೂ ಮರು ಗಿದನು. ಅವಳು ದೇವಕನ್ಯಕೆಯೆಂದೇ ಗೌರವಿಸಿದನು. ಬಳಿಕ ವಾರಣನು ವಿಠಲನಿಗೆ ಒಂದು ಕಾಗದವನ್ನು ಬರೆದನು. ಅದರಲ್ಲಿ ತಾನು ಕೆಲವು ದಿನ ಪರ ಸ್ಥಳಕ್ಕೆ ಹೋಗುವುದಾಗಿಯೂ ಅವನು (ವಿಠಲ) ಬಂದು ತನ್ನ ಮನೆಯಲ್ಲಿ ಸೋದರ ಮಾವನಾಗಿ ಇರಬಹುದೆಂದೂ ತನ್ನ ಕೃತಕಸಹೋದರಿಗೂ ಈ ವಿಷಯ ವನ್ನು ತಿಳಿಸುವುದಾಗಿಯೂ ಕಾಣಿಸಿದ್ದನು. ಬಳಿಕ ತಾನು ಪ್ರಯಾಣಕ್ಕೆ ಸನ್ನ ದ್ಧನಾಗಿ ಬಂಗಲೆಯ ಬಾಗಿಲಿಗೆ ಬರುವಾಗ್ಗೆ ಸರಿಯಾಗಿ ಯಾವನೋ ಒಬ್ಬನು ಒಂದು ಕಾಗದವನ್ನು ತಂದು ಕೊಟ್ಟನು ಅದರ ಅಕ್ಷರವು ತನ್ನ ನಕಲು ತಂಗಿಯು ಬರೆದುದಾಗಿದ್ದಿತು. ಅದರಲ್ಲಿ—' ಎಲೈ, ಪ್ರಿಯಸಹೋದರನೆ, ನನ್ನ ಸಖಿಯ ಗಂಡನು ಈ ರಾತ್ರಿ ನಮ್ಮನ್ನು ನಾಟಕಕ್ಕೆ ಕರೆದುಕೊಂಡು ಹೋಗುವುದಾಗಿ ಹೇಳಿದ್ದನು. ಆದರೆ ಆತನು ಏನೋ ಕೆಲಸದ ಮೇಲೆ ಹೋಗಿರುವುದರಿಂದ ಈ ದಿನ ಮನೆಗೆ ಬರುವುದಕ್ಕಾಗುವುದಿಲ್ಲವೆಂದು ತಿಳಿಸಿರುತ್ತಾನೆ. ಆದ್ದರಿಂದ ದಯೆಯಿಟ್ಟು ನೀನೂ ನಮ್ಮ ಮಾವಯ್ಯನೂ ಬಂದು ನಮ್ಮನ್ನು ನಾಟಕಕ್ಕೆ ಕರೆದುಕೊಂಡು ಹೋಗಬೇಕೆಂದು ಬೇಡುತ್ತೇನೆ. ಒಂದುವೇಳೆ ಮಾವಯ್ಯ ಬರುವುದಕ್ಕಾಗದಿದ್ದರೂ ನೀನಾದರೂ ಬರಲೇಬೇಕು,' ಎಂದು ಬರೆದಿದ್ದಿತು. ವಾರಣನು ಈ ಕಾಗದವನ್ನು ಓದಿಕೊಂಡನಂತರ ಇದನ್ನು ಹರಿದು ಹಾಕಬೇ ಕೆಂದುಕೊಂಡನು. ಪುನಃ ಯೋಚಿಸಿ ಇದನ್ನು ವಿಠಲಮೂರ್ತಿಗೆ ತೋರಿಸಿ ಅವನು ಹೇಳಿದಂತೆ ನಡೆಯುವುದು ಉತ್ತಮವೆಂದು ಅಂದುಕೊಂಡನು.

ವಿಠಲನ ಆಫೀಸಿಗೆ ಬಂದು ನೋಡುವಲ್ಲಿ ಆತನು ಏನೋ ಒಂದು ಕೇಸಿನ ಪತ್ತೆಗೆ ಹೋಗಿರುವನೆಂದೂ ಇನ್ನೂ ಬಹಳಹೊತ್ತು ಬರುವುದಿಲ್ಲವೆಂದೂ ನಟೇ

ಶನು ಹೇಳಿದನು. ಈಗ ವಾರಣನಿಗೆ ಏನುಮಾಡುವುದಕ್ಕೂ ತೋರಲಿಲ್ಲ. ಸಂಜೆ ಆರು ಘಂಟೆಯುವರೆಗೂ ನಿರೀಕ್ಷಿಸಿದರೂ ಬರಲಿಲ್ಲ. ಇನ್ನೂ ಮುಂದಕ್ಕೂ ಬೇಗ ಬರಲಾರನೆಂದು ಊಹಿಸಿ ಸಧ್ಯಕ್ಕೆ ಆ ಕೃತಕ ಸಹೋದರಿಯ ಕಾಗದದಂತೆಯೇ ನಡೆದು ಅವರನ್ನು ನಾಟಕಕ್ಕೆ ಕರೆದುಕೊಂಡು ಹೋಗುವಂತೆಯೂ ಮಾರುದಿನ ತನ್ನ ಪ್ರಯಾಣವನ್ನು ಬೆಳೆಯಿಸುವುದಾಗಿಯೂ ನಿರ್ಧರಿಸಿಕೊಂಡು ಅವರ ಮನೆಯು ಬಾಗಿಲಬಳಿಗೆ ಹೋಗಿ ಕದವನ್ನು ತಟ್ಟಲು ಸುಂದರಿಯಾದ ಒಬ್ಬ ತರುಣಿಯು ಬಂದು ಕದವನ್ನು ತೆರೆದಳು. ಅವಳನ್ನು ನೋಡುತ್ತಲೇ ವಾರಣನಿಗೆ ಕೇವಲ ಮನೋವಿಕಾರವಾಯಿತು. ಬಹುಮಟ್ಟಿಗೂ ಮರುಳಾದನು.

ಭರತಮಾಧವಿ—ಓಹೊ ! ನಮ್ಮ ವಾರಣನೊ ! ನೀನೊಬ್ಬನೇ ಬಂದೆಯಾ? ಮಾವಯ್ಯ ಬರಲಿಲ್ಲವೆ ?

ವಾರಣ—ಇಲ್ಲ, ಆತನಿಗೇನೋ ಬೇರೆ ಕೆಲಸವಿದ್ದಿತು.

ಭರತಮಾಧವಿ—ತಂಗಿ ಮಹಡಿಯ ಮೇಲಿದಾಳೆ. ಇಗೋ ಇನ್ನೇನು ಬರುತ್ತಾಳೆ ! ಅಗೋ ! ಆ ಪೆಟ್ಟಿಗೆಯಲ್ಲಿ ಟಿಕೆಟ್ಟುಗಳಿವೆ ತೆಗೆದುಕೊ. ನಾನು ಸ್ವಲ್ಪ ಒಳಕ್ಕೆ ಹೋಗಿ ಬರುತ್ತೇನೆ—ಹೀಗೆನ್ನುತ್ತ ಬಲು ವಿಲಾಸದಿಂದ ಮುದ್ದು ಗುಲುಕುತ್ತ ಹೊರಟಳು.

ವಾರಣನ ಮನಸ್ಸು ಚಲಿಸಿತು. ವಿವೇಕವು ಅವನನ್ನು ಕೈಬಿಡಹತ್ತಿತು. ಭರತಳು ಕ್ಷಣದಲ್ಲೇ ಕೃತಕ ಪ್ರಫುಲ್ಲೆಯನ್ನು ಸಂಗಡ ಕರದುಕೊಂಡು ಬಂದಳು. ಕೃತಕ ಪ್ರಫುಲ್ಲೆಯು ಸೊಗಸಾದ ಬಿಳೀ ರೇಷ್ಮೆಯ ಹೂವಿನ ಸೀರೆಯನ್ನುಟ್ಟಿ ದ್ದಳು. ನಕ್ಷತ್ರಮಂಡಲವನ್ನಣಕಿಸುವ ವಜ್ರದ ಬೆಂಡೋಲೆ, ಪುಷ್ಯರಾಗದ ಮೂಗುಬಟ್ಟು, ಕೆಂಪಿನ ಜಡೆಹೂವು, ಚಿನ್ನದ ಒಡ್ಯಾಣ, ಬೆಳ್ಳಿಯ ಕಾಲ್ಕಡಗ. ಇಷ್ಟುಹೊರತು ಮತ್ತೆ ಯಾವ ವಿಶೇಷ ಆಭರಣಗಳನ್ನೂ ದರಿಸಿರಲಿಲ್ಲ. ದೀಪದ ಪ್ರಭೆಗೆ ಈ ಜೀವರತ್ನಗಳು ಥಳಥಳಿಸುತಿದ್ದುವು. ಒಟ್ಟು ನೋಡಿದರೆ ಅವಳು ಜಗನ್ಮೋಹಿನಿಯಾಗಿದ್ದಳು. ಅವಳು ವಾರಣನು ಕುರಿತು—ಅಣ್ಣಯ್ಯಾ, ಬಂದೆ ಯಾ ! ಸಂತೋಷ. ಈ ರಾತ್ರಿ ನಾಟಕದ ಆನಂದವನ್ನು ಅನುಭವಿಸೋಣ. ಮದುವೆಯಾಗಿರುವ ಈ ಪರಸ್ತ್ರೀಯು ಸಂಗಡ ಬರುತ್ತಾಳಲ್ಲಾ ಎಂದು ನೀನೇ

ನೂ ಸಂಕೋಚಪಟ್ಟುಕೊಳ್ಳಬೇಡ. ಮತ್ತು ಈ ದಿನ ಇವಳು ಭರತಮಾಧವಿ ಯಲ್ಲ, ಇವಳ ಹೆಸರು ತಿಲೋತ್ತಮೆ ಅಥವಾ ತಿಲಮೆ. ಇವಳು ಮಾಟಮಂತ್ರ ಗಳನ್ನು ಬಲ್ಲ ಚತುರೆ. ಐಗುಪ್ತದೇಶದ ವೈಯಾರೆ.

ಈ ಸಲ್ಲಾಪವು ಕಪಿಗೆ ಏಣಿಹಾಕಿಕೊಟ್ಟಂತೆ ವಾರಣನಿಗೆ ಮತ್ತೂ ಉತ್ತೇ ಜಕವಾಯಿತು. ಅವನು ಪುನಃಪುನಃ "ತಿಲೋತ್ತಮೆ, ತಿಲಮೆ" ಎಂದು ಆ ಆದಿಶಕ್ತಿಯ ನಾಮಮಂತ್ರವನ್ನು ಜಪಿಸುತ್ತ ಬಂದನು. ತಿಲಮೆಯು ಗಟ್ಟಿ ಯಾಗಿ ನಕ್ಕಳು. ಮತ್ತು ಆ ಇಬ್ಬರು ಸ್ತ್ರೀಯರೂ ಪರಸ್ಪರ ಓರೆಗಣ್ಣಿಂದ ನೋಡಿಕೊಂಡರು. ಬಳಿಕ ಎಲ್ಲರೂ ಒಂದು ಸಾರೋಟಿನಲ್ಲಿ ಕುಳಿತು ಹೊರ ಟರು. ಆಗ್ಗೆ ಸರಿಯಾಗಿ ಒಂದು ಗಾಡಿಯಲ್ಲಿ ಒಬ್ಬ ಮುದುಕನು ಕುಳಿತು ಕೊಂಡು ಈ ಮನೆಯ ಮಾರ್ಗವಾಗಿ ಬಂದು ಇವರನ್ನು ನೋಡಿಕೊಂಡು ಹೋದನು. ನಟೇಶನೇ ಈ ಮುದುಕ.

ವಾರಣನು ಆಫೀಸಿಗೆ ಬಂದು ಹೋದಮೇಲೆ ಇವನ ನಡತೆಯಲ್ಲಿ ಏನೋ ಸಂಶಯ ಉಂಟಾದುದರಿಂದ ನಟೇಶನು ಇವನ ಚರ್ಯೆಗಳನ್ನು ತಿಳಿಯಬೇಕೆಂದು ಈಗ ಬಂದಿದ್ದುದು. ಅದಕ್ಕೆ ತಕ್ಕಂತೆ ವಾರಣನು ಇದೇ ಸ್ತ್ರೀಯರ ಜತೆಯಲ್ಲಿ ದ್ದುದನ್ನು ಕಂಡು ಪರಮಾಶ್ಚರ್ಯಗೊಂಡನು. ಇದನ್ನೆಲ್ಲ ನಟೇಶನು ವಿಠಲನಿಗೆ ತಿಳಿಸಬೇಕೆಂದುಕೊಂಡನು. ಯಾಕೆಂದರೆ, ವಾರಣನು ಪ್ರಮಾಣವಾಗಿ ನಡೆ ಯದೆ ದುರ್ಮಾರ್ಗಕ್ಕೆ ಬಿದ್ದಂತೆ ಅವನಿಗೆ ತೋರಿತು.

---

## ಆರನೆಯ ಪರಿಚ್ಛೇದ

ವಿಠಲನ ಮನಸ್ಸು ಮೊದಲಿಗಿಂತ ಸ್ವಲ್ಪಮಟ್ಟಿಗೆ ಸುಸ್ಥಿತವಾಯಿತು. ಈ ಕೇಸಿನ ಪತ್ತೆಯ ವಿಷಯದಲ್ಲಿ ಯಾವುದೊಂದು ದಾರಿಗೂ ಅವಕಾಶ ವಿರಲಿಲ್ಲ. ಈಗ ಸ್ವಲ್ಪ ಸುಳಿವು ಸಿಕ್ಕಿತು. ಆತನು ಇದು ವಿಚಿತ್ರವಾದ

ಮದುವೆ. ವರನು ಲಗ್ನದಲ್ಲೇ ಸತ್ತನು. ವಧುವು ಮಾಯವಾಗಿದಾಳೆ. ಅವಳೇ ತಾನೆಂದು ಮತ್ತೊಬ್ಬಳು ವೇಷಧಾರಿಣಿಯಾಗಿದಾಳೆ. ಇದು ಬಲು ಚಮತ್ಕಾರವುಳ್ಳ ಪಿತೂರಿ. ಏನಾದರೂ ಸಾಹಸಮಾಡಿ ಇದನ್ನು ಪತ್ತೆಮಾಡಬೇಕು. ಇಲ್ಲದಿದ್ದರೆ ಇದೇ ಪ್ರಯತ್ನದಲ್ಲಿ ಸಾಯಲಾದರೂಬೇಕು. ಇನ್ನು ಮುಂದಕ್ಕೆ ಈ ಕೃತಕ ಪ್ರಫುಲ್ಲೆಯು ತಾನು ಕಾಂತನಾಥನನ್ನು ಮದುವೆಯಾದುದುಂಟೆಂದೂ ಹೇಳಿಯಾಳು. ಆಹಾ! ಇದರ ಕೃತ್ರಿಮವೆಲ್ಲ ಈಗ ತೋರುತ್ತಿದೆ. ಅಂತು ಏನೋ ಒಂದು ದೊಡ್ಡ ಆಶೆಯಿಂದ ಹೀಗೆ ಮಾಡುತ್ತಿದಾರೆ' ಎಂದುಕೊಂಡನು.

ಬಳಿಕ ಕಾಂತನಾಥನ ಜನ್ಮಭೂಮಿಯೂ ವಿಶಾಲದೇಶದ ರಾಜಧಾನಿಯೂ ಆದ ಲಲಿತಪಟ್ಟಣದಲ್ಲಿರುವ ತನ್ನ ಮಿತ್ರನಾದ ಒಬ್ಬ ಪತ್ತೇದಾರನಿಗೆ ಒಂದು ಕಾಗದವನ್ನು ಬರೆದು ಅದರಲ್ಲಿ—ಚಾರುಚಂದ್ರನ ಮನೆತನದ ಸಂಗತಿ, ಕಾಂತನಾಥ ಮಾಧವ ಭಾಸ್ಕರ ಈ ಎಲ್ಲರ ವಿಷಯ, ಇವನ್ನೆಲ್ಲ ರಹಸ್ಯವಾಗಿ ವಿಚಾರಿಸಿ ತಿಳಿಸಬೇಕೆಂದು ಕೇಳಿದ್ದನು. ಆ ಪತ್ತೆದಾರನೂ ಅಲ್ಲಿ ಕೇವಲ ಹೆಸರುಗೊಂಡವನಲ್ಲದೆ ವಿಠಲನಿಗೆ ಪ್ರಾಣಾಪ್ತನೂ ಹೌದು. ಮಾಧವನೂ ಭಾಸ್ಕರನೂ ಚಾರುಚಂದ್ರನ ಮನೆತನಕ್ಕೆ ಸೇರಿದವರೋ ಏನೋ ಕಾಂತನಾಥನನ್ನು ನಾಶಮಾಡುವುದರಿಂದ ಇವರಿಗೇನಾದರೂ ಹೆಚ್ಚು ಫಲವಿರಬಹುದೇನೋ ಎಂದು ವಿಠಲನು ತುಂಬ ಹಲುಬುತಿದ್ದನು. ಸಕಾಲದಲ್ಲಿ ಬಂದ ಸದುತ್ತರವು ವಿಠಲನಿಗೆ ಕೇವಲ ಉತ್ಸಾಹವನ್ನುಂಟುಮಾಡಿತು. ಇನ್ನು ಮುಂದಕ್ಕೆ ತಡಮಾಡಬಾರದೆಂದು ವಿಠಲನು ಮಾಧವನನ್ನೂ ಭಾಸ್ಕರನನ್ನೂ ಹುಡುಕತೊಡಗಿ ಆವರಿಬ್ಬರೂ ಪ್ರಾಯಶಃ ಇಂಗಾಲ ಸುಂದರನ ಹೋಟಲಿನಲ್ಲಿರಬಹುದೆಂದುಕೊಂಡನು. ಆ ಅನ್ನಶಾಲೆಯು ಜಾಫರ್ ಮಾರ್ಕೆಟ್ಟಿನ ಪೋಲೀಸ್ ಆಫೀಸಿಗೆ ಹತ್ತಿರದಲ್ಲೇ ಇತ್ತು. ಆ ಮನೆಯ ಮುಂಭಾಗ ಬಹು ಮನೋಹರವಾಗಿತ್ತು. ಆದರೆ ಒಳಗೆ ನೋಡಲು ಅದರ ಯೋಗ್ಯತೆ ಬದಲಾಯಿಸಿತು. ಒಂದು ಮೂಲೆಯಲ್ಲಿ ಒಡೆದುಹೋದ ಒಂದು ರಾಗಮಾಲೆ, ಸಿಡುಕು ಮೋರೆಯವನೊಬ್ಬನು ಅದನ್ನು ಸರಿಮಾಡಲು ವಿಫಲಪ್ರಯತ್ನ ಮಾಡುತಿದ್ದನು. ಮಧ್ಯದ ಹಾಲಿನಲ್ಲಿಯೂ ಕೊಠಡಿಗಳಲ್ಲೂ ಜನವು ಕಿಕ್ಕಿರಿಯುತ್ತಿದ್ದಿತು. ತಮಾಕುಧೂಮದ ಮತ್ತು

ನಾಸಿಕಾಚೂರ್ಣದ ವಾಸನೆ ತಾನೇತಾನಾಗಿದ್ದಿತು. ಆ ಹೋಟಲಿನಲ್ಲಿ ಸ್ತ್ರೀಯು ರೂ ಇಳಿದು ಕೊಳ್ಳುವ ಪದ್ಧತಿ ಇತ್ತು. ವಿಠಲನು ಒಳಗೆ ತಲೆಹಾಕಿ ನೋಡಿ ದನು. ಅಲ್ಲಿದ್ದವರಲ್ಲನೇಕರಿಗೆ ಕೆಟ್ಟ ನಡತೆಗಳಿಗಾಗಿ ಇವನೇ ಎಷ್ಟೋಸಲ ಶಿಕ್ಷೆ ಮಾಡಿಸಿದ್ದನು. ಆದ್ದರಿಂದ ಅವರಿಗೆಲ್ಲಾ ಅನೇಕವೇಳೆ ಸೆರೆಮನೆಯೇ ತವರು ಮನೆಯಾಗುತ್ತಿದ್ದುದಲ್ಲದೆ ಅವರೆಲ್ಲಾ ಕೇಡಿ ರಿಜಿಸ್ಟರುಗಳಿಗೆ ದಾಖಲಾಗಿದ್ದವರೇ. ಆದರೆ ಮಾಧವನೂ ಭಾಸ್ಕರನೂ ಸಿಕ್ಕಲಿಲ್ಲವಾಗಿ ವಿಠಲನು ತುಂಬಾ ಬೇಸತ್ತನು. ಹಾಗೂ, ಮಹಡಿಯ ಮೇಲಿನ ಒಂದು ಕೊಠಡಿಯನ್ನು ಮಾತ್ರ ಪರೀಕ್ಷಿಸಲಿಲ್ಲ ವೆಂಬ ಚಾಪಲ್ಯವಿದ್ದುದರಿಂದ ಅಲ್ಲಿಗೂ ಹೊರಟನು. ಬಾಗಿಲಲ್ಲಿ ಒಬ್ಬ ಆಳು ಕಾವಲಿದ್ದುದರಿಂದ ಒಳಗೆ ಹೋಗಲು ಸಾಧ್ಯವಾಗಲಿಲ್ಲ. ಆದರೂ ವಿಠಲನು ಸಮಯ ಕಾಯುತ್ತಿದ್ದನು. ಆಗ್ಗೆ ಸರಿಯಾಗಿ ಒಬ್ಬ ಸ್ತ್ರೀಯು ಬಂದು ವಿಠಲನ ರಟ್ಟೆಯನ್ನು ಹಿಡಿದು—ಇದೇನು ವಿಠಲ! ಇಲ್ಲಿ ಬಂದಿದ್ದೀಯೆ, ಯಾವ ಕೇಸು ಇದೆ? ಏನಾದರೂ ಪತ್ತೆಯಾಗಬೇಕಾದುದುಂಟೋ? ಎಂದು ಕೇಳಿದಳು. ಅವ ಳೇನೂ ಸಾಮಾನ್ಯಳಲ್ಲ. ಪೋಲೀಸ್ ಇಲಾಖೆಯ ಆಡಳಿತವಾದ್ಯಂತವನ್ನೂ ಚನ್ನಾಗಿ ಬಲ್ಲವಳು. ಮತ್ತು ಯಾವ ಬಂದೀಖಾನೆಯೂ ಅವಳಿಗೆ ಹೊಸ ಸ್ಥಳವಲ್ಲ. ಆದ್ದರಿಂದಲೇ ಅವಳಿಗೆ ಎಲ್ಲೂ ಯಾವ ತಡೆಯೂ ಲಕ್ಷ್ಯವೂ ಇಲ್ಲ. ಪೋಲೀಸಿನವರು ಕೂಡ ಅವಳ ಹೆಸರು ಕೇಳಿದರೆ ನಡುಗುತ್ತಿದ್ದರು.

ವಿಠಲನು ಬೆಚ್ಚಿ ಬೆರಗಾಗಿ — ಅಯ್ಯೋ! ನಾನು ಇಲ್ಲಿ ಬಂದಿರುವುದು ಹೊರಪಟ್ಟರೆ ಈ ಮೊಕದ್ದಮೆಯೇ ಹಾಳಾಗುವುದಲ್ಲಾ ಎಂದು ತುಂಬಾ ಕೊರ ಗಿದನು. ಆದರೆ ತನ್ನ ರಟ್ಟೆಯನ್ನು ಹಿಡಿದುಕೊಂಡವರು ಯಾರೆಂಬುದು ತಿಳಿ ಯುವವರೆಗೆ ಮಾತ್ರ ಅಷ್ಟು ಗಾಬರಿ. ಕಡೆಗೆ ಆ ಸ್ತ್ರೀವ್ಯಕ್ತಿಯ ಮುಖವನ್ನು ಕಂಡಕೂಡಲೆ ವಿಠಲನಿಗೆ ಅಧೈರ್ಯಕ್ಕೆ ಬದಲಾಗಿ ಧೈರ್ಯವೇ ಹೆಚ್ಚಿತು. ಹೇಗೂ ಇತರರು ತನ್ನನ್ನು ಗುರುತಿಸಿದ್ದರೆ ಅಪಾಯವೇ ಉಂಟಾಗುತ್ತಿದ್ದಿತಾದರೂ ನಳಿ ನಿಯು ತನ್ನನ್ನು ಕಂಡುದರಿಂದ ಮುಂದೆ ತನ್ನ ಕಾರ್ಯಕ್ಕೆ ಅವಳು ಸಹಕಾರಿಣಿ ಯಾಗುವಳೆಂದು ವಿಠಲನು ನಂಬಿದನು. ಬಳಿಕ ಪಿಸುಮಾತಿನಿಂದ— ನಳಿನೀ! ನಾನು ವೇಷಧಾರಿಯಾಗಿ ಬಂದಿದ್ದರೂ ಹೇಗೆ ಗುರುತಿಸಿದೆ?

ನಳಿನಿ—ವಿಠಲ, ನಿನ್ನ ವೇಷದಿಂದ ಪತ್ತೆಯಾಗಲಿಲ್ಲ. ಆದರೆ ನಿನ್ನ ಬಲದ ಮುಂಗೈಯ ಮೇಲೆ ಈ ದೊಡ್ಡ ಮಚ್ಚೆಯಿರುವುದನ್ನು ನಾನು ನೋಡಿದ್ದೆ. ಅದೇ ನಿನ್ನ ಹೆಗ್ಗುರುತು.

ನಳಿನಿಯು ಹೇಳಿದುದು ದಿಟ. ಒಂದಾನೊಂದು ಮೊಖದ್ದಮೆಯನ್ನು ಪತ್ತೆಮಾಡುತ್ತಿದ್ದಾಗ ಒಬ್ಬ ಕೆಡುಕನು ವಿಠಲನ ಕೈಯನ್ನು ಕತ್ತಿಯಿಂದ ಕಡಿದಿದ್ದನು, ಅದೇ ಗಾಯದ ಮಚ್ಚೆ.

ವಿಠಲ—ನಳಿನೀ, ಇನ್ನುಮೇಲೆ ಮತ್ತಷ್ಟು ಹುಷಾರಾಗಿರಬೇಕಾಯಿತು. ಎಂದು ತನ್ನ ಷರಟಿನ ತೋಳುಗಳನ್ನು ಮುಂಗೈವರೆಗೂ ಎಳೆದುಕೊಂಡು ಬಳಿಕ— ಎಲೆ ನಳಿನಿ, ನೀನು ಇಲ್ಲಿ ಏನುಮಾಡಿಕೊಂಡಿದ್ದೀಯೆ? ಎಂದನು.

ನಳಿನಿ—ನಾನು ಇಲ್ಲಿ ಸೇವೆ ಸತ್ಕಾರಮಾಡಿಕೊಂಡು ಕಾಲಕ್ಷೇಪ ಮಾಡುತ್ತಿದೇನೆ.

ವಿಠಲ—ಯಾರಿಗೆ?

ನಳಿನಿ—ಅದೆಲ್ಲ ರಹಸ್ಯವಿಷಯ, ಪ್ರೇಮಲತೆಯ ಮಹಿಮೆಯನ್ನು ಹೇಳತೀರದು.

ವಿಠಲ—ನಿನ್ನ ಕಡೆಯವರು ಯಾವ ಕೊಠಡಿಯಲ್ಲಿದ್ದಾರೆ?

ನಳಿನಿ—ಇದೋ! ಈ ಏಕಾಂತಗೃಹದಲ್ಲಿ.

ವಿಠಲ—ಅಲ್ಲಿ ಯಾರೋ ಬಹುಜನರಿರುವಂತಿದೆಯಲ್ಲ? ಯಾರ್ಯಾರಿದಾರೆ ಬಲ್ಲೆಯಾ? ಅವರ ಚಹರೆ ಮುಂತಾದುವನ್ನು ನೀನು ಚೆನ್ನಾಗಿ ತಿಳಿಸಿದರೆ ಇಗೋ ನಿನ್ನ ಕೈ ಬೆಚ್ಚಗಾಗುವುದು.

ನಳಿನಿ—ಓಹೋ! ನಾಲ್ವರಿದಾರೆ. ಪ್ರಾಯಶಃ ನಿನ್ನ ಕೆಲಸವು ಒಂದು ಕ್ಷಣದಲ್ಲೇ ಕೈಗೂಡಿತೆಂದುಕೊ. ಒಬ್ಬನು ಎತ್ತರವಾಗಿದ್ದಾನೆ. ಅವನು ವಿಶಾಲದೇಶದ ಲಲಿತಪಟ್ಟಣದವನು. ಇನ್ನೊಬ್ಬನು ಅವನ ಆಪ್ತಸ್ನೇಹಿತ. ಅವನು ಕುಳ್ಳ. ಉಳಿದ ಇಬ್ಬರ ಪೈಕಿ ಒಬ್ಬನು ನಾಗೇಶ. ಮತ್ತೊಬ್ಬಳು

ಹೋಟಲಿನ ಯಜಮಾನನ ಹೆಂಡತಿ ಆದಿಲಕ್ಷ್ಮಿ, ಅವಳು ಅರುಂಧತಿಯ ಅವತಾರವೇ ತಾನೆಂದು ಜಂಭ ಬಡಿದುಕೊಂಡು ಸದಾ ಇತರರನ್ನು ಅಲ್ಲಗಳೆಯತಕ್ಕವಳು. ಆದುದರಿಂದಲೇ ನಾನು ಈಗ ಅವಳನ್ನು ಮಾಕರಿಸಬೇಕೆಂದಿದ್ದೇನೆ.

ನಳಿನಿಯು ಹೇಳಿದವರ ಪೈಕಿ ಇಬ್ಬರು ತನ್ನ ಕೆಲಸಕ್ಕೆ ಬೇಕಾದ ಮಾಧವ ಭಾಸ್ಕರರೆಂಬುದನ್ನೂ ಉಳಿದವರು ಅವರ ದುರುದ್ಯೋಗಕ್ಕೆ ಸಹಾಯಕರೆಂಬುದನ್ನೂ ವಿಠಲನು ಊಹಿಸಿ ಆ ಕೊಠಡಿಯಲ್ಲಿ ಏನು ಮಾತು ಕಥೆಗಳು ನಡೆಯುತ್ತಿವೆಯೋ ಕೇಳಬೇಕೆಂದು ತುಂಬ ತವಕಪಟ್ಟು—ಎಲೆ ನಳಿನಿ, ನಿನಗೆ ಹಣವನ್ನು ಸಂಪಾದಿಸಬೇಕೆಂಬ ಆಶೆಯುಂಟೊ ?

ನಳಿನಿ—ಓಹೋ ! ಇದೇನು ಹೀಗೆನ್ನುವೆ ? ನನ್ನ ಸಂಕಲ್ಪವೇ ಅದಲ್ಲವೆ ? ನಾನೇನು ಯಾವುದಕ್ಕೆ ಹಿಂತೆಗೆಯುತ್ತೇನೆ ?

ವಿಠಲ—ಹಾಗಾದರೆ ನಾನು ನಿನ್ನನ್ನು ನಂಬಬಹುದೊ ?

ನಳಿನಿ—ಆಹಾ ! ಧಾರಾಳವಾಗಿ ನಂಬಬಹುದು. ಈಗ ನಿನಗೆ ಬೇಕಾದ್ದೇನು ?

ವಿಠಲ—ಇನ್ನೇನೂ ಇಲ್ಲ, ಒಳಗೆ ಅವರೇನು ಮಾಡುತ್ತಿರುವರೋ ತಿಳಿಯಬೇಕು.

ನಳಿನಿ—ಹಾಗಾದರೆ ಆ ಕೋಣೆಯ ಮಗ್ಗುಲಲ್ಲಿರುವ ಸಣ್ಣ ಕೊಠಡಿ ಬಿಡುವಾಗಿದೆ. ಆದರೆ ಆದಿಲಕ್ಷ್ಮಿಯು ಬೀಗ ಹಾಕಿಕೊಂಡಿದಾಳೆ. ಹೆಚ್ಚು ಬಾಡಿಗೆಯ ಹೊರತು ಅದು ನಮ್ಮ ವಶವಾಗುವುದಿಲ್ಲ. ಅದರೊಳಗೆ ಕುಳಿತುಕೊಂಡರೆ ಅವರು ಆಡುವ ಮಾತೆಲ್ಲಾ ಚೆನ್ನಾಗಿ ಕೇಳಿಸುವುದು.

ವಿಠಲ—ಹಾಗಾದರೆ ಹೊರಡು. ಅದನ್ನು ಬಾಡಿಗೆಗೆ ತೆಗೆದುಕೊಂಡುಬಿಡು.

ನಳಿನಿ—ಪ್ರಾಯಶಃ ಅವಳು ಅದಕ್ಕೆ ಹತ್ತು ರೂಪಾಯಿ ಬಾಡಿಗೆ ಕೇಳುವಳೇನೊ.

ವಿಠಲ—ಇಗೋ, ಈ ನೋಟನ್ನು ತೆಗೆದುಕೊ.

ನಳಿನಿಯು ಬೇಗ ಹೋಗಿ ಆ ಕೊಠಡಿಯ ಬೀಗದ ಕೈಯನ್ನು ತಂದಳು ಅವಳೂ ವಿಠಲನೂ ನಿಶ್ಶಬ್ದವಾಗಿ ಒಳಕ್ಕೆ ಹೋಗಿ ಬಾಗಿಲು ಹಾಕಿಕೊಂಡು ಸಾವಧಾನವಾಗಿ ಆಲಿಸುತ್ತ ಕುಳಿತರು. ಈ ಕೊಠಡಿಗೂ ಮಾಧವ ಮುಂತಾದವರು ಇದ್ದ ಕೊಠಡಿಗೂ ನಡುವೆ ಒಂದು ಪಟಭಿತ್ತಿ (Screen) ಮಾತ್ರ ಅಡ್ಡವಾಗಿದ್ದಿತು. ಆದುದರಿಂದ ಅವರು ಆಡಿದಮಾತೆಲ್ಲ ಸ್ಪಷ್ಟವಾಗಿ ಕೇಳಿಸುತಿದ್ದಿತು.

ಮಾಧವನು ನಾಗೇಶನಂ ಕುರಿತು—ಎಲೋ ನಾಗೇಶ, ಹೇಗಾದರೂ ಆ ಹುಡುಗಿಯನ್ನು ಕಡೆಗಾಣಿಸಬೇಕು. ಹಾಗಿಲ್ಲದೆ ಅವಳನ್ನು ಎಲ್ಲಿ ಬಿಟ್ಟರೂ ನಮಗೆ ಅಪಾಯ.

ವಿಠಲನು ಇದನ್ನು ಕೇಳಿ ಇದು ಪ್ರಫುಲ್ಲೆಯ ವಿಷಯದಲ್ಲೇ ಆಡಿದ ಮಾತಾಗಿರಬೇಕೆಂದೂ ಇದುವರೆಗೂ ದೈವಕೃಪೆಯಿಂದ ಅವಳ ಪ್ರಾಣವು ಉಳಿದಿದೆಯೆಂದೂ ಮುಂದಕ್ಕೆ ದೊಡ್ಡ ಗಂಡವಿರುವುದೆಂದೂ ಯೋಚಿಸಿದನು.

ನಾಗೇಶ—ನೀನು ಅದಕ್ಕೆ ತಕ್ಕಷ್ಟು ಹಣವನ್ನು ಕೊಡುತ್ತೀಯೊ ?

ಮಾಧವ—ಓಹೋ ! ನೀನು ಅವಳನ್ನು ಸರಿಮಾಡಿಬಿಟ್ಟ ಬಳಿಕ ಅಮೂಲ್ಯವಾದ ನಿಧಿಯುಳ್ಳ ಆ ಪೆಟ್ಟಿಗೆಯೇ ಸಿಕ್ಕುವುದಲ್ಲಾ !

ನಾಗೇಶ—ಸರಿ ಹಾಗಾದರೆ, ಆಪೆಟ್ಟಿಗೆಯೊ ! ಅದು ಅವಳಲ್ಲಿದ್ದರೆ ತಾನೆ ! ಅದು ತನ್ನಲ್ಲಿಲ್ಲವೆಂಬುದನ್ನು ನನ್ನ ಸಂಗಡ ಹೇಳಿದ್ದಾಳೆ.

ಮಾಧವ—ಯಾವಾಗ ಹೇಳಿದಳು

ನಾಗೇಶ—ಈಹೊತ್ತು ಎಲ್ಲವನ್ನೂ ಬಾಯಿಬಿಡಿಸಿದೆ. ನಾನು ತನಗೆ ಸಹಾಯ ಮಾಡುತ್ತೇನೆಂದು ಅವಳು ನಂಬಿದ್ದಾಳೆ. ಅಯ್ಯೋ! ಧರ್ಮಗೊಡ್ಡು ಪಾಪ, ಪಾಪ !

ಮಾಧವ—ಆಪೆಟ್ಟಿಗೆ ಎಲ್ಲಿದೆಯಂತೆ!

ನಾಗೇಶ—ವಿಠಲಮೂರ್ತಿಯ ಬಳಿಯಲ್ಲಿದೆಯಂತೆ, ನಿನಗೆ ತುಂಬ ಹೆದರಿಕೆಯಾಗುತ್ತಿದೆಯಲ್ಲವೆ !

ಮಾಧವ—ವಿಠಲನ ಹತ್ತಿರವೆ ? ಅದು ಅಲ್ಲಿಗೆ ಹೇಗೆ ಹೋಯಿತು ? ಇದೆಲ್ಲ ಅವನಿಗೆ ಹೇಗೆ ಗೊತ್ತು ?

ನಾಗೇಶ—ಓ ? ಇದೇನು ? ನೀನು ಆತನನ್ನು ಬಲ್ಲೆಯೋ ?

ಮಾಧವ—ಚೆನ್ನಾಗಿ ಬಲ್ಲೆ ಆದರೆ ಬಳಕೆಯಿಲ್ಲ. ಅವನು ಮಹಾ ಅಸಾಧ್ಯ ಮನುಷ್ಯ.

ನಾಗೇಶ—ಅವನು ಪ್ರಖ್ಯಾತನಾದ ಪತ್ತೇದಾರ. ಆದರೆ ಅವನು ಈ ಮೊಕದ್ದಮೆಗೆ ಕೈಹಾಕಿಲ್ಲವೆಂದು ನಿನ್ನೆಯವರೆಗೂ ತಿಳಿದಿದ್ದೆ. ಈಗ ಆ ಹುಡುಗಿಯು ಆ ಪೆಟ್ಟಿಗೆಯನ್ನು ತಾನೇ ಅವನ ವಶಕ್ಕೆ ಕೊಟ್ಟೆನೆನ್ನುತಿದಾಳೆ.

ಮಾಧವ—ದೈವಾತ್ ಇದು ನಮಗೆ ತಿಳಿದುದು ಮೇಲಾಯಿತು. ಈಗ ಅವಳು ಮನೆ ಬಿಟ್ಟು ಬಂದಿರುವುದು ಅವನಿಗೆ ತಿಳಿದಿದೆಯೊ ?

ನಾಗೇಶ—ಇಲ್ಲ ಗೊತ್ತಿಲ್ಲ. ಇದಲ್ಲದೆ ಅವಳ ಅಣ್ಣನಿಗಂತು ಇದೊಂದೂ ಬೇಕಿಲ್ಲ, ಇವನೊಂದು ಪಶುಪ್ರಾಣಿ.

ಮಾಧವ—ನಾವು ಸೌದಾಮಿನಿಯನ್ನು ಸ್ವಲ್ಪ ಎಚ್ಚರಿಸಬೇಕು. ಈಗ ಆ ಪೆಟ್ಟಿಗೆಯನ್ನು ಪಡೆಯುವುದು ಸುಲಭ. ಇದಕ್ಕೆ ತಕ್ಕ ಏರ್ಪಾಡು ಮಾಡುವಂತೆ ಸೌದಾಮಿನಿಗೂ ತಿಲಮೆಗೂ ಹೇಳಬೇಕು. ಸೌದಾಮಿನಿಯು ತಾನು ಕೊಟ್ಟಿರುವ ಪೆಟ್ಟಿಗೆಯನ್ನು ತನಗೆ ಹಿಂದಕ್ಕೆ ಕೊಡಬೇಕೆಂದೂ ಇನ್ನು ಮುಂದಕ್ಕೆ ಮೊಕದ್ದಮೆಯನ್ನು ನಡೆಸಬೇಕಾದುದಿಲ್ಲವೆಂದೂ ವಿಠಲನಿಗೆ ಹೇಳಿ ಕಳುಹಿಸಿ ಬಿಡಬಹುದು. ಅವನು ಪ್ರಫುಲ್ಲೆಯನ್ನು ಅಷ್ಟು ಚೆನ್ನಾಗಿ ನೋಡಿಲ್ಲವಾದುದರಿಂದ ಅವಳೇ ಬೇರೆ ನಮ್ಮ ಸೌದಾಮಿನಿಯೇ ಬೇರೆ ಎಂದು ಭೇದವರಿಯಲಾರನು. ಅಥವಾ ನೋಡಿದ್ದರೂ ಅವಳು ವಾರಣನನ್ನು ನಿಜಸಹೋದರನೆಂದು ತೋರುವಂತೆಯೇ ಪ್ರೀತಿಸುತ್ತಿರುವುದರಿಂದ ಅವನು ಏನೂ ಮಾಡಲಾರನು.

ಭಾಸ್ಕರ—ನನ್ನ ಹೆಂಡತಿಯೇನೂ ಸಾಮಾನ್ಯಳಲ್ಲವಯ್ಯ.

ಇದರಿಂದ ಕೃತಕ ಪ್ರಫುಲ್ಲೆಯಾದ ಸೌದಾಮಿನಿಯು ಭಾಸ್ಕರನ ಹೆಂಡತಿಯೆಂಬುದು ಸ್ಪಷ್ಟವಾಯಿತು. ವಿಠಲನು ಈ ಪಿತೂರಿಗಾರರ ಮೋಸ ಕೃತ್ಯದ

ಸ್ವರೂಪವನ್ನೆಲ್ಲ ಚೆನ್ನಾಗಿ ಅರಿತನು. ಮತ್ತು ನಾಗೇಶನು ತನ್ನ ವಿಷಯ ವಾಗಿ ಏನೂ ಹೆಚ್ಚು ಅಂಶಗಳನ್ನು ತಿಳಿಯದಿರುವುದು ತುಂಬಾ ಕ್ಷೇಮವೆಂ ದೆಂದುಕೊಂಡನು. ಅವನು ಪ್ರಪ್ರಲ್ಲಿಯನ್ನೆಲ್ಲೊ ಸೆರೆಯಿಟ್ಟಿರುವನೆಂದೂ, ತಾನು ಅವನನ್ನು ಹಿಂಬಾಲಿಸಿ ಅದನ್ನು ಗೊತ್ತುಮಾಡಬೇಕೆಂದೂ ಯೋಚಿಸಿದನು,

ಕೆಲವು ನಿಮಿಷಗಳ ನಂತರ ಮಾಧವ—ಎಲೋ, ಆ ಪೆಟ್ಟಿಗೆಯೊಂದು ಮಾತ್ರ ಸೌದಾಮಿನಿಯ ಕೈಗೆ ಸೇರಲಿ, ಆಮೇಲೆ ಆ ವಿಠಲನ ತಲೆಯುಳಿಯು ವುದನ್ನು ನೋಡುವೆಯಂತೆ !

ನಾಗೇಶ—ನಾನೂ ಅದನ್ನೇ ಯೋಚಿಸುತ್ತಿದ್ದೇನೆ. ಆ ದ್ರೋಹಿಯು ಪಾಲಪಾಣಿಯಲ್ಲಿ ಬರೀಗೋರಿಯನ್ನು ಬೇರೆ ನೋಡಿ ಬಂದಿದ್ದಾನಲ್ಲಾ ! ಅದಕ್ಕೇನು ಗತಿ !

ಮಾಧವ—ಅವಳು ಇದನ್ನೂ ಹೇಳಿದಳೆ ?

ನಾಗೇಶ—ಅವಳೂ ಅದನ್ನು ನೋಡಿದ್ದಾಳೆ.

ಮಾಧವ—ಹಾಗಾದರೆ ಅವಳೇನೇನು ಹೇಳಿದಳು ?

ನಾಗೇಶ—ನಾನು ಈದಿನ ತುಂಬ ನಂಬಿಕೆ ಹೇಳಲು ಅವಳು ತಾವು ಪಾಲಪಾಣಿಯ ಬಳಿಯಲ್ಲಿ ಗೋರಿಯನ್ನು ಪರೀಕ್ಷಿಸಿದುದು ಮುಂತಾದುದನ್ನೆಲ್ಲ ಹೇಳಿದಳು.

ಮಾಧವ—ಕೈ ಕೊಡುಹುತ- ವಿಠಲನಿಗೆ ಇದೆಲ್ಲಾ ತಿಳಿದಿದ್ದರೆ ನಮಗೆ ಕೇವಲ ಅಪಾಯವೇ. ಸೌದಾಮಿನಿಯು ವ್ಯೆಯಲ್ಲ ಕಣ್ಣುಳ್ಳವಳಾಗಿರಬೇಕು. ಕಾಂತನ ಶವವನ್ನು ಲಲಿತಪಟ್ಟಣಕ್ಕೆ ಕಳುಹಿಸಿಬಿಟ್ಟಿದೆಯೆಂದು ಹೇಳಬೇಕಲ್ಲದೆ ಪಾಲಿಪಾಣಿಯ ಬಳಿಯ ಗೋರಿಯಲ್ಲಿ ಹೆಣವಿಲ್ಲದುದಕ್ಕೇನಾದರೊಂದು ನೆಪ ವನ್ನು ಕಲ್ಪಿಸಬೇಕು. ನಾಗೇಶ, ಬಳಿಕ ಆ ವಿಠಲನನ್ನು ಮಟ್ಟಮಾಡಿಬಿಡ ಬೇಕು. ಇದಕ್ಕಾಗಿ ನಾಳೆ ಸೌದಾಮಿನಿಯ ಮನೆಗೆ ಹೋಗಿ ಅಲ್ಲೇ ಇದ್ದು ಕೊಂಡು ಅವನನ್ನು ಕರೆಯಿಸಬೇಕು. ಆಗ ನೀನು ಅಲ್ಲಿದ್ದು ಅವನನ್ನು ನಿರ್ಮೂ ಲಮಾಡಬೇಕು.

ನಾಗೇಶ–ಮೀಸೆಯನ್ನು ನುಲಿಯುತ್ತ–ನನಗೆ ಅವನನ್ನು ಕಂಡರಾಗದು ಅವನು ನನ್ನ ಕೈಗೆ ಸಿಕ್ಕಲಿ. ಕತ್ತನ್ನು ತಿರುಚಿ ಉರುಳಿಸುವೆನು.

ಮಾಧವ–ಸೌದಾಮಿನಿಯೂ ತಿಲುಮೆಯೂ ವಾರಣನನ್ನು ಬಲೆಗೆ ಹಾಕಿ ಕೊಂಡಿರುವರು. ನಮಗೆ ಅವನ ಭಯವೇನೂ ಇಲ್ಲ. ಆ ಪೆಟ್ಟಿಗೆ ಕೈಸೇರಿ ಪ್ರಫುಲ್ಲೆಗೂ ವಿಠಲನಿಗೂ ಪರಲೋಕಪ್ರಯಾಣವಾಗಿ ವಾರಣನಿಗೆ ದೇಶಾಂತರ ಪ್ರಯಾಣವಾಗಿ ಇಷ್ಟೆಲ್ಲಾ ಆದನಂತರ ನಾವು ಲಲಿತಪಟ್ಟಣಕ್ಕೆ ಹೋಗ ಬಹುದು. ಅಲ್ಲಿ ಸೌದಾಮಿನಿಯು ಕಾಂತನಾಥನ ಆಸ್ತಿಗೆಲ್ಲ ಹಕ್ಕುದಾರಳಾಗಿ ನಿಲ್ಲಬಹುದು. ಬಾ. ಈಗ ಇಷ್ಟಕ್ಕಿರಲಿ. ನಾಳೆ ಪುನಃ ಸೇರಿ ಮಾತಾ ಡೋಣ.

ಮಾಧವನೂ ಭಾಸ್ಕರನೂ ಹೊರಟರು. ನಾಗೇಶನು ಆದಿಲಕ್ಷ್ಮಿಯೊಡನೆ ಅಲ್ಲೇ ಉಳಿದನು. ಈ ಅನ್ಯಾಯಕಾರಿಗಳು ತಮ್ಮ ದುರಾಲೋಚನೆಗಳನ್ನೆಲ್ಲ ಪ್ರಮಾದವಶಾತ್ ಮಾತಾಡಿಕೊಂಡುದು ವಿಠಲನಿಗೆ ರೊಟ್ಟಿಯು ಜಾರಿ ತುಪ್ಪಕ್ಕೆ ಬಿದ್ದಂತೆ ಅನುಕೂಲಿಸಿತು. ವಿಠಲನು ಮಾಧವ ಭಾಸ್ಕರರನ್ನು ಹಿಂಬಾಲಿಸಬಹು ದಾಗಿದ್ದಿತಾದರೂ ನಾಗೇಶನು ಪ್ರಫುಲ್ಲೆಯನ್ನು ಎಲ್ಲಿ ಬೈಚಿಟ್ಟಿರುವನೆಂಬುದನ್ನ ರಿಯಬೇಕಾದುದು ಅತ್ಯಂತ ಮುಖ್ಯವಾದುದರಿಂದ ಈ ನಾಗೇಶನನ್ನು ಬೆನ್ನು ಹತ್ತಿದನು.

ಅದಕ್ಕೆ ಮುಂಚೆ ವಿಠಲ–ನಳಿನಿ, ಮುಂದೆ ಇವರೇನು ಮಾಡುವರೋ ಕೇಳಿಕೊಂಡಿದ್ದು ನನಗೆ ಹೇಳು–ಎನ್ನಲು ಅವಳು ಒಪ್ಪಿದಳು. ವಿಠಲನು ಯಾರೂ ಅರಿಯದಂತೆ ಹೊರಬಿದ್ದು ಮರೆಯಲ್ಲಿ ಅವಿತಿದ್ದನು. ಆಗ ನಾಗೇಶನೊಬ್ಬನೇ ಹೊರಕ್ಕೆ ಬಂದನು.

———

# ಏಳನೆಯ ಪರಿಚ್ಛೇದ

ನಾಗೇಶನು ಹೋಟಲಿನ ತಲೆಬಾಗಿಲಲ್ಲಿ ನಿಂತು ಸುತ್ತಲೂ ಇಣಕಿ ನೋಡಿದನು. ತನ್ನನ್ನು ಯಾರೂ ಕಾಣುತಿಲ್ಲವೆಂದು ಮನಸ್ಸಿಗೆ ದೃಢಪಟ್ಟಮೇಲೆ ಮುಂದಕ್ಕಡಿಯಿಟ್ಟನು. ಆಗ ವಿಠಲನು ಈ ದುಷ್ಟನ ಚರ್ಯೆಗಳನ್ನೆಲ್ಲಾ ಪರೀಕ್ಷಿಸುತ್ತಿದ್ದನು.

ನಾಗೇಶನು ಆ ನವನಗರಿಯ ಪೂರ್ವದಕಡೆ ದೊಡ್ಡ ರಸ್ತೆಯ ಮೂಲಕ ತೆರಳಿ ಅಡ್ಡಬೀದಿಯನ್ನು ಸೇರಿ ಅಲ್ಲಿ ಒಂದು ಮನೆಯನ್ನು ಪ್ರವೇಶಿಸಿದನು. ಆ ಮನೆಯ ಹೆಸರನ್ನು ಕೇಳಿದರೆ ಆ ಪಟ್ಟಣವೆಲ್ಲ ಗಡಗಡನೆ ನಡುಗುತಿದ್ದಿತು. ಅದು ಅಷ್ಟು ಕೊಲೆಗಳು ನಡೆವಸ್ಥಳ. ಆ ರಾತ್ರಿ ಮೇಘಾವರಣವತಿಯಾಗಿದ್ದುದರಿಂದ ನಕ್ಷತ್ರಗಳ ಬೆಳಕೂ ದುರ್ಲಭವಾಗಿದ್ದಿತು. ಅಂತಹ ಗಾಢಾಂಧಕಾರ ಸಮಯದಲ್ಲೂ ಆ ಮನೆಯ ಯಾವ ಕೊಠಡಿಯಲ್ಲೇ ಆಗಲಿ ಬೆಳಕಿದ್ದಂತೆ ತೋರಲಿಲ್ಲ. ಅದು ಬಿಟ್ಟಮನೆ.

ನಾಗೇಶನು ಈ ಮನೆಯಲ್ಲಿ ವಾಸಮಾಡುತ್ತಿರಲಿಲ್ಲವೆಂಬುದು ವಿಠಲನಿಗೆ ಚೆನ್ನಾಗಿ ಗೊತ್ತು. ಈಗ ಈ ಮನೆಯಲ್ಲಿ ನಾಗೇಶನು ಏನುಮಾಡುವನೆಂಬುದು ಕುತೂಹಲಜನಕವಾಗಿದ್ದಿತು. ಅವನು ಬಾಗಿಲ ಬೀಗವನ್ನು ತೆಗೆದುದನ್ನು ನೋಡಿ ಅವನು ಆಗಾಗ್ಗೆ ಆ ಮನೆಗೆ ಬರುವುದುಂಟೇನೋ ಎಂದು ವಿಠಲನು ಊಹಿಸಿದನು. ನಾಗೇಶನು ಒಳಕ್ಕೆ ಹೋದ ಹತ್ತು ನಿಮಿಷದ ಮೇಲೂ ಬೆಳಕೇ ಕಾಣಲಿಲ್ಲ. ಈಗ ವಿಠಲನ ಅನುಮಾನವು ಮತ್ತಷ್ಟು ದೃಢಪಟ್ಟಿತು. ವಿಠಲನು ಮನೆಯ ಹಿಂದಕ್ಕೆ ಹೋಗಿ ಪೌಳಿಗೋಡೆಯನ್ನು ಹತ್ತಿ, ನಿಶ್ಶಬ್ದವಾಗಿ ಆ ಮನೆಯ ಅಂಗಳದೊಳಕ್ಕಿಳಿದನು. ಕಡೆಗೆ ತನಗೇನೇ ಅಪಾಯವಾದರೂ ಈ ಮನೆಯೊಳಕ್ಕೆ ಹೋಗಿ ಇಲ್ಲಿ ಏನು ನಡೆಯುವುದೋ ನೋಡಬೇಕೆಂದುಕೊಂಡನು. ಆದರೆ ಬಾಗಿಲುಗಳನ್ನೆಲ್ಲ ಹಾಕಿದ್ದುದರಿಂದ ಅದು ಅಸಾಧ್ಯವಾಗಿದ್ದಿತು. ಆದರೂ ವಿಠಲನು ಎದೆಗುಂದದೆ ತನ್ನಲ್ಲಿದ್ದ ಚೂರಿಯ ಸಹಾಯದಿಂದ ಒಂದು ಕಿಟಕಿಯ ಸ್ಕ್ರೂ ಮೊಳೆಗಳನ್ನೆಲ್ಲ ಬಿಚ್ಚಿದನು. ಅವನಿಗೆ ಬಾಗಿಲು ಸಲಾಕಿಯೆಂಬುದೊಂದೂ ಲಕ್ಷ್ಯವಿರಲಿಲ್ಲ. ಕೊನೆಗೆ ಒಳಕ್ಕೆ ನುಗ್ಗಿದನು.

ಆ ಕೋಣೆಯು ಅಡಿಗೇ ಮನೆ. ತನ್ನಲ್ಲಿದ್ದ ಸಣ್ಣ ಕೈಲಾಂದ್ರವನ್ನು ಹತ್ತಿಸಿ ನೋಡಲು ಆ ಮನೆಯನ್ನು ಬಹು ದಿನಗಳಿಂದಲೂ ಯಾರೊ ಬಳಸಿಲ್ಲವೆಂದು ತೋರಿತು. ಅಲ್ಲಿ ವಾಯುಸಂಚಾರಕ್ಕೂ ಅವಕಾಶವಿಲ್ಲದುದರಿಂದ ವಿಠಲ ನಿಗೆ ಉಸಿರು ಕಟ್ಟಿಕೊಳ್ಳುವಂತಾಯಿತು. ಅಷ್ಟೇ ಅಲ್ಲದೆ ದುಸ್ಸಹವಾದ ಏನೋ ಒಂದು ಬಗೆಯ ಕೆಟ್ಟ ವಾಸನೆಯು ಅಲ್ಲಿ ತುಂಬಿದ್ದುದರಿಂದ ಒಂದು ಕ್ಷಣವೂ ಕೂಡ ಅಲ್ಲಿ ನಿಲ್ಲುವುದು ಅಸಾಧ್ಯವಾಯಿತು. ವಿಠಲನು ನಿರ್ಮಲ ವಾಯುವಿಗೋಸ್ಕರ ಕಿಟಕಿಯಿಂದ ಹೊರಕ್ಕೆ ತಲೆಹಾಕಿದನು.—ಅಯ್ಯೋ ದೇವರೆ ಈ ದುರ್ಗಂಧವನ್ನು ನೋಡಿದರೆ ಇಲ್ಲಿ ಎಲ್ಲೋ ಮನುಷ್ಯದೇಹವು ಕೊಳೆತಿರು ವಂತೆ ತೋರುವುದಲ್ಲಾ!—ಎಂದುಕೊಂಡು ಪುನಃ—ಓಹೋ ! ಗೊತ್ತಾಯಿತು. ಕಾಂತನಾಥನ ಶವವನ್ನು ಇಲ್ಲೇ ಹೂತಿರಬಹುದು. ಇದನ್ನೆಲ್ಲ ಪತ್ತೆಮಾಡಿದ ಹೊರತು ನಾನು ಈ ಮನೆಯನ್ನು ಬಿಟ್ಟು ಹೋಗಬಾರದು. ಎಂದು ಜಿತಮಾಡಿ ಕೊಂಡನು. ಇದಕ್ಕಾಗಿ ಮನೆಯ ನೆಲವನ್ನೆಲ್ಲ ಚೆನ್ನಾಗಿ ಪರೀಕ್ಷಿಸುತ್ತ ಹೋ ಗಲು ಒಂದುಕಡೆ ಧೊಬ್ ಎಂದು ಸದ್ದಾಯಿತು. ಅದು ನೆಲಮಾಳಿಗೆಯ ಬಾಗಿಲು. ವಿಠಲನು ಅದನ್ನು ತೆರೆದನು. ಈಗ ಹೆಣಗಂಪು ಅತಿಯಾಗಿ ಸಹಿ ಸದಂತಾದುದರಿಂದ ಅವನು ಕೆಲವು ನಿಮಿಷಗಳಲ್ಲೇ ಅಲ್ಲಿಂದ ಹಿಂದಕ್ಕೆ ಬಂದು ನಿಲ್ಲಬೇಕಾಯಿತು. ಮುಖವನ್ನು ಸಿಂಡರಿಸಿಕೊಂಡನು. ಹುಬ್ಬು ಗಂಟು ಬಿದ್ದಿತು. ಎರಡು ಕೈಗಳೂ ಮೂಗಿನ ಕೆಲಸವನ್ನು ತಡೆಯಹೊರಟವು. ಹಾಗೂ ಸಹಿಸಿಕೊಂಡು ವಿಠಲನು ಕೆಳಕ್ಕಿಳಿದನು. ಏಣಿಯ ಬುಡದಲ್ಲಿ ನೆಲವು ಜಾರಿಕೆ ಯಾಗಿದ್ದಿತು. ಅಲ್ಲಿ ಅಲ್ಲಿ ಹಚ್ಚಗೆ ಬೂಜು ಕಟ್ಟಿದ್ದ ಕೆಲವು ಹಲಗೆಗಳು ಬಿದ್ದಿದ್ದವು ಈ ದುರ್ಗಂಧವು ಎಲ್ಲಿಂದ ಹೊರಡುವುದೋ ಎಂಬುದನ್ನು ಬಲು ಸಾಹಸದಿಂದ ತಿಳಿಯತೆಳಸಲು ಅಲ್ಲಿ ಒಂದು ಬಾವಿ. ಅದರ ಮೇಲೆ ಬಂಡೆಗಳನ್ನು ಮುಚ್ಚಿ ದ್ದರು. ವಿಠಲನು ಕಷ್ಟಪಟ್ಟು ಅವನ್ನು ಮೀಟಿ ತೆಗೆದನು. ಈಗ ಬಾವಿಯಿಂ ದಲೇ ಹೆಣದ ನಾತವು ಬರುವುದು ಖಂಡಿತವಾಯಿತು. ಬಳಿಕ ಒಂದು ಸಣ್ಣ ಕಲ್ಲನ್ನು ಅದರೊಳಕ್ಕೆ ಹಾಕಿದನು. ಅದರ ಸದ್ದಿನಿಂದ ಅದು ಬಲು ಆಳವೆಂದೂ ಅಡಿಯಲ್ಲಿ ನೀರಿರುವುದೆಂದೂ ಗೊತ್ತಾಯಿತು. ಹೇಗೂ ಕಾಂತನಾಥನ ಶವ ವನ್ನೇ ಇಲ್ಲಿ ಹಾಕಿರುವರೆಂದುಕೊಂಡನು. ಆದರೆ ಅದನ್ನು ಹೊರದೆಗೆದು ನೋ

ಡುವ ಬಗೆ ಹೇಗೆ ? ಎಂಬ ವಿಷಯದಲ್ಲಿ ಬಹು ತೊಂದರೆಪಟ್ಟನು. ಒಳಕ್ಕಿಳಿಯು ವುದು ಅಸಾಧ್ಯ. ಅಥವಾ ಮೇಲಿನಿಂದಲೇ ಒಳಗಿನದನ್ನು ಹಿಡಿದು ಎತ್ತಲು ಯಾವ ಸಾಧನವೂ ಇರಲಿಲ್ಲ. ಆದರೆ ಅಲ್ಲಿ ಕೆಲವು ಗಳುಗಳ ತುಂಡುಗಳು ಬಿದ್ದಿದ್ದುವು. ಸಮೀಪದಲ್ಲಿ ಒಂದು ಕಬ್ಬಿಣದ ಕೊಂಡಿಯೂ ಇದ್ದಿತು. ವಿಠಲನು ಆ ಗಳುಗಳನ್ನು ಒಂದಕ್ಕೊಂದನ್ನು ಸೇರಿಸಿ ತನ್ನ ಪಂಚೆಯನ್ನು ಹರಿದು ಆ ಚೂರಿನಿಂದ ಬಿಗಿಸಿ ಆ ಕಬ್ಬಿಣದ ಕೊಂಡಿಯನ್ನು ಕೊನೆಗೆ ಕಟ್ಟಿ ಬಾವಿಯಲ್ಲಿ ಬಿಟ್ಟು ಕಲಕುತ್ತ ಬರಲು ಒಳಗೆ ಏನೋ ಒಂದು ಮೃದುಪದಾರ್ಥವಿರುವುದಾಗಿ ಗೊತ್ತಾಯಿತು. ಮತ್ತೂ ಜಾಲಾಡುತ್ತ ಬರಲು ಆ ಕೊಂಡಿಯು ಆ ವಸ್ತುವಿಗೆ ಸಿಗಲಿಕೊಂಡಿತು. ಆಗ ವಿಠಲನು ಅದನ್ನು ಮೇಲಕ್ಕೆ ಸೇದಿಕೊಳ್ಳುತ ಬಂದನು. ಅದು ತಕ್ಕಮಟ್ಟಿಗೆ ಭಾರವಾಗಿದ್ದಿತು. ಅದು ಹತ್ತಿರಿಸಿದಂತೆಲ್ಲ ಆ ದುರ್ಗಂಧವು ಅತಿಯಾಗುತ ಬಂದ.ದರಿಂದ ಸಹಿಸಲಾರದೆ ಅದನ್ನು ಹಾಗೆಯೇ ಕೈಬಿಟ್ಟುಬಿಡಬೇಕೆಂದುಕೊಂಡನು. ಆದರೂ ಹಿಡಿದ ಕೆಲಸವನ್ನು ಸಾಧಿಸಿಯೇ ತೀರಬೇಕೆಂದುಕೊಂಡು ಪುನಃ ಯತ್ನಿಸಿ ಅಂತು ಅದನ್ನು ಹೊರದೆಗೆದು ಮೇಲಕ್ಕೆಸೆದನು. ಬಳಿಕ ಲಾಂದ್ರವನ್ನು ಹಿಡಿದು ಪರೀಕ್ಷಿಸಹೋಗಲು ಗುಂಡಿಗೆಯೊಡೆಯುವಷ್ಟು ಭಯವಾಯಿತು. ಕೈಕಾಲು ನಡುಗಿತು. ಮನಸ್ಸು ತುಂಬ ಜುಗುಪ್ಸೆಪಟ್ಟಿತು. ಹಲ್ಲುಗದುಬಿದ್ದು ರೋಮಾಂಚವುಂಟಾಯಿತು. ವಿಠಲನಲ್ಲದೆ ಮತ್ತಾರಾದರೊಬ್ಬರು ಅಂತಹ ನೋಟವನ್ನು ನೋಡಿದ್ದರೆ ದೊಡ್ಡ ಗಂಡಕ್ಕೀಡಾಗುತಿದ್ದರೆಂಬುದನ್ನು ನಾವು ಹೇಳಬೇಕಾದುದೇ ಇಲ್ಲ. ಅದು ಒಬ್ಬ ಚಿಕ್ಕಪ್ರಾಯದ ಪುರುಷನ ದೇಹವಾಗಿದ್ದಿತು. ಕೇವಲ ಆಪ್ತಮಿತ್ರರು ಕೂಡ ಗುರುತಿಸಲಾರದಮಟ್ಟಿಗೂ ಆ ಶರೀರವು ಕೊಳೆತು ಹೋಗಿದ್ದಿತು. ಕುತ್ತಿಗೆಯನ್ನು ಅರ್ಧಮಾತ್ರ ಕೊಯ್ದಿದ್ದರು. ಧರಿಸಿದ್ದ ಉಡುಪುಗಳು ತುಂಬ ಅಮೂಲ್ಯವಾಗಿದ್ದಂತೆ ಕಂಡುಬಂದುವು. ಆದರೆ ವಿಠಲನು ಗುರುತಿಸಬಲ್ಲಂತಹ ಯಾವಚಿಹ್ನೆಗಳೂ ಇರಲಿಲ್ಲ.

ಹೀಗೆ ಕೊಲೆಗೆ ಗುರಿಯಾಗಿರುವವನಾರು ? ಈ ದೇಹವು ಕಾಂತನಾಥನದೆಯೇ; ಪ್ರಾಯಶಃ ಇದು ಅವನ ದೇಹದಂತೆಯೇ ಇದೆ. ಅಷ್ಟೇ ಎತ್ತರ ಸುಮಾರು ಅದೇವಯಸ್ಸು. ಆಗಲಿ. ಇದು ಕಾಂತನಾಥನ ದೇಹವೇ ಆಗಿದ್ದರೆ ಕತ್ತನ್ನು ಕೊಯ್ಯಬೇಕಾದ ಆವಶ್ಯಕತೆಯೇನಿದ್ದಿತು? ಇತ್ಯಾದಿ ಯೋಚನೆಗಳೆಲ್ಲ ವಿಠಲನ

ಮೆದುಳಿನಲ್ಲಿ ಸೇರಿಕೊಂಡು ಒಂದಕ್ಕೊಂದು ಗೋಜಿಹೋಗಿ ಕಡೆಗೆ ಅವನನ್ನು ಮುಗ್ಧನನ್ನಾಗಿ ಮಾಡಿದುವು.

ಅಂತು ಕೊಲೆ. ನರಹತ್ಯವೇನೋ ನಡೆದಿದೆ. ವಿಠಲನು ಪತ್ತೆಮಾಡಿದಾನೆ. ಅದುಕಾಂತನಾಥನ ದೇಹವಾಗಲಿ ಅಥವಾ ಮತ್ತಾವನದೇ ಅಗಲಿ ಕೃತ್ಯವೇನೋ ಹತ್ಯೆಯೋ ಒಂದೇವಿಧ. ಈಗ ವಿಠಲನು ಈ ಸಂಗತಿಯನ್ನು ಪೋಲೀಸಿಗೆ ತಿಳಿಯಿಸ ಬೇಕೇ ಬೇಡವೆ? ಒಂದುವೇಳೆ ಪತ್ತೆಮಾಡಹತ್ತಿದರೆ ಈ ಮನುಷ್ಯರು ಅಂದರೆ ಯಾವ ತುಂಟರನ್ನು ವಿಠಲನು ಹಿಂಬಾಲಿಸುತ್ತಿದಾನೋ ಅವರು, ಕಾಲಿಗೆ ಬುದ್ಧಿಹೇಳುವರು. ಆಗ್ಗ ವಿಠಲನು ಪಟ್ಟ ಕಷ್ಟವೆಲ್ಲ ನೀರಲ್ಲಿ ಹವನಮಾಡಿದಂತಾಗುವುದು. ಅಲ್ಲದೆ ಈ ದೇಹವು ಕಾಂತನಾಥನದೇ ಸರಿಯೆಂದೂ ಅವರೇ ತಪ್ಪಿತ ಮಾಡಿದವರೆಂದೂ ದೃಢಪಡಿಸುವುದಕ್ಕೆ ವಿಠಲನಲ್ಲಿ ಯಾವ ಸಾಧನೆಯೂ ಇಲ್ಲ. ಇಷ್ಟೇ ಅಲ್ಲದೆ ಕಾಂತನಾಥನು ಕೊಲ್ಲಲ್ಪಟ್ಟನು ಅಥವಾ ಸತ್ತನು ಎಂದು ಸ್ಥಾಪಿಸುವುದಕ್ಕೆ ಕೂಡ ವಿಠಲನಿಗೆ ಸಾಧ್ಯವಿಲ್ಲ. ಈ ವಿಷಯವಾಗಿ ಬಹಳ ಹೊತ್ತು ಯೋಚಿಸಿ ಕೊನೆಗೆ ತಾನು ಹೀಗೆ ಶವವನ್ನು ಕಂಡುದನ್ನು ಬಹಿರಂಗ ಪಡಿಸಬಾರದೆಂದು ನಿಶ್ಚಯಿಸಿಕೊಂಡನು. ಏಕೆಂದರೆ ವಿಠಲನು ತನ್ನ ಕಕ್ಷಿಗಾರಳನ್ನು ಉದ್ಧಾರಮಾಡುವುದಕ್ಕೋಸ್ಕರ ಹೀಗೆ ನಡೆಯಬೇಕಾಯಿತು.

ಆ ಕತ್ತಲೆಯ ನೆಲಮನೆಯ ಒಂದು ಮೂಲೆಯಲ್ಲಿ ಒಂದು ದೊಡ್ಡ ಜಾಯಿ ಕಾಯಿಪೆಟ್ಟಿಗೆ ಬಿದ್ದಿದ್ದಿತು. ವಿಠಲನು ಈ ಶವವನ್ನು ಅದರೊಳಕ್ಕೆ ಹಾಕಿ ಹಲಗೆಯನ್ನು ಮುಚ್ಚಿ ಅದರಮೇಲೊಂದು ಬಂಡೆಯನ್ನು ಹೇರಿದನು. ಇನ್ನು ಕೆಲವು ದಿನಗಳವರೆಗೂ ಅಲ್ಲಿಯೇ ಬಿಟ್ಟಿದ್ದು ಸರಿಯಾದ ಅವಕಾಶ ದೊರೆತಾಗ ಅದನ್ನು ಹೊರಕ್ಕೆ ಸಾಗಿಸಬೇಕೆಂಬುದೇ ವಿಠಲನ ಮನೋಗತ.

ಇಷ್ಟೆಲ್ಲಾ ಆದಮೇಲೆ ವಿಠಲನು ಮೇಲಕ್ಕೆ ಬಂದು ನೆಲಮಾಳಿಗೆಯ ಬಾಗಿಲನ್ನು ಮೊದಲನಂತೆಯೇ ಭದ್ರಪಡಿಸಿ ಸ್ವಲ್ಪವೂ ಸದ್ದಾಗದಂತೆ ಹೆಜ್ಜೆಯಿಡುತ್ತ ನಿದಾನವಾಗಿ ಉಪ್ಪರಿಗೆಯ ಮೇಲಕ್ಕೆ ಏರುತ್ತ ಬಂದನು. ಬಳಿಕ ಅಲ್ಲಿ ಆಲಿಸುತ್ತ ಅವಧಾನವಿಟ್ಟು ನಿಂತುಕೊಂಡನು. ಅಲ್ಲಿನ ಹಾಲ್ ಬಹು ವಿಸ್ತಾರವಾಗಿದ್ದಿತು. ಪೂರ್ವದಲ್ಲಿ ಎಷ್ಟೋ ವರ್ಷಗಳ ಹಿಂದೆ ಆ ಮನೆಯಲ್ಲಿ ಒಬ್ಬ ವರ್ತ

ಕನು ವಾಸವಾಗಿದ್ದಾಗ ವಿಠಲನು ನೋಡಿದ್ದ ನೆಪ್ಪು ಈಗ ತಕ್ಕಮಟ್ಟಿಗೆ ಸಹಾಯಕವಾಯಿತು. ಇವನು ಎಲ್ಲಾ ಕೊರಡಿಗಳನ್ನೂ ಒಂದೊಂದನ್ನಾಗಿ ಹುಡುಕುತ ಬಂದನು. ಎಲ್ಲೂ ಯಾರೂ ಇರಲಿಲ್ಲ. ತಾನು ನೆಲಮಾಳಿಗೆಯಲ್ಲಿದ್ದಾಗ ನಾಗೇಶನು ಮನೆಯಿಂದ ಹೊರಕ್ಕೆ ಹೋಗಿರಬಹುದೆಂದುಕೊಂಡನು. ತರುವಾಯ ಮೂರನೆಯಂತಸ್ತಿಗೆ ಏರಿ ನೋಡಲು ಇಲ್ಲಿ ಹಾಲಿನ ನಡುವಣ ಕೊಠಡಿಯ ಬಾಗಿಲ ಸಂದಿನಿಂದ ಬೆಳಕಿನ ಕಿರಣಗಳು ಸೂಕ್ಷ್ಮವಾಗಿ ಹೊರಟಿದ್ದುವು. ವಿಠಲನು ಈಗ ಕೇವಲ ಜಾಗರೂಕತೆಯಿಂದ ಆ ಬಾಗಿಲ ಬಳಿಗೆ ಹೋಗಿ ಸ್ತಂಭದಂತೆ ನಿಂತು ತಲೆಯನ್ನು ಸ್ವಲ್ಪ ಓರೆಮಾಡಿಕೊಂಡು ಆಲಿಸುತ್ತ ಬರಲು ಈ ಸಂಭಾಷಣೆಯು ಕೇಳಬಂದಿತು.

ನಾಗೇಶ—ಎಲೆ ರಮಣೀರತ್ನ, ನಾನು ನಿನ್ನನ್ನು ವಿಶೇಷವಾಗಿ ಪ್ರೀತಿಸುತ್ತೇನೆ. ನಿನಗೋಸ್ಕರ ಎಂತಹ ಗಂಡಗಳನ್ನಾದರೂ ಅನುಭವಿಸಲು ಸಿದ್ಧನಾಗಿದ್ದೇನೆ. ನೀನು ಮಾತ್ರ ನನ್ನವಳಾಗು. ಆಮೇಲೆ ಅದರ ಸ್ವಾರಸ್ಯವನ್ನು ತೋರಿಸುವೆನು. ನಾವಿಬ್ಬರೂ ಲಲಿತಪಟ್ಟಣಕ್ಕೆ ಹೋಗಿ ನಿನ್ನ ಹಳೇ ಗಂಡನ ಆಸ್ತಿಯನ್ನನುಭವಿಸೋಣ.

ಒಂದು ಸ್ತ್ರೀವ್ಯಕ್ತಿ—ಅಯ್ಯ, ನಾನು ನಿನ್ನ ಮಾತನ್ನು ಕೇಳುವುದಿಲ್ಲ.

ನಾಗೇಶ—ಇಲ್ಲ. ಹಾಗೆ ಮಾಡಬೇಡ. ವಾಗ್ದಾನಮಾಡು. ನೀನು ಸ್ವತಂತ್ರಳಾಗುವೆ.

ಸ್ತ್ರೀವ್ಯಕ್ತಿ—ಇಲ್ಲ ಇಲ್ಲ, ಆಣೆ ಭಾಷೆಗಳಿಂದ ಸ್ವಾತಂತ್ರ್ಯವನ್ನು ಪಡೆಯಬೇಕಾದ ಆವಶ್ಯಕತೆ ನನಗೇನೂ ಇಲ್ಲ. ನೀನು ನನಗೆ ಆಪ್ತನಾಗಿ ನಟಿಸುತ್ತೀಯೆ. ಆದರೂ ನೀನು ಕೇವಲ ಕೃತ್ರಿಮಿ, ದುಷ್ಟ, ಮೋಸಗಾರ ಎಂಬುದನ್ನು ನಾನು ಬಲ್ಲೆ. ಯಾವ ಪಾಪಿಗಳು ನನ್ನ ಪತಿಯನ್ನು ವಧೆಗೈದು ನನ್ನನ್ನೂ ಕೊಲ್ಲಲೆಳಸುತ್ತಿರುವರೋ ಅಂತಹ ಕೊಲೆಪಾತಕರಿಗಿಂತ ನೀನೇನೂ ಕಡಿಮೆಯಾಗಿಲ್ಲ. ತೊಲಗು, ನನ್ನೆದುರಿಗೆ ನಿಲ್ಲಬೇಡ.

ನಾಗೇಶ—ಓ ಕಾಂತೆ, ನೀನು ಆಮೇಲೆ ಇದಕ್ಕಾಗಿ ಬಹಳ ಪಶ್ಚಾತ್ತಾಪಪಡಬೇಕಾದೀತು. ನೋಡಿಕೊ. ಇನ್ನೂ ಒಂದುದಿನ ಅವಧಿಯನ್ನು ಕೊಟ್ಟಿದ್ದೇನೆ. ನಾನು ನಾಳೆ ಬರುವೆನು. ಆಗಲಾದರೂ ಒಪ್ಪಿಕೊಳ್ಳುವೆಯಂತೆ.

ಇನ್ನು ಈ ದುಷ್ಟನು ಈಚೆಗೆ ಬರುವವನೆಂಬುದನ್ನು ವಿಠಲನು ತಿಳಿದು ಮೆಲ್ಲಗೆ ಎದುರು ಕೊಠಡಿಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡನು. ನಾಗೇಶನು ಈಚೆಗೆ ಬಂದು ಆ ಸೆರೆಮನೆಯ ಬಾಗಿಲಿಗೆ ಬೀಗಹಾಕಿಕೊಂಡು ಪದ ಹೇಳುತ್ತ ಇಳಿದು ಹೋದನು. ಸ್ವಲ್ಪಹೊತ್ತಿಗೆ ಬೀದಿಯ ಬಾಗಿಲನ್ನು ಹಾಕಿಕೊಂಡ ಸದ್ದು ಕೇಳಿಸಿತು. ತರುವಾಯ ವಿಠಲನು ಆ ಸ್ತ್ರೀಯು ಇದ್ದ ಕೊಠಡಿಯ ಬಾಗಿಲ ಬಳಿಗೈದಿ ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಧಡೀರೆಂದು ಕದವನ್ನೊದೆಯಲು ಅದು ಚೂರುಚೂರಾಗಿ ಬಿದ್ದಿತು. ಒಳಗಿದ್ದ ಹೆಣ್ಣುಮಗಳು ಗಡಗಡನೆ ನಡುಗುತ್ತ ನಿಂತಳು. ಬಳಿಕ ಸ್ವಲ್ಪ ಸುಧಾರಿಸಿಕೊಂಡು ಸರಿಯಾಗಿ ನೋಡಿದಳು. ವಿಠಲಮೂರ್ತಿ. ಬಳಿಕ ಆನಂದಾತಿರೇಕದಿಂದ ಕುಣಿದು ಬಿದ್ದಳು.

ವಿಠಲ—ಅಮ್ಮ, ಮಗು, ಪ್ರಫುಲ್ಲೆ, ಬದುಕಿದ್ದೀಯಾ?—ಎಂದು ಕೇಳುತ್ತ ತನ್ನ ಕರವಸ್ತ್ರದಿಂದ ಮುಖದಮೇಲಿನ ಬೆವರನ್ನು ಒರಸಿಕೊಳ್ಳುತ್ತ ಬಂದು ಅದುವರೆಗೂ ತಾನು ಮಾಡಿದ ಸಾಹಸವನ್ನೆಲ್ಲ ಸಂಗ್ರಹವಾಗಿ ಪ್ರಫುಲ್ಲೆಗೆ ತಿಳಿಸಿದ್ದನು ಅನಂತರ ಮಗಳೇ, ಇಲ್ಲಿಗೆ ನೀನು ಬಂದ ಬಗೆ ಹೇಗೆ ?

ಪ್ರಫುಲ್ಲೆ—ನಾನು ನಮ್ಮ ಮನೆಯ ದಿವಾನ್‌ಖಾನೆಯಲ್ಲಿ ಕುಳಿತು ಪುಸ್ತಕವನ್ನು ಓದುತ್ತಿದ್ದೆ. ಆಗ ನಮ್ಮಣ್ಣನಿಗೆ ಏನೋ ಒಂದುದೊಡ್ಡ ಅಪಾಯ ಸಂಭವಿಸಿದಂತೆಯೂ ಆತನು ಇಂತಹ ಮನೆಯಲ್ಲಿದ್ದಂತೆಯೂ ನನಗೆ ಒಂದು ಕಾಗದ ಬಂದಿತು. ನಾನು ಕೇವಲ ಗಾಬರಿಗೊಂಡು ಈ ಸ್ಥಳಕ್ಕೆ ಬಂದೆನು. ನಾನು ಈ ಮನೆಗೆ ಬಂದಾಗ ಇಬ್ಬರು ಬಂದು ನನ್ನ ಬಾಯಿಗೆ ಬಟ್ಟೆಯನ್ನು ತುರುಕಿದರು. ನಾನು ಕೂಗುವುದಕ್ಕೂ ಅವಕಾಶವಿಲ್ಲವಾಯ್ತು. ಬಳಿಕ ನನ್ನನ್ನು ಈ ಕೊಠಡಿಯೊಳಕ್ಕೆ ಕೂಡಿ ಬೀಗ ಹಾಕಿದರು. ಆ ಗಾಬರಿಯಲ್ಲಿ ಅವರು ಯಾರೆಂಬುದನ್ನು ನಾನು ತಿಳಿಯಲಾರದೆ ಹೋದೆನು. ಪುನಃ ನಾನು ಈ ನಾಗೇಶನನ್ನು ಹೊರತು ಮತ್ತೆ ಯಾರನ್ನೂ ನೋಡಿಲ್ಲ. ಇವನು ದಿನಕ್ಕೆ ಮೂರುವೇಳೆಯಂತೆ ಊಟಕ್ಕೆ ತಂದು ಬಡಿಸುತ್ತಾನೆ ಮತ್ತು ನಾನು ಅವನಿಗೆ ಇಷ್ಟಳಾದ ಗೆಳತಿಯಾಗಿರಬೇಕೆಂದು ಬೇಡಿಕೊಳ್ಳುತ್ತಿದ್ದಾನೆ. ಅಲ್ಲದೆ ಇವನು ಈ ಮನೆಯಲ್ಲಿ ತುಂಬ ಅಪಾಯಗಳುಂಟೆಂದೂ ನಾನು ಬಾಯಿಮುಚ್ಚಿಕೊಂಡು ಸುಮ್ಮನಿದ್ದರೆ ಯಾವ ತೊಂದರೆಯೂ ಸಂಭವಿಸುವುದಿಲ್ಲವೆಂದೂ ಬೆದರಿಸುತ್ತಿ

ದ್ದಾನೆ. ನಾನು ಇಂದಿನವರೆಗೂ ನಾಗೇಶನು ಯೋಗ್ಯಮನುಷ್ಯನೆಂದೇ ಭಾವಿಸಿದ್ದೆ. ಆದರೆ ಈಗ ನೋಡಿದರೆ ಅವನೂ ತನ್ನ ಜತೆಗಾರರಿಗೆ ಮೋಸಮಾಡಿ ತಾನು ಪ್ರಯೋಜನ ಪಡೆಯಲೆಳಸುತಿರುವನೆಂದು ತೋರಿತು. ಹೇಗಾದರೂ ಆಗಲಿ. ಮುಖ್ಯವಾಗಿ ದೇವರು ದೊಡ್ಡವನು. ನೀನು ನನ್ನನ್ನುದ್ಧಾರಮಾಡಿದೆ. ನಾನು ಇನ್ನು ಮನೆಗೆ ಹೋಗಬಹುದಷ್ಟೆ ?

ವಿಠಲ—ಮಗು, ಕೂಡದು. ಇನ್ನೂ ಕೆಲವುಕಾಲ ನಿನ್ನನ್ನು ಶತ್ರುಗಳಿಗೆ ಕಣ್ಣು ಮರೆಯಾಗಿಟ್ಟಿರಬೇಕು. ಆದುದರಿಂದ ನೀನು ನನ್ನ ಜಹಗೀರು ಗ್ರಾಮವಾದ ಹೊಸಮಂಗಲಕ್ಕೆ ಹೋಗಿ ಅಲ್ಲಿ ಸುರಕ್ಷಿತಳಾಗಿರು.

ಈ ಯಜಮಾನನು ತನ್ನ ಸಲುವಾಗಿ ಎಷ್ಟು ಕಷ್ಟಪಡುತ್ತಿದಾನೆಂಬುದನ್ನು ಮನಸ್ಸಿಗೆ ತಂದುಕೊಂಡು ಪ್ರಫುಲ್ಲೆಯು ಬದಲು ಮಾತಾಡದೆ ಸಮ್ಮತಿಸಿದಳು. ವಿಠಲನು ಬಲು ಆಳವಾಗಿ ಯೋಚಿಸುತ್ತ ಅವಳ ಮುಖವನ್ನು ಚೆನ್ನಾಗಿ ದೃಷ್ಟಿಸಿ—ಪ್ರಫುಲ್ಲೆ, ನಾನು ಈ ಮನೆಯ ನೆಲಮಾಳಿಗೆಯಲ್ಲಿ ಕಂಡಂಶವನ್ನು ನೋಡಬಲ್ಲಷ್ಟು ಧೈರ್ಯವು ನಿನಗುಂಟೊ ? ಆ ಶವದ ವಿಷಯದಲ್ಲಿ ನನಗೇನೋ ಸಂಶಯ ನೀನು ಕಾಂತನಾಥನನ್ನು ನೋಡಿದ್ದವಳು.

ಈಗ ಪ್ರಫುಲ್ಲೆಗೆ ಕೈಕಾಲು ಕಂಪಿಸಿತು. ಮುಖವು ಕಳೆಗುಂದಿತು. ತುಟಿಗಳೊಣಗಿದುವು. ಆದರೂ ಆಕೆ ಮನೋದಾರ್ಢ್ಯದಿಂದ—ವಿಠಲ, ಆಗಲಿ ನಡೆ, ಹೋಗಿನೋಡೋಣ ಎಂದಳು.

ವಿಠಲನು ಪ್ರಫುಲ್ಲೆಯ ದಾರ್ಢ್ಯಕ್ಕೆ ಅಷ್ಟಿಷ್ಟು ಮೆಚ್ಚಿದನೆಂದರೆ ಸಾಲದು. ಅವನು ಕೈಯ್ಯಲ್ಲಿ ಲಾಂದ್ರವನ್ನು ಹಿಡಿದು ಹೊರಟನು. ಪ್ರಫುಲ್ಲೆಯು ಆ ದುರ್ವಾಸನೆಯನ್ನು ಸಹಿಸಿಕೊಂಡು ಎಡಗೈಯ ಜೀವದಿಂದ ಆತನನ್ನು ಹಿಂಬಾಲಿಸಿದಳು. ವಿಠಲನು ಅಲ್ಲಿನ ಪೆಟ್ಟಿಗೆಯ ಮುಚ್ಚಳವನ್ನು ತೆರೆದು ಆ ಶವವನ್ನು ಹೊರದೆಗೆದು ನೆಲದಮೇಲಿಟ್ಟು ಲಾಂದ್ರವನ್ನು ಹಿಡಿದನು. ಆಗ ಆ ಬಾಲಿಕೆಯ ಆ ಸ್ಥಿತಿಯನ್ನು ಇಲ್ಲಿ ವರ್ಣಿಸುವುದು ಕಷ್ಟ. ಹಾಗೂ ಎಲ್ಲವನ್ನೂ ಸಹಿಸಿಕೊಂಡು ಒಂದು ಮಾತನ್ನೂ ಆಡದೆ ಕಣ್ಣಲ್ಲಿ ನೀರುಸುರಿಸುತ್ತ ಆ ಹೆಣವನ್ನೂ ಅದರ ಉಡುಪನ್ನೂ ನಿಧಾನವಾಗಿ ಪರೀಕ್ಷಿಸಹತ್ತಿದಳು. ವಿಠಲನು ಮೌನವಾಗಿ

ನಿಂತು ಪ್ರಫುಲ್ಲೆಯು ಅದನ್ನು ಹೇಗೆ ಹೇಗೆ ಪರೀಕ್ಷಿಸುವಳೆಂಬುದನ್ನು ನೋಡು ತ್ತಿದ್ದನು. ಅವಳ ಬಾಯಿಂದೇನು ಬರುವುದೋ ಎಂದು ತುಂಬ ಆತುರ ಗೊಂಡಿದ್ದನು. ಆಗ ಆತನಿಗೆ ಒಂದು ಕ್ಷಣವೂ ಒಂದು ವರ್ಷವಾಗಿದ್ದಿತು. ಅವಳು ಎಲ್ಲವನ್ನೂ ಕ್ರಮವಾಗಿ ಪರೀಕ್ಷಿಸಿ ಕಡೆಗೆ–ಇದು ಕಾಂತನಾಥನ ಶರೀರ ವಲ್ಲ, ಅದೇನೋ ಖಂಡಿತ–ಎಂದಳು. ವಿಠಲನು ಜುಗುಪ್ಸಾವಹವಾದ ಆ ಜೀ ರ್ಣದೇಹವನ್ನು ಯಥಾಸ್ಥಿತಿಯಲ್ಲಿಟ್ಟು ಮೇಲಕ್ಕೆ ಬಂದು ಬಾಗಿಲುಗಳನ್ನೆಲ್ಲ ಮೊದಲನಂತೆಯೇ ಭದ್ರಪಡಿಸಿ ಪ್ರಫುಲ್ಲೆಯೊಡನೆ ಆ ಮನೆಯನ್ನು ಬಿಟ್ಟು ಹೊರಟು ಹೋದನು.

---

## ಎಂಟನೆಯ ಪರಿಚ್ಛೇದ.

ವಿಠಲನೂ ಪ್ರಫುಲ್ಲೆಯೂ ಮನೆಯ ಹೆಬ್ಬಾಗಲಿಗೆ ಬಂದರು. ಅದುವ ರೆಗೂ ಅವಳು ಧೀರಳಾಗಿಯೇ ಇದ್ದಳು. ಆದರೆ ಬಳಿಕ ಆಗ ಸ್ಮೃತಿಗೆ ಬಂದ ಹಿಂದಿನ ವಿಷಯಗಳೆಲ್ಲ ಆಕೆಯ ನರಮಂಡಲದ ಮೇಲೆ ಕೆಲಸಮಾಡ ತೊಡಗಿದು ದರಿಂದ ಆಕೆಯು ಇದ್ದಕ್ಕಿದ್ದಹಾಗೆಯೇ ಜ್ಞಾನತಪ್ಪಿ ಬಿದ್ದಳು. ಆಗ ಆಕೆ ಯನ್ನು ಸುದಾರಿಸುವುದು ವಿಠಲನಿಗೆ ಬಲುಕಷ್ಟವಾಯಿತು. ಕಡೆಗೆ ಆತನು ಆಕೆಯನ್ನು ಒಂದು ಕುದುರೆಯ ಗಾಡಿಯಲ್ಲಿ ತನ್ನ ಆಫೀಸಿಗೆ ಕರೆದುಕೊಂಡು ಹೋದನು. ಅಲ್ಲಿ ವಿಠಲನೂ ನಟೇಶನೂ ಆದರದಿಂದ ನಡೆಯಿಸಿದ ಶೈತ್ಯೋಪ ಚಾರಗಳಿಂದ ಪ್ರಫುಲ್ಲೆಗೆ ಪ್ರಜ್ಞೆಯು ಮರಳಿತು. ವಿಠಲನು ವಾರಣಲಾಲನ ಕಾಗದವನ್ನು ಓದಿದನು. ಅಲ್ಲದೆ ವಾರಣನು ಆ ಇಬ್ಬರು ಸ್ತ್ರೀಯರ ಜತೆಗೆ ಸೇರಿಕೊಂಡು ನಾಟಕಕ್ಕೆ ಹೋದ ಸಂಗತಿಯನ್ನು ನಟೇಶನಿಂದ ತಿಳಿದನು. ಇವೆ ರಡರಿಂದ ಅವನ ಮನಸ್ಸು ಕೇವಲ ಕಿಂಕೃತಿಯನ್ನೈದಿತು. ಇನ್ನು ಮುಂದಕ್ಕೆ ವಾರಣಲಾಲನಿಗೆ ಯಾವ ರಹಸ್ಯವನ್ನೂ ತಿಳಿಯಿಸಲೇಕೂಡದೆಂದೂ ಸದ್ಯಕ್ಕೆ ಪ್ರಫುಲ್ಲೆಯನ್ನು ಆ ಗುಂಪಿನವರ ಕಣ್ಣಿಗೆ ಬೀಳದಂತೆ ಕೆಲವುಕಾಲ–ಅಂದರೆ ತನ್ನ ಯೋಚನೆಯೆಲ್ಲ ಫಲಿಸುವವರೆಗೆ ಜೋಕೆಯಾಗಿಟ್ಟಿರಬೇಕೆಂದೂ ನಿರ್ಧರಿಸಿಕೊಂಡು

ಈ ವಿಷಯವಾಗಿ ನಟೇಶನೊಡನೆಯೂ ಆಲೋಚಿಸಿ ಅದೇ ದಿನ ಮೊದಲನ ರೈಲಿ ನಲ್ಲೇ ಪ್ರಫುಲ್ಲೆಯು ನಟೇಶನ ಸಂಗಡ ಹೊಸಮಂಗಲಕ್ಕೆ ಹೊರಡಬೇಕೆಂದನು. ಪ್ರಫುಲ್ಲೆಯು ಮೊದಲು ಸ್ವಲ್ಪ ಹಿಂಜರಿದಳು. ಆದರೆ ವಿಠಲನು ಗುಣದೋಷ ಗಳನ್ನೆಲ್ಲಾ ಚೆನ್ನಾಗಿ ವಿವರಿಸಿ ಹೇಳಲು ಮುಂದಕ್ಕೆ ಅವಳು ಮೂರ್ಖತನಮಾಡ ಲಿಲ್ಲ. ಪ್ರಫುಲ್ಲೆಯು ಹೊರಟಮೇಲೆ ವಿಠಲನು ಕೆಲವುದಿನ ವಿಶ್ರಾಂತಿಸುಖವನ್ನ ನುಭವಿಸಿದನು. ಆ ಹಾಳುಮನೆಯಲ್ಲಿ ಕೊಳೆಯುತ್ತಿದ್ದ ಮನುಷ್ಯಶರೀರದ ವಿಷ ಯವು ವಿಠಲನ ಮನಸ್ಸನ್ನೆಲ್ಲ ಆಕ್ರಮಿಸಿದ್ದಿತು. ಮುಂದೇನು ಮಾಡಬೇಕೆಂ ಬುದೇ ತೋರಲಿಲ್ಲ.

ಒಂದುದಿನ ಕಾರ್ಯಾರ್ಥವಾಗಿ ವಿಠಲನು ಹೊರಕ್ಕೆ ಹೊರಡಬೇಕೆಂದಿ ದ್ದಾಗ ಯಾರೋ ಬಾಗಿಲುತಟ್ಟಿದ ಸದ್ದಾಯಿತು. ನೋಡುವಲ್ಲಿ ನಳಿನಿ. ಅವಳು ಬೇಗ ಒಳಕ್ಕೆ ಬಂದು ಚಿಲಕವನ್ನು ಹಾಕಿಕೊಂಡಳು. ಗಾಬರಿಯಿಂದ ಎದೆಯು ಬ್ಬಸವಿಕ್ಕುತ್ತ ಅವಳು—ವಿಠಲ, ನಾನು ಈಗತಾನೆ ನಾಗೇಶನ ಕಡೆಯಿಂದ ಬಂದೆ. ಅವನು ಬಾಯಲ್ಲಿ ಅಕ್ಕೀಕಾಳನ್ನಿಟ್ಟುಕೊಂಡು ಭೂಮಿಗಿಳಿದು ಕುಳಿತಿದಾನೆ.

ವಿಠಲ—ಇದೇನೆ ? ಅದೇಕೆ ?

ನಳಿನಿ—ಈ ಮಧ್ಯಾಹ್ನ ನಾನು ನಾಗೇಶನ ಮನೆಗೆ ಹೋದೆನು. ಬಳಿಕ ನಾವಿಬ್ಬರೂ ಆ ದಿನ ನೀನು ಬಂದಿದ್ದ ಹೋಟಲಿಗೆ ಹೋದೆವು. ಅಲ್ಲಿಗೆ ಮಾಧ ವಭಾಸ್ಕರರೂ ಬಂದರು. ತರುವಾಯ ಆ ಮೂವರೂ ಒಂದು ಕೊಠಡಿಯೊ ಳಕ್ಕೆ ಹೋಗಿ ರಹಸ್ಯವಾಗಿ ಮಾತಾಡಿಕೊಂಡರು. ನಾನು ಯಥಾಪ್ರಕಾರ ಪಕ್ಕದ ಕಿರುಮನೆಯಲ್ಲಿ ಕುಳಿತು ಎಲ್ಲವನ್ನೂ ಹೊಂಚಿಕೇಳಿದೆನು.

ವಿಠಲ—ಏನೇನು ನಡೆಯಿತು ?

ನಳಿನಿ—ನಾಗೇಶನು ಅವರಿಬ್ಬರನ್ನೂ ಕುರಿತು—" ಆ ಹುಡುಗಿಯನ್ನು ಹಾರಿಸಿಬಿಟ್ಟುದಾಯಿತು. ಆ ಶವದಿಂದ ಎಷ್ಟೋ ಮೀನುಗಳಿಗೆ ಆಹಾರ ಸಿಕ್ಕಿತು." ಎನ್ನಲು ಅವರು ಬಲು ಉಲ್ಲಾಸಗೊಂಡು ಐದು ನೋಟುಗಳನ್ನು ಅವನಿಗೆ ಬಹುಮಾನಕೊಟ್ಟರು.

ವಿಠಲ—ಅವನು ಅಷ್ಟು ಹೇಳಿದ ಮಾತ್ರಕ್ಕೇ ಅಪ್ಪುಕೊಟ್ಟರೆ?

ನಳಿನಿ—ಹೌದು. ಮತ್ತು ಅವರಿಬ್ಬರೂ ಆಕ್ಷಣವೇ ಹೊರಟುಹೋದರು. ಬಳಿಕ ನಾಗೇಶನು ನನ್ನ ಬಳಿಗೆ ಬಂದು ತಾನು ಅವರಿಗೊಂದು ಗೂಳಿಯನ್ನು ಮಾರಿದ್ದಂತೆಯೂ ಅದರ ಹಣವು ಬಂದಿತೆಂದೂ ಹೇಳಿದುದಲ್ಲದೆ, ಪ್ರಫುಲ್ಲೆಯು ಹೇಗೊ ತಪ್ಪಿಸಿಕೊಂಡಿರುವಳೆಂದೂ ಪ್ರಾಯಶಃ ಆ ವಿಷಯದಲ್ಲಿ ನೀನು (ವಿಠಲನು) ಅವಳಿಗೆ ಸಹಾಯವಾಗಿರಬಹುದೆಂದೂ ಹೇಳಿ ಮುಂದಕ್ಕೆ ಇದನ್ನು ನಾನು ಪತ್ತೆ ಮಾಡಿದರೆ ನನಗೆ ದೊಡ್ಡ ಬಹುಮಾನವನ್ನು ಕೊಡುವುದಾಗಿಯೂ ನನ್ನನ್ನು ಬೇಡಿಕೊಂಡನು. ಅಂತು ಅವನಿಗೆ ಮರಣಕಂಪ ಹತ್ತಿದೆ.

ವಿಠಲ—ಒಂದುವೇಳೆ ಆ ಹುಡುಗಿ ಸಿಕ್ಕಿದರೆ ನಾಗೇಶನು ದೇಶಾಂತರ ಓಡಬಹುದಲ್ಲವೆ? ಯಾಕೆಂದರೆ ಅವನು ಮಾಧವಭಾಸ್ಕರರಿಗೆ ಅಷ್ಟು ಹೆದರುತ್ತಾನೆಂದು ತೋರುವುದು.

ನಳಿನಿ—ಅದು ದಿಟ. ನಾನು ಹೋಗಿ ಅವನ ಸಂಗಡ ಯಾವುದೊಂದು ವಿಷಯವನ್ನು ಹೇಳುವವರೆಗೂ ಅವನಿಗೆ ಚಿತ್ತಸ್ಥೈರ್ಯವೇ ಇರುವುದಿಲ್ಲ.

ವಿಠಲ—ಪ್ರಫುಲ್ಲೆಯು ಕೊಲ್ಲಲ್ಪಟ್ಟಳೆಂದೂ ಇತಃಪರ ತಾವೇನೂ ಭಯಪಡಬೇಕಾದುದಿಲ್ಲವೆಂದೂ ಮಾಧವಭಾಸ್ಕರೂ ನಂಬಿರಬಹುದು. ಇದು ಒಳ್ಳೆಯದೇ. ಮಹಾಶಯನಾಗೇಶನೇ ಆ ಹುಡುಗಿಯು ತಪ್ಪಿಸಿಕೊಳ್ಳುವುದಕ್ಕೆ ಅವಕಾಶ ಕೊಟ್ಟಿರಬಹುದೇನೊ! ನನಗೆ (ವಿಠಲನಿಗೆ) ಈ ವಿಷಯವೇನೂ ಗೊತ್ತಿಲ್ಲವೆಂದು ಹೇಳಿಬಿಡು.

ನಳಿನಿ—ಹಾಗೆಯೇ ಮಾಡುತ್ತೇನೆ.

ಮುಂದಕ್ಕಿನ್ನೇನು ಮಾಡಬೇಕೆಂಬುದನ್ನೆಲ್ಲ ವಿಠಲನು ನಳಿನಿಗೆ ಹೇಳಿಕೊಟ್ಟು ಕಳುಹಿಸಿ ತಾನು ಪ್ರಫುಲ್ಲೆಯ ಸೋದರಮಾವನಾಗೀಶನ ವೇಷಕ್ಕೆ ತಕ್ಕ ಉಡುಪುಗಳನ್ನು ಧರಿಸಿ ವಾರಣಲಾಲನ ಮನೆಗೆ ಸೌದಾಮಿನಿ (ಕೃತಕಪ್ರಫುಲ್ಲೆ)ಯ ಬಳಿಗೆ ಹೊರಟನು.

ಅಲ್ಲಿ ಒಳಗೆ ಮೂವರು ನಾಲ್ವರು ಮಾತಾಡುತ್ತಿದ್ದಂತೆ ಕೇಳಿಸಿತು. ಒಂದು ತೂಲಿಕಾಸನ (Sofa) ದ ಮೇಲೆ ವಾರಣನೂ ಅವನ ಮಗ್ಗುಲಲ್ಲಿ ತಿಲುಮೆಯೂ ಕುಳಿತಿದ್ದರು. ಸೌದಾಮಿನಿಯು ತಿಲುಮೆಯ ಹತ್ತಿರ ದೀಪದಬಳಿ ಒಂದು ವಿಶ್ರಮಾಸನ(An Easy Chair)ದ ಮೇಲೆ ಒರಗಿದ್ದಳು. ಮಾಧವನು ಒಂದು ಕಾಲ್ಮಣೆ (Stool)ಯ ಮೇಲಿದ್ದನು. ಭಾಸ್ಕರನು ರಾಗಮಾಲನ್ನು ಬಾರಿಸುತ್ತಿದ್ದನು.

ವಿಠಲನು ಒಳಹೊಕ್ಕದ್ದನ್ನು ಮೊದಲು ಕಂಡವಳು ಸೌದಾಮಿನಿ. ಅವಳು ಆಕ್ಷಣವೇ ಮೇಲಕ್ಕೆದ್ದು—ಮಾವಯ್ಯ, ಬಾ. ಸಂತೋಷ, ಇಗೋ,ಇವರೆಲ್ಲ ನಮಗೆ ಬೇಕಾದ ಆಪ್ತರು. ಈ ಮಧ್ಯಾಹ್ನತಾನೆ ನಾವೆಲ್ಲರೂ ಈ ಮನೆಗೆ ಬಂದೆವು. ಈತನು ನಮ್ಮ ಗೆಳತಿಯಾದ ಭರತಮಾಧವಿಯ ಪತಿಯಾದ ಮಾಧವ. ಈ ಭಾಸ್ಕರನು ಈತನ ಸ್ನೇಹಿತ.

ಇಷ್ಟು ಹೇಳಿದಮೇಲೆ ಅವರೆಲ್ಲರಿಗೂ ವಿಠಲನಿಗೂ ಪರಸ್ಪರ ಮರ್ಯಾದೆ ಪ್ರತಿಮರ್ಯಾದೆಗಳು ನಡೆದವು. ಆದರೆ ಅವರೆಲ್ಲರೂ ಮನಸ್ಸಿನಲ್ಲಿ ಈ ಮುದುಕನು ಬಾರದಿದ್ದರೆ ಮೇಲಾಗಿರುತ್ತಿದ್ದಿತೆಂದುಕೊಂಡರು. ವಾರಣನು ಆ ಮೋಹನೆಯ ಮಗ್ಗುಲನ್ನು ಬಿಟ್ಟು ಆಡಾಡುತ್ತಿರಲಿಲ್ಲವಾಗಿ ಅವನ ಸಂಗಡ ಒಂದು ಕ್ಷಣದ ರಹಸ್ಯೋಕ್ತಿಗೂ ವಿಠಲನಿಗೆ ಅವಕಾಶ ಸಿಕ್ಕಲಿಲ್ಲ. ಮಾಧವನೂ ಭಾಸ್ಕರನೂ ಧರಿಸಿದ್ದ ಷರಟುಗಳಿಗೆ ಹಾಕಿದ್ದ ಕೈಗುಂಡಿಗಳ ವಜ್ರಗಳು ಆ ಪೆಟ್ರೋಲಿಯಂ ದೀಪದ ಬೆಳಕಿನಲ್ಲಿ ಥಳಥಳಿಸುತ್ತ ನಕ್ಷತ್ರಗಳನ್ನಣಕಿಸುವಂತಿದ್ದುವು. ಕಡೆಗೆ ಆ ರಾತ್ರಿ ಹನ್ನೊಂದು ಘಂಟೆಯಲ್ಲಿ ತಿಲಮೆ (ತಿಲೋತ್ತಮೆ ಅಥವಾ ಭರತಮಾಧವಿ) ಯು ಎದ್ದು ಇನ್ನು ತಾವು ತಮ್ಮ ಮನೆಗೆ ಹೊರಡುವುದಾಗಿ ಹೇಳಿದಳು.

ಆಗ ಸೌದಾಮಿನಿಯು—ಬೇಡಬೇಡ, ಇನ್ನೂ ಬೇಡ. ಈ ರಾತ್ರಿ ಇಲ್ಲಿಯೇ ಇರಿ. ಇಲ್ಲಿ ಬೇಕಾದಷ್ಟು ಕಿರುಮನೆಗಳಿವೆಯಲ್ಲಾ?

ತಿಲಮೆ—ಏನು ಕುಚೇಷ್ಟೆ ಮಾಡುತ್ತೀಯೇ? ಅಂತಹುದೇನೂ ಬೇಡ. ನಾನು ಮನೆಗೆ ಹೋಗಬೇಕು.

ಕೃತಕಪ್ರಫುಲ್ಲೆ (ಸೌದಾಮಿನಿ)-ಇರಲಿ, ಸಂಕೋಚವೇತಕ್ಕೆ? ಇನ್ನೂ ಈಗಲೇಬೇಡ. ಕಡೆಗೆ ಈರಾತ್ರಿಮಟ್ಟಿಗಾದರೂ ಇಲ್ಲಿದ್ದುಹೋಗಬೇಕು.

ಹೀಗೆಂದು ಮಾತಾಡುತ್ತ ಈ ಇಬ್ಬರು ಸ್ತ್ರೀಯರೂ ಒಳಕ್ಕೆ ಹೋದರು.

ಭಾಸ್ಕರ_ನಿದ್ರೆಬರುವವರೆಗಾದರೂ ಸ್ವಲ್ಪಹೊತ್ತು ಇಸ್ಪೀಟಾಡೋಣವೆ?

ವಾರಣ_ಆಹಾ! ಅಗತ್ಯವಾಗಾಗಬಹುದು. ಎಂದು ಹೇಳಿ ಒಳಗಿನಿಂದ ಒಂದು ಕಟ್ಟು (Packet) ನ್ನು ತಂದುಹಾಕಿದನು. ಎಲ್ಲರೂ ವಿಠಲನ ಬಳಿಗೆ ಬಂದು ಕುಳಿತುಕೊಂಡರು.

ವಿಠಲ_ಇಲ್ಲ, ನನಗೆ ಆಟವು ಅಷ್ಟು ಚೆನ್ನಾಗಿ ಬರುವುದಿಲ್ಲ, ಕ್ಷಮಿಸ ಬೇಕು. ನೀವುಗಳಾಡುತ್ತಿರಿ. ನಾನು ನೋಡುತ್ತಿರುವೆನು.

ಮಾಧವ_ಓಹೋ! ಇದೇನು! ನೀನು ಕದೀಮ. ಇದರಮೇಲೆ ಕಳಿಂಗ. ನಿನಗೆ ಬರುವುದಿಲ್ಲವೆಂಬುದು ಸೋಜಿಗ.

ವಿಠಲ_ಇಲ್ಲ, ನಾನು ಈಚೆಗೆ ಅನೇಕ ವರ್ಷಗಳಿಂದ ಆಡಿಲ್ಲ.

ಮಾಧವ_ಹುಣಿಸೇಮರ ಮುದಿಯಾದರೆ ಹುಳಿ ಬಿಟ್ಟೀತೆ? ಹೆಚ್ಚಾಗೇನೂ ದುಡ್ಡಿಡಬೇಕಾದುದಿಲ್ಲ. ವಾರಣ, ಬಾ ಆಡೋಣ.

ವಿಠಲನು ತನಗೆ ಆಟದ ಮರ್ಮ ಗೊತ್ತಿಲ್ಲವೆಂದು ಏನೇನೋ ನೆಪ ಹೇಳಿ ದರೂ ತಪ್ಪಿಸಿಕೊಳ್ಳಲಾಗಲಿಲ್ಲ. ವಿಠಲನು ನಿಜವಾಗಿ ಒಳ್ಳೇ ಆಟಗಾರ. ಎಲೆ ಗಳನ್ನು ಕಲೆಸುವುದರಲ್ಲೂ ಮರೆಸುವುದರಲ್ಲೂ ಬಲು ಚುರುಕಾದ ಮೇಧಾವಿ. ಅವನು ಮನಸ್ಸು ಮಾಡಿದರೆ ಯಾರ ಕೈಯೂ ಏನೂ ನಡೆಯದು.

ಮಾಧವ_ಎಲ್ಲರೂ ಸ್ವಲ್ಪಸ್ವಲ್ಪ ದುಡ್ಡಿಟ್ಟು ಆಡೋಣ.

ಆಟಕ್ಕೆ ಪ್ರಾರಂಭವಾಯಿತು. ಸುಮಾರು ಅರ್ಧಘಂಟೆಯಲ್ಲೇ ವಿಠ ಲನು ಉಳಿದವರನ್ನು ಬರಿದುಮಾಡಿ ತಾನೇ ಗೆದ್ದು ಇನ್ನು ಎಲ್ಲರಿಗೂ ನಿದ್ರೆಯ ಹೊತ್ತಾಯಿತೆಂದೂ ಎಲ್ಲರೂ ಮಲಗಿಕೊಳ್ಳೋಣವೆಂದೂ ಹೇಳಿದನು.

ಮಾಧವಭಾಸ್ಕರರಿಗೆ ಮುಖ - ಕೆಟ್ಟಿತು. ಅವರಿಬ್ಬರೂ ಮಲಗಿಕೊಳ್ಳು ವುದಕ್ಕೋಸ್ಕರ ಮಹಡಿಯ ಮೇಲಕ್ಕೆ ಹೋಗುತ ಹೀಗೆ ಮಾತನಾಡಿಕೊಳ್ಳುತ್ತಿದ್ದುದು ವಿಠಲನ ಕಿವಿಗೆ ಬಿದ್ದಿತು. 'ಆ ಮುದಿಗೃಧ್ರನಿಗೆ ಇದಕ್ಕೆ ತಕ್ಕದ್ದನ್ನು ಮಾಡಬೇಕು. ಅವನು ಮುದಿನರಿಯಂತಹ ಕುಯುಕ್ತಿಗಾರ. ಹಳ್ಳಿಯ ಗವಾರರಿಗೆ ಹಾಕುವಂತೆ ನಮಗೂ ಟೋಪಿ ಹಾಕಿ ಎಲ್ಲವನ್ನೂ ಕಸುಗೊಂಡನಲ್ಲಾ!'

ಈ ಸಂಭಾಷಣೆಯಾಗುವಾಗ ವಿಠಲನು ವಾರಣಲಾಲನ ಸಂಗಡ ಕೆಲವು ನಿಮಿಷಗಳವರೆಗೆ ಗುಟ್ಟಾಗಿ ಮಾತಾಡುತ ನಿಂತಿದ್ದನು. ವಾರಣನು ತನ್ನ ತಂಗಿಯ ವಿಷಯವೇನಾದರೂ ಗೊತ್ತಾಯಿತೆ—ಎಂದು ವಿಠಲನನ್ನು ಕೇಳಲು, ಅದಕ್ಕವನು ತನಗೇನೂ ತಿಳಿಯಲಿಲ್ಲವೆಂದು ಹೇಳಿದುದಲ್ಲದೆ ತನಗೆ ಅವನು (ವಾರಣ) ಕಾಗದ ಬರೆದಿದ್ದ ಸಮಾಚಾರವೇನೆಂದು ಕೇಳಿದನು. ಆಗ ವಾರಣನು ತನಗೆ ಆ ಕೃತಕಸಹೋದರಿಯು ತನ್ನನ್ನು ಬರಹೇಳಿ ಬರೆದು ಕಳುಹಿಸಿದುದು ಮುಂತಾದುದನ್ನೆಲ್ಲ ವಿಶದವಾಗಿ ತಿಳಿಯಿಸಿದನಾದರೂ ಶಿಲವೇಯ ಮೋಹದ ಬಲೆಗೆ ತಾನು ಹೇಗೆ ಸಿಕ್ಕಿಬಿದ್ದೆನೆಂಬುದನ್ನು ಮಾತ್ರ ಹೇಳದೆ ಮರೆಮಾಚಿದನು. ಬಳಿಕ ಮಲಗಿಕೊಳ್ಳುವುದಕ್ಕೆ ಇಬ್ಬರೂ ಬೇರೆ ಬೇರೆ ಸ್ಥಳಗಳಿಗೆ ಹೊರಟುಹೋದರು.

---

## ಒಂಬತ್ತನೆಯ ಪರಿಚ್ಛೇದ.

ಮಹಡಿಯಮೇಲೆ ಮಾಧವನೂ ಭಾಸ್ಕರನೂ ಮಲಗಿದ್ದ ಕೊಠಡಿಯ ಮಗ್ಗುಲ ಕೊಠಡಿಯಲ್ಲಿ ವಿಠಲನು ಮಲುಗುವುದಕ್ಕೆ ಹೋದನು. ಮಾಧವ ಭಾಸ್ಕರರು ಬಹಳಹೊತ್ತು ಪಿಸುಮಾತಾಡುತ್ತ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಸುಳಿದಾಡುತ್ತಿದ್ದರು. ಆದರೆ ಅವರೇನು ಮಾಡುತ್ತಿದ್ದರೆಂಬುದು ವಿಠಲನಿಗೆ ಗೊತ್ತಾಗಲಿಲ್ಲ. ಬಳಿಕ ಅವರು ಥಟ್ಟನೆ ಮಾತು ನಿಲ್ಲಿಸಿ ದೀಪವನ್ನು ತುಂಬಲು ಅವರಿಗೆ ನಿದ್ದೆಹತ್ತಿ

ತೆಂದು ವಿಠಲನು ಭಾವಿಸಿ ತನ್ನ ಕೊಠಡಿಯ ಬಾಗಿಲನ್ನು ಭದ್ರವಾಗಿ ಹಾಕಿಕೊಂಡು ನಿಶ್ಚಿಂತೆಯಾಗಿ ಮಲಗಿದನು. ಗಾಢನಿದ್ರೆಯು ಬಂದಿತು.

ತನ್ನ ದುಡ್ಡು ಹೋದುದಕ್ಕಾಗಿ ತುಂಬ ಸಂಕಟಪಡುತ್ತ ಮಾಧವನು ಭಾಸ್ಕರನನ್ನು ಕುರಿತು ರಹಸ್ಯವಾಗಿ—ನಾವು ಇನ್ನು ಈ ಮುದಿಗೂಬೆಯನ್ನು ತೊಲಗಿಸಿಬಿಡಬೇಕಪ್ಪ. ಇವನು ಯಾರೆಂಬುದನ್ನು ನೀನು ಬಲ್ಲೆಯೋ ? ನನಗೇನೋ ಸಂಶಯವಾಗುತ್ತಿದೆ.

ಭಾಸ್ಕರ—ಇವನುವಾರಣನ ಸೋದರಮಾವನೆಂಬುದು ನಿನಗೆ ಗೊತ್ತಿಲ್ಲವೇ?

ಮಾಧವ—ಅವನೆಂತಹ ಸೋದರಮಾವನೋ ಏನೋ !

ಭಾಸ್ಕರ—ವಾರಣನಿಗೇನಾದರೂ ನಮ್ಮ ಮೇಲೆ ಸಂಶಯ ಹುಟ್ಟಿಯಾರಾದರೊಬ್ಬ ಪತ್ತೇದಾರನನ್ನು ಅವನು ಕರೆತಂದಿರಬಹುದೆ ?

ಮಾಧವ—ಇಲ್ಲ, ಅವನು ನಮ್ಮ ವಿಷಯದಲ್ಲಿ ಅನುಮಾನಪಡುತ್ತಾನೆಂಬುದನ್ನು ನಾನು ನಂಬಲಾರೆ. ಅವನು ನಮ್ಮ ತಿಲಮೆಯ ಕೈಗೆ ಬಿದ್ದಾಗಲೇ ನಮ್ಮ ಬಲೆಗೂ ಸಿಕ್ಕಿದನು. ಅವನನ್ನು ಅವಳ ಭಾಗಕ್ಕೆ ಬಿಟ್ಟುಬಿಡೋಣ ಅವಳು ಎಲ್ಲವನ್ನೂ ಸರಿಮಾಡುತ್ತಾಳೆ.

ಭಾಸ್ಕರ—ಹಾಗಾದರೆ ಈ ಮುದುಕನೊಬ್ಬ ಪತ್ತೇದಾರನಾಗಿದ್ದು ತಾನಾಗಿತಾನೇ ಏನಾದರೂ ಇಲ್ಲಿಗೆ ಬಂದಿರಬಹುದೆ ?

ಮಾಧವ—ಇದುವರೆಗೂ ನಾನು ಹಾಗೆ ಭಾವಿಸಿರಲಿಲ್ಲ. ಒಳ್ಳೇದು. ಒಂದುವೇಳೆ ಇವನು ಯಜಮಾನವಿಠಲನೇ ಆಗಿರಬಹುದೆ ?

ಭಾಸ್ಕರ—ಅವನನ್ನು ನಾವಿಬ್ಬರೂ ನೋಡಿಲ್ಲ. ಹೇಗೆ ತಿಳಿಯೋಣ ?

ಇಬ್ಬರೂ ಸುಮ್ಮನಾದರು. ಮತ್ತೆ ದೀಪವನ್ನು ಹೊತ್ತಿಸಿದನು. ಮಾಧವನು ಗಾಬರಿಗೊಂಡನು. ಮುಖವು ಜೋಲುಬಿದ್ದಿತು. ಭಾಸ್ಕರನ ಮುಖಕ್ಕೆ ಮಸೀಬಳಿದಂತಾಯಿತು.

ಮಾಧವ—ಮಗು, ಅವನು ಪತ್ತೇದಾರನೇ ಆಗಲಿ ಅಥವಾ ಮತ್ತೊಬ್ಬನೇ ಆಗಲಿ ಅಂತು ನಾವು ಅವನನ್ನು ಬಲೀಹಾಕಿಬಿಡಬೇಕು. ಹೇಗಾದರೂ ನಾವು ಮಾಡಬೇಕಾದುದನ್ನು ಸರಿಯಾಗಿ ಮಾಡಿ ಎಚ್ಚರಿಕೆಯಿಂದಿರುವುದುತ್ತಮ.

ಭಾಸ್ಕರ—ಹೇಗೆ ಮಾಡಬೇಕು ?

ಮಾಧವ—ಮೊದಲು ದೀಪವನ್ನು ತೆಗೆ, ಆಮೇಲೆ ನೋಡೋಣ.

ಭಾಸ್ಕರನು ದೀಪವನ್ನು ನೊಂದಿಸಿದನು. ಮಾಧವನು ಕತ್ತಲಲ್ಲೇ ಹಾಲಿನೊಳಕ್ಕೆ ಬಂದು ವಿಠಲನ ಕೊಠಡಿಯ ಬಾಗಿಲಲ್ಲಿ ನಿಂತನು. ವಿಠಲನಿಗೆ ಗಾಢನಿದ್ದೆ. ಮತ್ತು ಆ ಕಿರುಮನೆಯಲ್ಲಿದ್ದ ದೀಪವೂ ಆರಿಹೋಗಿದ್ದಿತು. ಇದನ್ನೆಲ್ಲಾ ನೋಡಿಕೊಂಡು ಭಾಸ್ಕರನ ಬಳಿಗೆ ಬಂದು ಕಿವಿಮಾತಿನಿಂದ—ಈ ಮುದಿಗೂಬೆಗೆ ಚೆನ್ನಾಗಿ ನಿದ್ದೆ ಹತ್ತಿದಂತಿದೆ.—ಎಂದು ಹೇಳಿ ಮಾಧವನು ತನ್ನ ಜೇಬಿನಲ್ಲಿದ್ದ ಒಂದು ರಬ್ಬರು ಕೊಳವೆಯನ್ನು ಕಿಟಕಿಯ ಕಡೆ ಹಿಡಿದು ಬೆಳುದಿಂಗಳಲ್ಲಿ ಚೆನ್ನಾಗಿ ಪರೀಕ್ಷಿಸಿದನು. ಶಾಂತವಾದ ಆ ರಾತ್ರಿಯಲ್ಲಿ ಸೌಮ್ಯವಾದ ಚಂದ್ರಪ್ರಭೆಯಲ್ಲಿ ಅವನ ಮೋರೆಯು ಅವನು ಯಾವ ಘೋರಕೃತ್ಯಕ್ಕೂ ಹೇಸದ ಪಾಪಿಯೆಂಬುದನ್ನು ವ್ಯಕ್ತಗೊಳಿಸುತ್ತಿದ್ದಿತು.

ಭಾಸ್ಕರ—ಇದರಿಂದೇನು ಮಾಡಬಲ್ಲೆ ?

ಮಾಧವ—ಇಗೊ ! ಈ ಯಂತ್ರದೀಪದ ಲ್ಯಾಂಪನ್ನು ಉರಿಸಲು ತಂದಿರುವ ಈ ಡಬ್ಬದಲ್ಲಿನ ಇಂಗಾಲಾಮ್ಲ (Carbonic acid gas) ವಾಯುವನ್ನು ಈ ಕೊಳವೆಯ ಮಾರ್ಗವಾಗಿ ಅವನ ಕೊಠಡಿಯ ಬಾಗಿಲಲ್ಲಿರುವ ಬೀಗದ ಕೈರಂಧ್ರದ ಮೂಲಕ ಒಳಕ್ಕೆ ಬಿಡುತ್ತೇನೆ. ಅದು ತಾರಸಿಯ ಪುಟ್ಟ ಕೊಠಡಿ. ಈ ವಿಷವಾಯುವಿನಿಂದ ಅವನು ಸುಲಭವಾಗಿ ಪ್ರಾಣಬಿಡುತ್ತಾನೆ.

ಭಾಸ್ಕರ—ಓಹೋ ! ಸರಿ. ಒಳ್ಳೆಯದು. ಅವನನ್ನು ಕೊಲ್ಲುವಷ್ಟು ವಿಷವಾಯು ಆ ಕೊಠಡಿಯಲ್ಲಿ ನಿಲ್ಲುವುದೆ ? ಒಂದುವೇಳೆ ಅಲ್ಲಿನ ಕಿಟಕಿಯ ಬಾಗಿಲನ್ನು ತೆರೆದಿದ್ದರೋ ?

ಮಾಧವ—ಇಲ್ಲ, ಕಿಟಕಿಯು ಬಾಗಿಲು ಹಾಕಿದೆ.

ಭಾಸ್ಕರ—ಥಟ್ಟನೆ ಎಚ್ಚರವಾಗಿ ಅವನು ಸಂಕಟದಿಂದ ಕೂಗಿಕೊಂಡರೋ ?

ಮಾಧವ—ಆಗ ಮೇಲೆಬಿದ್ದು ಗುದ್ದಿ ಉರುಳಿಸೋಣ.

ಈ ಕೆಲಸವು ನೀಚತಮವೆಂಬುದನ್ನು ನಾವು ಹೇಳಬೇಕಾದುದೇ ಇಲ್ಲ. ಮಾಧವನು ತನ್ನ ದುರುದ್ಯೋಗಕ್ಕೆ ತೊಡಗಿದನು. ಒಳಗೆ ಸುಖನಿದ್ರೆಯ ನಿಶ್ವಾಸೋಚ್ಛ್ವಾಸಗಳು ನಿರಾತಂಕವಾಗಿ ನಡೆಯುತ್ತಿದ್ದುದನ್ನು ನೋಡಿ ಅವನು ನಗುತ್ತಿದ್ದನು. ವಿಷವಾಯುವು ಕ್ರಮಕ್ರಮವಾಗಿ ಆ ಕೊಠಡಿಯನ್ನೆಲ್ಲ ಆವರಿಸುತ್ತ ಬಂದಿತು. ವಿಠಲನೇನಾದರೂ ಎಚ್ಚರವಾಗದಿದ್ದರೆ ಅವನಿಗೆ ದೀರ್ಘನಿದ್ರೆಯೇ ಉಂಟಾಗುತಿದ್ದಿತು. ಬಳಿಕ ಮಾಧವನು ಬೆಕ್ಕಿನಂತೆ ನಿಶ್ಶಬ್ದ ವಾಗಿ ನಡೆದು ತನ್ನ ಕೊಠಡಿಗೆ ಹೋಗಿ ಭಾಸ್ಕರನಂ ಕುರಿತು ಪಿಸುಮಾತಿನಲ್ಲಿ— ಬಾಚಿ, ಆ ಮುದಿಮೃಗವು, ಇನ್ನೇನು, ಶೀಘ್ರದಲ್ಲೇ ಪರಲೋಕಪ್ರಯಾಣ ಮಾಡುವುದು.

ಭಾಸ್ಕರ—ಓಹೋ ! ಅದೇನು ಸದ್ದು ! ಎನ್ನುತ್ತ ಮಾಧವನನ್ನು ರೆಟ್ಟೆ ಹಿಡಿ ದೆಳೆದನು.

ವಿಠಲನ ಕೊಠಡಿಯಲ್ಲುಂಟಾದ ಸದ್ದಿನಿಂದ ಇವರ ಗುಂಡಿಗೆಯೊಡೆಯಿತು. ವಿಠಲನು ಎಚ್ಚತ್ತದ್ದು, ಎದ್ದು ಕುಳಿತದ್ದು, ಉಸಿರುಕಟ್ಟಿಕೊಂಡುದು, ಕಡೆಗೆ ಅವನು ಎದ್ದು ತಡಕಿನೋಡುತ್ತ ಬಾಗಿಲಕಡೆಗೆ ಬರುತಿದ್ದುದು, ಇಷ್ಟನ್ನೂ ಈ ಕೊಲೆಪಾತಕರು ತಿಳಿದರು.

ಇನ್ನು ಸ್ವಲ್ಪವೂ ತಡಮಾಡಕೂಡದು. ಹಾಗೆ ತಡವಾದರೆ ಇವರ ಕೃತ್ರಿ ಮವು ಪ್ರಕಟಗೊಳ್ಳುವುದು. ಆದುದರಿಂದ ಅಕ್ಷಣವೇ ಮಾಧವನು ಹೋಗಿ ಆ ರಬ್ಬರು ಕೊಳವಿಯನ್ನು ತೆಗೆದುಬಿಟ್ಟು ಭಾಸ್ಕರನ ಕೈಗೆ ಕೊಟ್ಟು ಅದನ್ನೆಲ್ಲಾ ದರೂ ಔಚಿಡುವಂತೆ ಹೇಳಿ ತಾನು ಜೇಬಿನಲ್ಲಿದ್ದ ಕರಿಯ ಕರವಸ್ತ್ರವನ್ನು ಮುಖಕ್ಕೆ ಕಟ್ಟಿಕೊಂಡು ಗುರುತುಮರೆಸಿಕೊಂಡು ವಿಠಲನು ಮಲಗಿದ್ದ ಕೊಠ ಡಿಯ ಬಾಗಿಲ ಪಾರ್ಶ್ವದಲ್ಲಿ ನಿಂತುಕೊಂಡನು. ವಿಠಲನಿಗೆ ಉಸಿರುಕಟ್ಟಿಕೊಂ

ಡುದಲ್ಲದೆ ಎದೆಯಲ್ಲಿ ನೋವೂ ಉಂಟಾಯಿತು. ಹೇಗಾದರೂ ಕೊಠಡಿಯಿಂದ ಹೊರಕ್ಕೆ ಬಂದುಬಿಡಬೇಕೆಂದು ಆತನು ಯತ್ನಿಸಿದನು. ವಿಠಲನು ಈ ದುರವಸ್ಥೆಗೆ ಸಿಕ್ಕಿದಾಗ ವಿಷವಾಯುಪ್ರಯೋಗದಿಂದ ತನಗೆ ಹೀಗಾಗಿರುವುದೆಂದು ತಿಳಿಯ ಲಾರದಾದನು. ಕಡೆಗೆ ಹೇಗೋ ಕಷ್ಟಪಟ್ಟುಕೊಂಡು ಬಾಗಿಲನ್ನು ತೆರೆದು ಈಚೆಗೆ ಬರುವಷ್ಟರಲ್ಲಿಯೇ ಮಾಧವನು ಬಂದು ತನ್ನ ಮುಷ್ಟಿಯಿಂದ ಬಲವಾಗಿ ವಿಠಲನ ತಲೆಯನ್ನು ಕುಟ್ಟಿ ಕೆಡವಲು ಅವನು ಜ್ಞಾನತಪ್ಪಿ ನೆಲಕ್ಕೆ ಬಿದ್ದನು. ಹಾಗೆ ಬಿದ್ದವನು ಆರ್ತಧ್ವನಿಯನ್ನು ಕೂಡ ಮಾತಾಡಲಾರದೆ ಹೋದನು. ಪೆಟ್ಟು ಅಷ್ಟು ಬಲವಾಗಿದ್ದಿತು.

ಮಾಧವನು_ಭಾಸ್ಕರನನ್ನು ಕುರಿತು_ಎಲೋ ಬಾಚಿ, ಜಾಗ್ರತೆ ಮಾಡು. ಈ ಮುದುಕನ ಬಳಿ ಒಡವೆವಸ್ತು ಹಣಕಾಸು ಏನಾದರೂ ಇದ್ದರೆ ತೆಗೆದುಕೋ, ನಡೆ, ನಾವು ನಮ್ಮ ಕೊಠಡಿಯೊಳಕ್ಕೆ ಹೋಗೋಣ.

ಭಾಸ್ಕರ_ನಾವು ಇವನನ್ನು ಮುಗಿಸಿಬಿಟ್ಟು ತರುವಾಯ ಹೋಗುವುದು ಮೇಲಲ್ಲವೇ ?

ಮಾಧವ_ಛಿಃ ಹುಚ್ಚ! ಪೋಲೀಸಿನವರೇನಾದರೂ ಒಂದುವೇಳೆ ನಮ್ಮನ್ನು ವಿಚಾರಣೆಗೆ ಗುರಿಮಾಡಿದರೂ ನಾವೇನೂ ಅರಿಯದವರೆಂದು ನಮ್ಮ ಕೊಠಡಿಯಿಂದ ಹೊರಕ್ಕೆ ಬಂದವರೇ ಅಲ್ಲವೆಂದೂ ಧೈರ್ಯವಾಗಿ ವಾದಿಸಬಹುದು.

ಭಾಸ್ಕರ_ಒಂದು ಬೆಂಕೀಕಡ್ಡಿಯನ್ನು ಗೀಚಿ ಈ ಮುದುಕನ ಅವಸ್ಥೆಯೇನಾಗಿದೆಯೋ ನೋಡೋಣವೆ ?

ಮಾಧವ_ಬೇಡ, ಬೇಡ, ಅದು ಕೇವಲ ಅಪಾಯಕರ.

ಭಾಸ್ಕರ_ಹಾಗಾದರೆ ಈ ಬೆಳುದಿಂಗಳ ಬೆಳಕೇ ಸಾಕು.

ಮಾಧವನು ವಿಠಲನು ಮಲಗಿದ್ದ ಕೊಠಡಿಗೆ ಹೋಗಿ ಅವನ ಉಡುಪುಗಳನ್ನೆಲ್ಲಾ ನೋಡಿ ಅವನ ಜೇಬಿನಲ್ಲಿದ್ದ ಅಲ್ಪಸ್ವಲ್ಪ ದ್ರವ್ಯವನ್ನೂ ಒಡವೆಗಳನ್ನೂ ಅಪಹರಿಸಿಕೊಂಡು ಹೊರಕ್ಕೆ ಬಂದನು. ಆದರೆ ಅಲ್ಲಿ ಕಾಗದ ಪತ್ರಗಳೇನೂ ಇರಲಿಲ್ಲವಾಗಿ ಅವನು ವಿಠಲಮೂರ್ತಿಯೆಂದು ನಂಬಲು ಮಾಧವ ಭಾಸ್ಕರರಿಗೆ ತಕ್ಕ

ಸಾಧನಗಳೇನೂ ಸಿಕ್ಕಲಿಲ್ಲ. ಮಾಧವನು ತಂದುದನ್ನೆಲ್ಲ ಭಾಸ್ಕರನ ಕೈಗೆ ಕೊಟ್ಟು ತಾನು ಕೆಳಕ್ಕಿಳಿದು ಹೋಗಿ ಮನೆಯ ತಲೆಬಾಗಿಲನ್ನೂ ಹೆಬ್ಬಾಗಿಲನ್ನೂ (Gate) ತೆರೆದುಹಾಕಿ ಪುನಃ ಮೇಲಕ್ಕೆ ಭಾಸ್ಕರನ ಬಳಿಗೆ ಬಂದನು. ಆ ಮನೆಗೆ ಯಾರೋ ಕಳ್ಳರು ನುಗ್ಗಿದ್ದರೆಂದು ಎಲ್ಲರೂ ತಿಳಿದುಕೊಳ್ಳಲಿ ಎಂಬುದೇ ಇವರ ಉದ್ದೇಶ. ಮತ್ತೆ ಒಂದು ಕ್ಷಣದಲ್ಲೇ ಈ ಪಾತಕಿಯು ಆ ಕತ್ತಲೆಯಲ್ಲಿ ವಿಠಲನ ಎದೆಯನ್ನು ಮುಟ್ಟಿ ಪ್ರಾಣನಾಡಿಯಾಡುವುದೋ ಇಲ್ಲವೋ ಎಂದು ಪರೀಕ್ಷಿಸಿದನು. ಅವನು ಸಾಯಲಿಲ್ಲವೆಂದು ದೃಢಪಟ್ಟಬಳಿಕ ಇದ್ದುದರಲ್ಲಿ ಸ್ವಲ್ಪ ಧೈರ್ಯವನ್ನು ತಾಳಿ ತಮ್ಮ ಕೊಠಡಿಗೆ ಹೋಗಿ ಆ ಒಡವೆವಸ್ತು ಹಣಕಾಸು ಇವನ್ನು ಬೈಟಿಟ್ಟು ಭದ್ರಪಡಿಸುವುದರಲ್ಲಿ ಭಾಸ್ಕರನಿಗೆ ಸಹಾಯಕನಾದನು. ಅವನ್ನೂ ರಬ್ಬರು ಕೊಳವೆಯನ್ನೂ ಸಹ ಒಂದು ಗಂಟಾಗಿ ಕಟ್ಟಿ ಆ ಗಂಟಿಗೆ ಉದ್ದವಾದೊಂದು ದಾರವನ್ನು ಬಿಗಿದು, ಮೇಲಿಂದ ಕೆಳಮುಖವಾಗಿಡಲ್ಪಟ್ಟಿದ್ದು ಒಡೆದುಹೋಗಿದ್ದ ಒಂದು ತವರದ (Tin) ದೋಣಿಯೊಳಕ್ಕೆ ಒಂದೆರಡುಮಾರು ಗಳದೂರ ಆ ಗಂಟನ್ನಿಳಿಯಬಿಟ್ಟು ಆ ದಾರವನ್ನು ಕೊಠಡಿಯ ಗೋಡೆಯ ಒಂದು ಮೊಳೆಗೆ ಕಟ್ಟಿದರು. ಆ ಇಬ್ಬರೂ ಇಷ್ಟುಮಾಡುವಾಗ್ಗೆ ಮಹಡಿಯ ಕೆಳಗೆ ಗದ್ದಲವು ಅತಿಯಾಯಿತು. ಅನಂತರ ಅವರು ಬಾಗಿಲುಹಾಕಿಕೊಂಡು ಮಲಗಿ ಹೊರಗೇನೇನಾಗುವುದೆಂಬುದನ್ನು ಸಾವಧಾನವಾಗಿ ಆಲಿಸುತ್ತಿದ್ದರು.

ಆ ಬೀದಿಯಲ್ಲಿ ಗಸ್ತು ತಿರುಗುತ್ತಿದ್ದ ಪೋಲೀಸಿನವನು ಈ ಬಂಗಲೆಯ ಬಾಗಿಲು ಅವೇಳೆಯಲ್ಲಿ ತೆರೆಯಲ್ಪಟ್ಟಿದ್ದುದನ್ನು ಕಂಡು ಇಲ್ಲೇನೋ ಕಳುವಾಗಿರಬಹುದೆಂದೂಹಿಸಿ ಬಾಗಿಲಲ್ಲಿ ಬಂದು ನಿಂತು ಬಲವಾಗಿ ಕೂಗಿದನು. ವಾರಣಲಾಲನು ಬೆಚ್ಚಿ ಬೆದರಿ ಬೇಗ ಬೀದಿಗೆ ಓಡಿಬಂದನು. ತರುವಾಯ ಆ ಮನೆಯನ್ನು ಒಂದು ಕಡೆಯಿಂದ ಪರೀಕ್ಷಿಸುತ್ತ ಬರಲು ಮಹಡಿಯಮೇಲೆ ಮುದುಕನ ಮಾಲು ಕಳುವು ನಡೆದಿರುವಂತೆ ಗೊತ್ತಾಯಿತು. ಪಕ್ಕದ ಕೊಠಡಿಯನ್ನು ನೋಡಲು ಅದರೊಳಗೆ ಜನರಿದ್ದದ್ದು ಒಳಗಿನ ಅಗಳಿಯನ್ನು ಹಾಕಿದ್ದುದರಿಂದ ಊಹಿಸಬಹುದಾಯಿತು. ಪೋಲೀಸ್ ಅಧಿಕಾರಿಯು ತನ್ನ ಕೈಲಾಂದ್ರವನ್ನು ಆ ಯಜಮಾನನಕಡೆಗೆ ಹಿಡಿದು ನೋಡಿ–ಓಹೋ! ಈ ಮನೆಯಲ್ಲಿ ಕಳುವು ಮಾತ್ರವಲ್ಲ, ಕೊಲೆಯೂ ನಡೆದಂತೆ ತೋರುತ್ತಿದೆ, ಎನ್ನುತ್ತಾ ವಾರಣನ ಕಡೆ

ತಿರುಗಿ—ಅಯ್ಯ, ಈ ಮನುಷ್ಯ ಯಾರು ನಿನಗೆ ಗೊತ್ತುಂಟೆ ?—ಎಂದು ರಹಸ್ಯವಾಗಿ ಕೇಳಿದನು. ಈಗ ವಾರಣನಿಗೆ ದಿಕ್ಕು ತೋರದಂತಾಯಿತು.

ಪೋಲೀಸ್‌ನವನು—ಅಯ್ಯ, ಇವನು ಪ್ರಸಿದ್ಧ ಪತ್ತೇದಾರನಾದ ವಿಠಲ ಮೂರ್ತಿ.

ವಾರಣ—ಅಯ್ಯ, ಆ ಹೆಸರನ್ನು ಹೇಳಬೇಡ, ದಯವಿಟ್ಟು ಕ್ಷಮಿಸು, ಎಂದು ಪಿಸುಮಾತಿನಲ್ಲಿ ಹೇಳಿ ಬಳಿಕ ಗಟ್ಟಿಯಾಗಿ—ಅಯ್ಯೋ ! ನಮ್ಮ ಸೋದರ ಮಾವನಿಗೆ ಈಗತಿಯಾಯಿತಲ್ಲಾ ! ಕೆಳಕ್ಕಾದರೂ ಹಿಡಿಯೋಣ ! ಎಂದನು. ವಾರಣನೂ ಪೋಲೀಸಿನವನೂ ಯಜಮಾನನನ್ನು ಕೆಳಕ್ಕೆ ಒಯ್ದರು. ಒಂದು ಕಿರುಮನೆಯಲ್ಲಿ ಮಲಗಿಸಿ ಉಪಚರಿಸಲು ಆತನಿಗೆ ಸ್ವಲ್ಪಮಟ್ಟಿಗೆ ಜ್ಞಾನ ಬಂದಿತು. ವಾರಣನು ಮುದುಕನ ಸಂಗಡ ಕಿವಿಯಲ್ಲೇನನ್ನೋ ಹೇಳಿದನಲ್ಲದೆ ತನ್ನ ಅನುಮಾನವನ್ನೂ ತಿಳಿಯಿಸಿದನು.

ಅದಕ್ಕಾತನು—ಅಯ್ಯ, ಈ ಕೆಲಸವನ್ನು ಯಾರು ನಡೆಯಿಸಿದರೆಂಬುದನ್ನು ನಾನು ಬಲ್ಲೆ. ಆದರೂ ನಾವೇನೋ ಸಭ್ಯತೆಯನ್ನೇ ಅವಲಂಬಿಸೋಣ. ಯಾರೋ ಹೊರಗಿನವರೇ ಬಂದು ನನ್ನನ್ನು ಹೊಡೆದು ಹಿಂಸಿಸಿ ದರೋಡೆಮಾಡಿಕೊಂಡು ಹೋದರೆಂದು ತಿಳಿದುಕೊಂಡಿರುವಂತೆಯೇ ನಟಿಸೋಣ. ಅಯ್ಯ, ಪೋಲೀಸ್ ಅಧಿಕಾರಿಯೆ, ನೀನು ಹೋಗಿ ನನ್ನ ಕೊಠಡಿಯ ಮಗ್ಗಲು ಕೊಠಡಿಯಲ್ಲಿ ಮಲಗಿರುವವರನ್ನು ಎಬ್ಬಿಸಿ ಅವರಿಗೇನಾದರೂ ಸದ್ದು ಕೇಳಿಸಿತೋ ಇಲ್ಲವೋ ತಿಳಿದುಕೊಂಡುಬಾ. ಆದರೆ ನಿನಗೆ ಅವರ ಮೇಲೆ ಅನುಮಾನ (ಗುಮಾನಿ) ವಿರುವುದಾಗಿ ತೋರ್ಪಡಿಸಬೇಡ.

ವಾರಣಪಾಲನು ಈ ಪತ್ತೇದಾರನ ಛದ್ಮವೇಷವು ಪತ್ತೆಯಾಗದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತಿದ್ದು ಒಳಕ್ಕೆಹೋಗಿ ಸೌದಾಮಿನಿತಿಲಮೆಯರನ್ನೆಬ್ಬಿಸಿ ಈ ದರೋಡೆಯ ವಿಷಯವನ್ನು ತಿಳಿಸಿದನು. ಈ ಕೃತ್ಯವು ಯಾರಿಂದ ನಡೆಯಿತೆಂಬುದು ಅವರಿಗೂ ಗೊತ್ತೇಇದ್ದರೂ ತೋರ್ಪಡಿಸದೆ ಮಾವಯ್ಯನಿಗೆ ಇಂತಹ ಕ್ರೂರಕೃತ್ಯ ನಡೆಯಿತಲ್ಲಾ ಎಂದು ಬಹು ದುಃಖವನ್ನು ನಟಿಸಿದರು

ಆ ಪೋಲೀಸ್ ಅಧಿಕಾರಿಯು ಮಹಡಿಯಮೇಲಿನ ಕೊಠಡಿಯಬಳಿಗೆ ಹೋಗಿ ಎಷ್ಟೋ ಹೊತ್ತು ಕೂಗಿದಮೇಲೆ ಮಾಧವನು ಕದವನ್ನು ತೆರೆದು ಹೊರಕ್ಕೆ ತಲೆಯಿಟ್ಟು ನೋಡಿ ದೂತ ದರ್ಶನವಾಗಲು–ಅದೇನಪ್ಪಾ ವಿಷಯ ? ಎಂದು ಕಣ್ಣನ್ನು ಹೊಸಗಿಕೊಳ್ಳುತ್ತ ಕೇಳಿದನು.

ಪೋಲೀಸ್–ವಾರಣಲಾಲನ ಸೋದರಮಾವನಾದ ಕಳಿಂಗದೇಶದ ವಾಗೀಶನನ್ನು ಯಾರೋ ಸಾಯುವಮಟ್ಟಿಗೂ ಹೊಡೆದುಬಿಟ್ಟು ಅವನ ಸ್ವತ್ತನ್ನೆಲ್ಲ ದೋಚಿಕೊಂಡು ಹೋಗಿದಾರಲ್ಲಾ! ಏನು ! ನಿಮಗೆ ಸದ್ದೂ ಕೇಳಿಸಲಿಲ್ಲವೆ ?

ಮಾಧವ–ಅಯ್ಯೋ ದೇವರೇ! ನಮಗೇನೂ ತಿಳಿಯದು. ಎಲೋ ಭಾಸ್ಕರ, ನಮ್ಮ ವಾಗೀಶನನ್ನು ಯಾರೋ ಹೊಡೆದು ಕೊಳ್ಳೆಮಾಡಿಕೊಂಡು ಹೋದರಂತಲ್ಲೊ! ಕೇಳಿದೆಯಾ ?

ಈ ಮಾತನ್ನು ಕೇಳಿ ಭಾಸ್ಕರನು ವಿಸ್ಮಯವನ್ನು ಅಭಿನಯಿಸಿದನು. ಪೋಲೀಸ್ ಅಧಿಕಾರಿಯು ಪುನಃ ಕೆಳಕ್ಕಿಳಿದು ಹೋಗಿ ನೋಡಲು ಅಲ್ಲಿ ಮುದುಕನಹತ್ತಿರ ಆ ಇಬ್ಬರು ಸ್ತ್ರೀಯರು ಕುಳಿತು ಉಪಚರಿಸುತ್ತಿದ್ದರು. ವಾರಣನು ರಹಸ್ಯವಾಗಿ–ಅಯ್ಯ, ಪೋಲೀಸ್ ಆಫೀಸರ್, ಈ ವಿಷಯವನ್ನು ನೀನು ನಿಮ್ಮ ಇಲಾಖೆಯವರಿಗೆ ರಿಪೋರ್ಟ್ ಮಾಡಬೇಕಾದುದಿಲ್ಲವೆಂದು ವಿಠಲನ ಅಪ್ಪಣೆ, ಎನ್ನಲು ಅದಕ್ಕವನು ಒಪ್ಪಿಕೊಂಡನು.

ತರುವಾಯ ವಿಠಲನು–ಬಹಿರಂಗವಾಗಿ–ಅಯ್ಯ, ಆಫೀಸರ್, ನೀನು ಈ ಮೊಕದ್ದಮೆಯನ್ನು ಈಕ್ಷಣ ರಿಪೋರ್ಟು ಮಾಡುವುದಲ್ಲದೆ ಇದರ ಪತ್ತೆಗಾಗಿ ಸಾಧ್ಯವಾದಮಟ್ಟಿಗೂ ಶಕ್ತರಾದ ಪತ್ತೇದಾರರನ್ನು ನೇಮಿಸುವಂತೆ ನೋಡಿಕೊ.

ಪೋಲೀಸ್–ಯಜಮಾನ ವಿಠಲಮೂರ್ತಿಯನ್ನೇ ಏತಕ್ಕೆ ನೇಮಿಸಬಾರದು ?

ವಿಠಲ–ಅವನು ಯಾರು ?

ಪೋಲೀಸ್–ಇದೇನು ! ಹೀಗೆನ್ನುವೆ ? ಆತನು ಜಗತ್ಪ್ರಸಿದ್ಧನಾದ ಪತ್ತೇದಾರ (Famous detective) ನಲ್ಲವೆ ?

ವಿಠಲ_ಓಹೋ ! ಹಾಗಾದರೆ ಆತನಿಗೇ ಹೇಳಿಕಳುಹಿಸಬೇಕು.

ಪೋಲೀಸ್ ಆಫೀಸರು ಹೊರಟುಹೋದರು. ಮಾಧವನೂ ಭಾಸ್ಕರನೂ ಕೆಳಕ್ಕಿಳಿದು ಬಂದು ಮರೆಯಲ್ಲಿನಿಂತು ಈ ಸಂಭಾಷಣೆಯನ್ನು ಕೇಳಿದರು.

ಮಾಧವ_ಸದ್ಯಕ್ಕೆ ನಮಗೇನೂ ಅಪಾಯವಿಲ್ಲ. ಯಜಮಾನ ವಿಠಲನೆಂಬ ಪತ್ತೇದಾರನಿಗೆ ಹೇಳಿ ಕಳುಹಿಸುವುದಕ್ಕಿಂತ ಮೊದಲೇ ನಾವು ಪಲಾಯನ ಸೂಕ್ತ ಪಾರಾಯಣಮಾಡಿಬಿಡೋಣ.

ಭಾಸ್ಕರ_ಹೌದು, ಆ ಯಮದೂತರ ಕಡೆಯವರು ಬರುವುದಕ್ಕಿಂತ ಮೊದಲೇ ಕಾಲಿಗೆ ಬುದ್ಧೀ ಹೇಳಬೇಕು.

ಮಾಧವ_ಸದ್ಯಕ್ಕೆ ಇವನೇನೂ ಆದಿವಿಠಲನಲ್ಲ, ಅಥವಾ ಮತ್ತೆ ಯಾವ ಪತ್ತೆದಾರನೂ ಅಲ್ಲ, ಅದು ಖಂಡಿತ. ಆ ಒಡವೆಯ ಗಂಟಿಗೇನು ಗತಿ ?

ಭಾಸ್ಕರ_ಅದು ಇದ್ದಕಡೆಯೇ ಇರಲಿ, ಆ ಸ್ಥಳವನ್ನು ಸೌದಾಮಿನಿಯೊಬ್ಬಳಿಗೆ ತಿಳಿಸೋಣ. ಬಳಿಕ ನಾವು ಬೇಕಾದಾಗ ಅದನ್ನು ತೆಗೆದುಕೊಳ್ಳಬಹುದು.

ಬೆಳಗಾಯಿತು. ಪತಂಗಪುಂಜವು ಪತಂಗನಿಗೆ ಸುಖಾಗಮನವನ್ನು ಬಯಸಿತು. ಮಂದಾನಿಲಯವು ಅಂದವಾದ ಪುಷ್ಪಗಳ ಮಕರಂದದ ಸುವಾಸನೆಯನ್ನು ತಂದು ಎಲ್ಲರಿಗೂ ನಜರೊಪ್ಪಿಸುತ ಬಂದಿತು. ವಿಠಲನಿಗೆ ಎದ್ದು ಓಡಾಡುವ ಮಟ್ಟಿಗೆ ಸ್ವಲ್ಪ ಚೈತನ್ಯ ಬಂದಿತು. ಪ್ರಾತಸ್ಸಂಧ್ಯಾಕಾರ್ಯವು ಉಪ್ಪಿಟ್ಟು ಕಾಫಿ ಮುಂತಾದುವುಗಳ ವಿನಿಯೋಗರೂಪದಲ್ಲಿ ಮಾತ್ರ ಯಥಾಶಕ್ತಿ ನಿರಾತಂಕವಾಗಿ ನಡೆಯಿಸಲ್ಪಟ್ಟಿತು. ಈ ಇಬ್ಬರು ಧೂರ್ತರೂ ಬೆಳಕು ಹರಿಯುತ್ತಿರುವಾಗಲೇ ಎಲ್ಲಿಗೋ ಹೊರಟುಹೋದರು. ಇಷ್ಟೆಲ್ಲಾ ಆದ ನಂತರ ವಿಠಲನು ಹೊರಕ್ಕೆ ಹೊರಡಲುಜ್ಜುಗಿಸಿ ಸೌದಾಮಿನಿಯನ್ನು ಹತ್ತಿರಕ್ಕೆ ಕರೆದು_ಎಲೌ ಪ್ರಫುಲ್ಲೆ, ನಾನು ಪತ್ತೇದಾರನಾದ ಯಜಮಾನ ಆದಿವಿಠಲಮೂರ್ತಿಗೆ ಹೇಳಿ ಕಳುಹಿಸಿ ಈ ಕೇಸಿನ ಪತ್ತೆಗೆ ಪ್ರಯತ್ನಮಾಡುವುದಕ್ಕೆ ಹೋಗಿಬರುತ್ತೇನೆ.

ಸೌದಾಮಿನಿ ಚಮಕಿತಳಾಗಿ_ಅವನನ್ನು ಗೊತ್ತುಮಾಡುವೆಯಾ ? ಸರಿ, ಯಾರಿಂದ ಈ ಕೃತ್ಯ ನಡೆಯಿತೆಂಬುದನ್ನು ಆತನು ಪತ್ತೆಮಾಡಬಲ್ಲನೆಂದು ನನಗೆ ತೋರುವುದು.

ವಿಠಲ_ಆದುದರಿಂದಲೇ ನಾನೂ ಹಾಗೆ ಯೋಚಿಸುತಿದೇನೆ.

ಸೌದಾಮಿನಿ_ಒಳ್ಳೆಯದು, ಮಾವಯ್ಯ, ನೀನು ಎಷ್ಟು ಹೊತ್ತಿಗೆ ಬರುತ್ತೀಯು ?

ವಿಠಲ_ಹೊತ್ತಿಗೆ ಮುಂಚೆಯೇ ಬರುವೆನೋ ಅಥವಾ ತಡವಾಗಿ ಬರುವೆನೋ ಹೇಗೆ ಹೇಳಲಿಯಮ್ಮ ?

ವಿಠಲನು ಪೇಟೆಯಕಡೆ ಹೋಗಿ ಕೆಲವು ಕೆಲಸಕಾರ್ಯಗಳನ್ನು ತೀರಿಸಿಕೊಂಡು ಸ್ವಲ್ಪ ಹೊತ್ತಿನ ಮೇಲೆ ತನ್ನ ಕೃತಕವೇಷವನ್ನೆಲ್ಲಾ ತೆಗೆದುಹಾಕಿ ನಿಜವಾದ ಪತ್ತೇದಾರನಾಗಿ ಪುನಃ ಸೌದಾಮಿನಿಯ ಮನೆಗೆ ಬಂದನು.

ಸೌದಾಮಿನಿಯು ಗಾಬರಿಗೊಂಡು ಅವನ ಸಂಗಡ_ವಿಠಲಮೂರ್ತಿ, ನೀನು ದಯಮಾಡಿದುದು ಬಲು ಸಂತೋಷ. ನಿನ್ನಿಂದ ಒಂದು ವಿಷಯವನು ತಿಳಿಯಬೇಕಾಗಿದೆ.

ವಿಠಲ_ನಾನೇನನ್ನೂ ನಿನಗೆ ಹೇಳುವುದಕ್ಕೋಸ್ಕರ ಬಂದಿಲ್ಲ. ನಿಮ್ಮ ಸೋದರಮಾವನಿಗೆ ನಡೆದ ದರೋಡೆಯ ಕೇಸನ್ನು ಪತ್ತೆಮಾಡುವುದಕ್ಕೋಸ್ಕರ ಬಂದಿದೇನೆ. ಆ ಸಂಗತಿಯನ್ನೆಲ್ಲಾ ಹೇಳು.

ಈಗ ಇವಳಿಗೆ ಬಲು ತೊಂದರೆಗಿಟ್ಟಿತು. ಆದರೂ ಇದ್ದುದರಲ್ಲಿ ಧೀರೆಯಾಗಿ ಕೆಲವಂಶಗಳನ್ನು ತಿಳಿಸಿದಳು.

ವಿಠಲ_ಮಾಧವ ಭಾಸ್ಕರ ಎಂಬುವವರು ಯಾರು ?

ಸೌದಾಮಿನಿ_ಮಾಧವ ನನ್ನ ಗೆಳತಿಯ ಗಂಡ. ಭಾಸ್ಕರನು ಪ್ರಯಾಣಿಕನಾದ ಒಬ್ಬ ಪರಸ್ಥಳಿಕ.

ವಿಠಲ—ನಿನಗೂ ಕಾಂತನಾಥನಿಗೂ ಈ ಮಾಧವನೇ ಲಗ್ನಮಾಡಿಸಿದವನೆಂದು ನೀನು ಒಂದಾನೊಂದುಸಲ ನನ್ನ ಸಂಗಡ ಹೇಳಿರಲಿಲ್ಲವೆ ?

ಈ ಸಂಗತಿಯನ್ನು ಕೇಳುತ್ತಲೇ ಸೌದಾಮಿನಿಗೆ ಮರಣಕಂಪ ಹತ್ತಿತು. ಈ ಪತ್ತೇದಾರನಿಗೆ ಎಷ್ಟು ತಿಳಿದಿರುವುದೆಂದು ತಾನು ಭಾವಿಸಿದ್ದಳೋ ಅದಕ್ಕಿಂತ ಹೆಚ್ಚಾಗಿ ಅವನಿಗೆ ಗೊತ್ತುಂಟೆಂಬುದನ್ನು ಈಗ ಅರಿತಳು. ಅವಳು ಸ್ವಲ್ಪ ಹಿಮ್ಮೆಟ್ಟಿ ಕಡೆಗೆ—ವಿಠಲ, ನೀನು ತಪ್ಪು ತಿಳಿದುಕೊಂಡಿದ್ದೀಯೆ. ನಾನು ಅವನ ಹೆಸರು ಮಾಧವನೆಂದು ಹೇಳಲಿಲ್ಲವಲ್ಲಾ ! ಅವನ ಹೆಸರು ಶ್ರೀಪತಿಮಿಶ್ರನೆಂದು ನಾನು ಹೇಳಿದುದು, ಮತ್ತು ಈಗಿನ ಕೇಸಿನ ವಿಷಯವನ್ನು ಮಾತಾಡುತ್ತಿರುವಾಗ ನನ್ನ ಸ್ವಂತ ಕೇಸಿನ ವಿಷಯವನ್ನು ಪ್ರಸ್ತಾಪಿಸಬೇಕಾದ ಅವಶ್ಯಕತೆಯೇನೂ ಇಲ್ಲ. ನನಗೆ ಬೇಕಾಗಿದ್ದುದನ್ನೆಲ್ಲ ನಾನು ತಿಳಿದುಕೊಂಡೇ ಇದೇನೆ.

ವಿಠಲ—ಓ ! ನೀನು ತಿಳಿದುಕೊಂಡಿದ್ದೀಯೋ ? ಪ್ರಫುಲ್ಲೆ, ನನಗೆ ಬೇಕಾದುದೆಲ್ಲ ನನಗಿನ್ನೂ ಗೊತ್ತಾಗಲಿಲ್ಲವಾಗಿ ಎಲ್ಲವನ್ನೂ ಕೇಳಬೇಕಾಗಿದೆ. ಆದುದರಿಂದ ಈಗಲಾದರೂ ಕಾಂತನಾಥನ ಶವದ ಗತಿಯೇನಾಯಿತೋ ಹೇಳು.

ಸೌದಾಮಿನಿ—ಓಹೋ ! ಅದೇನು ! ಧಾರಾಳವಾಗಿ ಹೇಳಬಲ್ಲೆ. ಅದು ಈಗ ವಿಶಾಲದೇಶದಲ್ಲಿದೆ. ಇನ್ನು ಸ್ವಲ್ಪ ದಿನಕ್ಕೆ ನಾನು ಅಲ್ಲಿಗೆ ಹೋಗುವೆನು. ಆಗ ನಮ್ಮತ್ತೆಯ ಮನೆಯವರಿಗೂ ನನಗೂ ಚೆನ್ನಾಗಿ ಪರಿಚಯವಾಗುವುದು.

ವಿಠಲ—ನಿನಗೆ ಅದು ದೃಢವೋ ?

ಸೌದಾಮಿನಿ—ಓಹೋ ! ಏನೂ ಶಂಕೆಯೇ ಇಲ್ಲ.

ವಿಠಲ—ಅವರು ನಿನ್ನನ್ನು ಸೊಸೆಯೆಂದು ಒಪ್ಪಿಕೊಳ್ಳುವುದಿಲ್ಲವೆಂದು ನನ್ನ ನಂಬಿಕೆ.

ಸೌದಾಮಿನಿ—ಒಳ್ಳೇದು. ನೀನು ಈ ವಿಷಯವಾಗಿ ನನ್ನನ್ನು ತೊಂದರೆಪಡಿಸಬೇಕಾದುದಿಲ್ಲ. ನೀನು ದಯವಿಟ್ಟು ನನ್ನ ಪಚ್ಚೆಯ ಪೆಟ್ಟಿಗೆಯನ್ನು ನನಗೆ ಹಿಂದಕ್ಕೆ ಕೊಟ್ಟುಬಿಟ್ಟರಾದೀತು.

ವಿಠಲ—ನಿನ್ನ ವಿವಾಹದ ಸಂಗತಿಯು ನಿಮ್ಮಣ್ಣನಿಗೆ ಗೊತ್ತುಂಟೋ?

ಸೌದಾಮಿನಿ—ಇನ್ನೂ ತಿಳಿಸಿಲ್ಲ. ಮುಂದಕ್ಕೆ ಹೇಳುವೆನು.

ವಿಠಲ—ಇನ್ನೂ ಮುಂದಕ್ಕೆ ಹೇಳುವೆಯೋ? ಎಷ್ಟು ಮೈಲಿದೂರ ಮುಂದಕ್ಕೆ? ಆಗಲಿ. ನಿನ್ನ ಲಗ್ನವಾದುದಕ್ಕೆ ಸಾಕ್ಷಿಯಾರು?

ಸೌದಾಮಿನಿ—ಶ್ರೀಪತಿಮಿಶ್ರ.

ವಿಠಲ—ಆ ದೊಡ್ಡ ಮನುಷ್ಯನನ್ನು ನೀನು ಪುನಃ ಯಾವಾಗ ಕಂಡಿದ್ದೆ!

ಸೌದಾಮಿನಿ—ಆತನು ಕೆಲವು ದಿನಗಳಿಗೆ ಮೊದಲು ಬಂದಿದ್ದನು.

ವಿಠಲ—ಪಾಲಪಾಣಿಯ ಸ್ಮಶಾನದಲ್ಲಿ ಕಲ್ಲು ಗುಂಡು ತುಂಬಿದ ಪೆಟ್ಟಿಗೆಗೆಯನ್ನು ಹೂತಿದ್ದುದಕ್ಕೇನು ಕಾರಣವಂತೆ?

ಸೌದಾಮಿನಿ—ಅದನ್ನೆಲ್ಲಾ ನಾನು ನಿನಗೆ ಹೇಳಬೇಕಾದ ಜರೂರೇನೂ ಇಲ್ಲ.

ವಿಠಲ—ಓಹೋ! ಒಳ್ಳೇದು. ನೀನು ವಿಲಕ್ಷಣಳಾದ ಸ್ತ್ರೀ. ನಾನು ಮಹಡಿಯು ಮೇಲಕ್ಕೆ ಹೋಗಿ ಈ ದರೋಡೆಕೇಸಿನ ವಿಷಯವಾಗಿ ಸ್ವಲ್ಪ ನೋಡಬೇಕಾಗಿದೆ.

ಸೌದಾಮಿನಿ—ನಾನೂ ಸಂಗಡ ಬರಬಹುದಷ್ಟೆ?

ವಿಠಲ—ನಿನಗೇನೂ ಅಷ್ಟು ತೊಂದರೆಯವಶ್ಯಕವಿಲ್ಲ.

ವಿಠಲನು ಸರ್ರನೆ ಉಪ್ಪರಿಗೆಯನ್ನೇರಿ ಮಾಧವ ಭಾಸ್ಕರರು ಮಲಗಿದ್ದ ಕೊಠಡಿಗೇ ನೇರವಾಗಿ ಹೋದನು. ಅಲ್ಲಿ ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡಲು ಕಿಟಿಕಿಯ ಹತ್ತಿರ ಗೋಡೆಯಲ್ಲಿದ್ದ ಮೊಳೆಯಿಂದ ಒಂದು ದಾರವು ಹೊರಟು ಒಡಕು ದೋಣಿಯೊಳಕ್ಕೆ ಹೋಗಿದ್ದಿತು. ಅದನ್ನು ಸೇದಿ ನೋಡಲು ಗಂಟು ಸಿಕ್ಕಿತು. ವಿಠಲನು ಅದನ್ನು ತೆಗೆದು ಜೇಬಿನಲ್ಲಿ ಮುಚ್ಚಿಟ್ಟುಕೊಂಡು ಬಂದು ಪುನಃ ಸೌದಾಮಿನಿಯ ಸಂಗಡ ಸಾಧಿಸತೊಡಗಿದನು.

---

# ಹತ್ತನೆಯ ಪರಿಚ್ಛೇದ.

ವಿಠಲನು ಮಹಡಿಯನ್ನೇರಿದಾಗ ಸೌದಾಮಿನಿಯೂ ಅವನರಿಯದಂತೆ ಮೆಲ್ಲಗೆ ಹತ್ತಿಹೋಗಿದ್ದಳು. ವಿಠಲನು ಕಂಡುಬಿಟ್ಟನು. ಆಗ ಅವಳು ವಿಲಕ್ಷಿತೆಯಾಗಿ ನಿಂತಳು.

ವಿಠಲ—ಪ್ರಫುಲ್ಲೆ, ನೀನೇತಕ್ಕಿಲ್ಲಿಗೆ ಬಂದೆ? ಬರಕೂಡದೆಂದು ನಾನು ಹೇಳಿರಲಿಲ್ಲವೆ?

ಸೌದಾಮಿನಿಯು—ನಾನೇನೂ ನಿನ್ನ ಕೇಸಿಗೋಸ್ಕರ ಬರಲಿಲ್ಲ. ನಮ್ಮ ಮಾವಯ್ಯನ ಕೊಠಡಿಯಲ್ಲಿ ಟವಲನ್ನಿಟ್ಟು ಹೋಗೋಣವೆಂದು ಬಂದಿದ್ದೆ.

ವಿಠಲ—ಈ ಕೊಠಡಿಗೆ ಬೀಗ ಹಾಕಿದೆಯಲ್ಲ?

ಸೌದಾಮಿನಿ—ಈಗತಾನೆ ನಾನು ಟವಲನ್ನೊಳಗಿಟ್ಟು ಬೀಗಹಾಕಿಕೊಂಡು ಬಂದೆ.

ವಿಠಲ—ನಿನ್ನಲ್ಲಿದರ ಬೀಗದಕ್ಕೆ ಇದೆಯೆ?

ಸೌದಾಮಿನಿ—ತನ್ನ ಡಾಬಿಗೆ ತಗಲಿಸಿಕೊಂಡಿದ್ದ ಬೀಗದಕ್ಕೆ ಕುಚ್ಚಿನಲ್ಲಿದ್ದ ಒಂದಾನೊಂದು ಬೀಗದಕ್ಕೆಯಿಂದ ಬೀಗವನ್ನು ಬಿಚ್ಚಿ ಕದವನ್ನು ತೆರೆದು ಕುರ್ಚಿಯ ಮೇಲಿಟ್ಟಿದ್ದ ಟವಲನ್ನು ತೋರಿಸಿದಳು.

ಇವಳ ಬಳಿಯಲ್ಲಿ ತನ್ನ ಕೊಠಡಿಗೆ ಕಳ್ಳಬೀಗದಕ್ಕೆ ಇದ್ದುದನ್ನು ಕಂಡು ವಿಠಲನು—ಈ ಸೌದಾಮಿನಿಯು ಇಷ್ಟು ಚಾಲಾಕಿನವಳಾದುದರಿಂದಲೇ ಇಷ್ಟು ಠಕ್ಕು ಮಾಡಿ ತಾನೇ ಪ್ರಫುಲ್ಲೆಯೆಂದು ನಟಿಸುತ್ತ ಎಂತಹವರ ಕಣ್ಣಿಗೂ ಮಂಕು ಬೂದಿ ಎರಚುತ್ತಿರುವಳು—ಎಂದು ಅಚ್ಚರಿಗೊಂಡನು.

ಬಳಿಕ ವಿಠಲನು—ಪ್ರಫುಲ್ಲೆ, ಇನ್ನು ನಾನು ಹೊರಡುತ್ತೇನೆ. ಈ ಕೇಸಿನಲ್ಲಿ ನೀನು ಇಷ್ಟು ಸಹಾಯಮಾಡಿದುದು ತುಂಬ ಸಂತೋಷ.

ಸೌದಾಮಿನಿ—ಉತ್ಕಂಠತೆಯಿಂದ—ಇಲ್ಲಿ ಏನಾದರೂ ಪತ್ತೆಯಾಯಿತೆ?

ವಿಠಲ_ಅಷ್ಟು ಮುಖ್ಯವಾದುದೇನೂ ಸಿಕ್ಕಲಿಲ್ಲ. ಇನ್ನು ಕೆಲವು ದಿನಕ್ಕೆ ನಾನು ಪುನಃ ಬರಬೇಕಾಗುವುದು.

ಸೌದಾಮಿನಿ_ಈದಿನವಾದರೂ ಕೃಪೆಯಿಟ್ಟು ಆ ನನ್ನ ಪಚ್ಚೆಯ ಪೆಟ್ಟಿಗೆ ಯನ್ನು ಕಳುಹಿಸುತ್ತೀಯಾ ?

ವಿಠಲ_ಅದು ಅಸಾಧ್ಯ. ಅದು ಒಂದೆರಡು ದಿನಗಳಲ್ಲಿ ದೊರೆ ಯುವಂತಿಲ್ಲ.

ಸೌದಾಮಿನಿ_ನಾನು ಅದನ್ನುಪಯೋಗಿಸಿಕೊಳ್ಳಬೇಕಾಗಿದೆಯಲ್ಲ?

ವಿಠಲ_ನೀನುಪಯೋಗಿಸಬೇಕೆ ? ಅದರಲ್ಲೇನಿದೆ ?

ಸೌದಾಮಿನಿ_ಅದರಲ್ಲೇನಾದರೂ ಇರಲಿ, ಇಲ್ಲದಿರಲಿ, ನಿನ್ನಸಂಗಡ ಹೇಳಬೇಕಾದುದೇನೂ ಇಲ್ಲ. ಕಡೆಗೆ ಇನ್ನು ಮುಂದಕ್ಕೆ ನನ್ನ ಕೇಸಿನ ವಿಷಯ ವಾಗಿ ಯಾರೊಬ್ಬರ ಸಂಗಡವೂ ಯೋಚಿಸಬಾರದೆಂದು ನಿರ್ಧರಿಸಬೇ ಕಾಗುವುದು.

ವಿಠಲ_ಹಾಗಾದರೆ ನಿನ್ನಿಷ್ಟ_ಎಂದು ಹೇಳಿ ಹೊರಟುಹೋದನು.

ಸೌದಾಮಿನಿಯ ಮುಖವು ಕಳೆಗುಂದಿತು. ವ್ಯೆಯ್ಯೊಣಗಿ ತುಟಿಗಳದುರಿ ದವು. ವಿಠಲನು ಆ ಬಂಗಲೆಯ ಹೆಬ್ಬಾಗಿಲನ್ನು ದಾಟಿದಕ್ಷಣವೇ ಅವಳು ಮಹಡಿಯ ಮೇಲಕ್ಕೆ ಮಾಧವಭಾಸ್ಕರರು ಮಲಗಿದ್ದ ಕೊಠಡಿಗೆ ಹೋಗಿ ಥಟ್ಟನೆ ಆ ಒಡಕುದೋಣಿಯಲ್ಲಿ ನೋಡಿದಳು. ಗಂಟು ಇರಲಿಲ್ಲ. ಕೇವಲ ಖಿನ್ನಳಾದಳು. ಇದು ಕಳ್ಳನನ್ನು ಚೇಳು ಕುಟುಕಿದಂತಾಯಿತು! ಬಳಿಕ_ತಿಲಮೆ ! ತಿಲಮೆ, ಬಾರೆ ! ನೋಡೆ, ಹೋಯಿತಲ್ಲೆ ಗಂಟು_ಎಂದು ಕೂಗಿಕೊಂಡಳು. ತಿಲ ಮೆಯು ಬೆದರಿದ ಜಿಂಕೆಯಂತೆ ಸಾಧ್ವಸಗೊಂಡು ಒಂದೇ ಹೆಜ್ಜೆಗೆ ಧಡಂಗನೆ ಉಪ್ಪರಿಗೆಯನ್ನೇರಿದಳು. ಆ ಲಾವಣ್ಯವತಿಯು ಬೆಳುದಿಂಗಳಂತಿರುವ ಬಿಳೀ ಮಲ್ಲನ್ನುಟ್ಟುಕೊಂಡು ನೆಗೆದುದನ್ನು ನೋಡಿದ ಯಾವ ಪುರುಷನೂ ಚಿತ್ತವಿಕಾ ರವನ್ನು ಪಡೆಯದಿರುವುದು ದುಸ್ತರವಾಗಿದ್ದಿತು.

ಸೌದಾಮಿನಿ_ಬಾರೆ ! ನೋಡಮ್ಮ! ಅಯ್ಯೋ ಕೆಟ್ಟೆವಲ್ಲೆ!

ತಿಲವೆ—ದಿಗ್ಭ್ರಮೆಗೊಂಡು—ಅದೇನೇ ವಿಷಯ ?

ಸೌದಾಮಿನಿ—ಆ ಪುಟ್ಟಗಂಟನ್ನು ಬಚ್ಚಿಟ್ಟಿದ್ದುದು ನಿನಗೂ ತಿಳಿದಿದ್ದಿತಷ್ಟೆ: ಅದನ್ನು ವಿಠಲನು ಕೊಂಡುಹೋದನು. ಅದು ಒಡಕು ದೋಣಿಯಲ್ಲಿಲ್ಲ.

ತಿಲವೆ—ಇದೇನೆ ? ಹೀಗೆನ್ನುವೆ ! ಸರ್ವನಾಶ !

ಸೌದಾಮಿನಿ—ಅಷ್ಟಲ್ಲದೆಯೇನು ! ನಾವು ನಮ್ಮವರು ಯಾರನ್ನಾದರೂ ಅಗ್ಗೆ ಕರೆಯಿಸಿಕೊಳ್ಳಬೇಕಾಗಿದ್ದಿತು.

ತಿಲವೆ—ವಿಠಲನು ನಿನ್ನ ವಿಷಯದಲ್ಲೇನಾದರೂ ಸಂಶಯಪಟ್ಟಂತೆ ಅವನ ಮಾತುಗಳಿಂದ ಗೊತ್ತಾಯಿತೆ ?

ಸೌದಾಮಿನಿ—ಸ್ವಲ್ಪ ಮಟ್ಟಿಗೆ ಹಾಗೆಯೇ ತೋರುವುದು.

ತಿಲವೆ—ಹಾಗಾದರೆ ಅದಕ್ಕೇನಾದರೂ ಮಾಡಬೇಕು. ಆ ಪೆಟ್ಟಿಗೆಯನ್ನು ಹಿಂದಕ್ಕೆ ಕೊಡೆಂದು ನೀನು ಕೇಳಿದೆಯೊ ? ಅದಕ್ಕವನೇನು ಹೇಳಿದನು ?

ಸೌದಾಮಿನಿ—ಕೇಳಿದೆ, ಉಂಟು ಎನ್ನಲೂ ಇಲ್ಲ, ಇಲ್ಲವೆನ್ನಲೂ ಇಲ್ಲ.

ತಿಲವೆ—ಆ ಮುದಿವಿಠಲನಿಗೆ ಹೆಚ್ಚು ಸಂಗತಿ ಗೊತ್ತಾಗಿರಬಹುದು. ಅವನೆ ನೀನು ಪ್ರಫುಲ್ಲೆಯಲ್ಲವೆಂಬುದು ಮಾತ್ರಗೊತ್ತಾಗಿರಲಾರದು. ಅವನು ಚತುರ ನಾದುದರಿಂದ ಅದನ್ನು ಪ್ರಾಯಶಃ ಗೊತ್ತುಮಾಡಿಬಿಟ್ಟಾನು. ಆದುದರಿಂದ ನಾವು ಅವನನ್ನು ಜೀವದೊಡನೆ ಉಳಿಸಬಾರದು.

ಸೌದಾಮಿನಿ—ಹೌದುಕಾಣೆ. ಸ್ವಲ್ಪವೂ ತಡಮಾಡಕೂಡದು. ಈ ವಿಠಲನು ಆ ಗಂಟನ್ನು ಆ ನಮ್ಮ ಕಳಿಂಗನಿಗೆ ಕೊಟ್ಟರೆ ಅವನೇನು ಊಹಿಸಿಕೊಂಡಾನು !

ತಿಲವೆ—ಆದುದರಿಂದಲೇ ವಿಠಲನು ವಾಗೀಶನನ್ನು ನೋಡುವುದಕ್ಕವಕಾಶಕೊಡದಂತೆ ಮೊದಲೇ ಸರಿಮಾಡಿಬಿಡಬೇಕು.

ಸೌದಾಮಿನಿ—ಅದನ್ನು ಮಾಡುವುದು ಹೇಗೆ ?

ತಿಲಮೆ—ಮೊದಲು ವಿಶಲನನ್ನು ಪುಸಲಾಯಿಸಿ ಎಲ್ಲಿಗಾದರೂ ಸಾಗಿಸ ಬೇಕು.

ಸೌದಾಮಿನಿ—ಆ ಕೆಲಸವನ್ನು ಮಾಡತಕ್ಕವರು ಯಾರು ?

ತಿಲಮೆ—ನಮ್ಮ ನಾಗೇಶ. ಓಹೋ! ನಾವು ವ್ಯಥಾ ಹೊತ್ತು ಕಳೆಯು ತ್ತಿದ್ದೇವೆ.

ಈಗ ತಿಲಮೆ ಸೌದಾಮಿನಿಯರು ಬೇರೆ ಉಡುಪನ್ನು ಧರಿಸಿ ಯಾರಿಗೂ ಗೋಚರವಾಗಬಾರದೆಂದು ಶಾಲನ್ನು ಮುಸುಕಿಟ್ಟುಕೊಂಡು ಸದ್ದಿಲ್ಲದೆ ಹೊರ ಟರು. ಮತ್ತೊಂದು ರಾಜಮಾರ್ಗದ ಅಡ್ಡರಸ್ತೆಯ ಸಂದಿನಲ್ಲಿದ್ದ ಏಕಾಂತಗೃ ಹಕ್ಕೆ ಸಂದುಗೊಂದಿಗಳ ಮಾರ್ಗವಾಗಿ ಹೋಗಿ ಸೇರಿದರು. ಆಗ್ಗೆ ಅಲ್ಲಿದ್ದ ಮಾಧವಭಾಸ್ಕರರು ಎಲ್ಲಿಗೋ ಪ್ರಯಾಣೋನ್ಮುಖರಾಗಿದ್ದವರು ಸೌದಾಮಿನಿಯ ಈ ಕಥೆಯನ್ನೆಲ್ಲ ಕೇಳಿ ಸಿಡಿಲು ಬಡಿದಂತಾದರು. ಆದರೂ ದುರ್ಧೈರ್ಯವನ್ನವ ಲಂಬಿಸಿ ಅಲ್ಲಿಗೆ ಸಮೀಪದ ಮನೆಯಲ್ಲಿದ್ದ ನಾಗೇಶನನ್ನು ಕರೆಯಿಸಿಕೊಂಡರು.

ನಾಗೇಶನು ಬಂದು ನಡೆದ ಸಂಗತಿಯನ್ನೆಲ್ಲ ಮಾಧವನಿಂದ ತಿಳಿದನು. ತಾನು ಮೃತ್ಯುಲೋಕದ ಮಹಾಮಾರ್ಗದಲ್ಲಿ ಆಗಲೇ ಒಂದೆರಡು ಹೆಜ್ಜೆಗಳ ನ್ನಿಟ್ಟು ನಡೆಯುತ್ತಿರುವುದಾಗಿ ಭಾವಿಸಿಕೊಂಡನು. ಹೃದಯವು ಬೇಗ ಬೇಗ ಬಡಿಯುತ ಬಂದಿತು. ಗಡಗಡನೆ ನಡುಗಿದನು. ಮಾತು ಹೊರಡುವುದೂ ಕಷ್ಟವಾಯಿತು. ಅವನ ದುರವಸ್ಥೆಗೆ ಈಗ ಹೇಳಿದುದು ಕಾರಣವಲ್ಲ. ಪ್ರಪು ಲ್ಲೆಯು ಸೆರೆಮನೆಯಿಂದ ತಪ್ಪಿಸಿಕೊಂಡುದೊಂದೇ ನಾಗೇಶನಿಗೆ ಗರುಡಾಸ್ತ್ರವಾ ಗಿದ್ದಿತು. ಅನ್ನುವುದಕ್ಕಾಗಲಿ ಅನುಭವಿಸುವುದಕ್ಕಾಗಲಿ ಆಗದು. ಕಡೆಗೆ ಇವನು ಮಾಧವನ ದುರುಪದೇಶಗಳನ್ನೆಲ್ಲ ಕೇಳಿ ಅದರಂತೆಯೇ ನಡೆಯಿಸುವಂತೆ ಒಪ್ಪಿ ಕೊಂಡು ಹೊರಟನು. ಅವನು ಸ್ವಲ್ಪದೂರ ಹೋದ ತರುವಾಯ

ಮಾಧವ—ಹೇಡಿಯಾದ ಆ ಖೂಳನು ಏನನ್ನೂ ಮಾಡಲಾರನು. ಅವನು ತುಂಬ ಹೆದರಿದಾನೆ. ಏನಿದ್ದರೂ ನಾವೇ ಮಾಡಬೇಕು. ಆದುದರಿಂದ ಈಗ ನಾವೇನು ಮಾಡೋಣ ?

ಭಾಸ್ಕರ–ಎಲ್ಲಾದರೂ ವಿಠಲನು ಬರತಕ್ಕ ಸ್ಥಳದಲ್ಲಿ ಅವಿತುಕೊಂಡಿದ್ದು ಅವನನ್ನು ಮಟ್ಟ ಮಾಡಬೇಕು.

ಮಾಧವ–ನನಗೊಂದು ಯೋಚನೆ ತೋರುತ್ತಿದೆ. ಏನೋ ಒಂದು ಅಮೂಲ್ಯವಾದ ಪದಾರ್ಥ ಹೋಗಿಬಿಟ್ಟಿರುವುದಾಗಿಯೂ ಅದರ ಪತ್ತೆಗಾಗಿ ಕುಮುದಿನೀ ನದಿಯ ತೀರದಲ್ಲಿರುವ ಮಂಗಳತರಂಗವೆಂಬ ಬಂಗಲೆಗೆ ದಯ ಮಾಡಿಸಬೇಕೆಂದೂ ವಿಠಲನಿಗೊಂದು ಕಾಗದವನ್ನು ಬರೆಯಬೇಕೆಂದಿದೇನೆ.

ಭಾಸ್ಕರ–ಕಾಗದ ಬರೆದವರು ಯಾರೆಂದು ರುಜು ಹಾಕುತ್ತೀಯೆ ?

ಮಾಧವ–ಶಾಂತಕುಮಾರಿಯೆಂದು.

ಭಾಸ್ಕರ–ಆ ವಿಠಲನನ್ನು ಮೊದಲು ಅಲ್ಲಿ ಯಾರು ನೋಡಬೇಕು ?

ಮಾಧವ–ತಿಲಮೆಯು ಒಬ್ಬ ವಿಧವೆಯೆಂದು ನಟಿಸುತ್ತ ಅವನನ್ನು ನೋಡಲಿ.

ಭಾಸ್ಕರ–ಅವನು ತಿಲಮೆಯನ್ನು ಅರಿಯನೊ ?

ಮಾಧವ–ಅವನು ನೋಡಿರಲಿ, ನೋಡದಿರಲಿ, ಏನೂ ವ್ಯತ್ಯಾಸವಿಲ್ಲ. ಅವನು ಆ ಮನೆಯೊಳಕ್ಕೆ ಕಾಲಿಟ್ಟಮೇಲೆ ಪುನಃ ಬದುಕಿ ಬರುವ ಸಂಭವವಿಲ್ಲ.

ಮಾಧವನು ಕಾಗದವನ್ನು ಬರೆದನು. ಈ ನಾಲ್ವರೂ ಸೇರಿ ಮುಂದಿನ ಕಾರ್ಯಕ್ಕಾಗಿ ಆ ಮಂಗಳತರಂಗವೆಂಬ ಮನೆಗೆ ತೆರಳಿದರು. ಆ ಮನೆಯು ಪುಟ್ಟದಾಗಿದ್ದರೂ ಸುಂದರವಾಗಿಯೂ ರಮ್ಯವಾಗಿಯೂ ಇದ್ದಿತು. ಬೇಸಗೆಯ ಸಂಜೆಯಲ್ಲಿ ಆಮನೆಯಂಗಳದ ಉದ್ಯಾನದಲ್ಲಿ ಶಿಲಾಪೀಠಗಳ ಮೇಲೆ ಕುಳಿತು ವಿಹರಿಸುವವರಿಗೆ ಆಹ್ಲಾದಕರವಾದ ವಾತಪೋತವು ಕುಮುದಿನಿಯ ಕಿರುದೆರೆಗಳಿಂದ ಹೊರಟು ಗುಣತ್ರಯವಿಶಿಷ್ಟವಾಗಿ ಬೀಸುತ್ತ ಆಪ್ಯಾಯನ ಗೊಳಿಸುವುದರಿಂದ ಈ ಮನೆಗೆ ಈ ಹೆಸರು ಬಂದಿರುವುದು. ಈಗ ತಾವು ತಂಗಿದ್ದ ಮನೆಯಲ್ಲಿ ತಮ್ಮ ದುರುದ್ಯೋಗಗಳೇನಾದರೂ ಹೊರಪಟ್ಟು ತೊಂದರೆ ಯಾಗುವದಾದರೆ ಆಗ್ಗೆ ಕೈಗಾವಲಿರಬೇಕೆಂದು ಈಚೆಗೆ ಇವರು ಈ ಮನೆಯನ್ನು

ಬಾಡಿಗೆಗೆ ತೆಗೆದುಕೊಂಡಿದ್ದರು. ಇವರು ಹೀಗೆ ನರಹತ್ಯಕ್ಕೆ ಸಜ್ಜುಗೊಳಿಸು ತ್ತಿರುವಾಗ ಆ ಪಾಪಿಯಾದ ನಾಗೇಶನು ಏನು ಮಾಡುತ್ತಿದ್ದನು ? ಅವನೂ ವಿಠ ಲ ಮೂರ್ತಿಯನ್ನು ಕೊಲ್ಲಲು ಯತ್ನಿಸುತ್ತಿದ್ದನೆ ?

ನಾಗೇಶನು ಕೃತ್ರಿಮಸಂಧಾನದಲ್ಲೂ ದುರಾಲೋಚನೆಯಲ್ಲೂ ಈ ಕರಟಕದಮನಕರಿಗಿಂತ ಏನೂ ಕಡಿಮೆಯಾದವನಲ್ಲ. ಅವನು ಮಾಧವನ ದುರುಪದೇಶಗಳನ್ನೆಲ್ಲಾ ಅಂಗೀಕರಿಸಿಕೊಂಡು ಹೋಗಿ ಬಳಿಕ ಸ್ವಬುದ್ಧಿಯನ್ನುಪ ಯೋಗಿಸಿದನು. ಅಂತು ಈ ಮೊಕದ್ದಮೆಯಲ್ಲಿ ಏನೋ ದೊಡ್ಡದೊಡ್ಡ ಗಂಡ ಗಳುಂಟೆಂದೂಹಿಸಬಲ್ಲ ಕಾಲಜ್ಞಾನಿಯೋ ಆದನು. ಅವನು ನಳಿನಿಯನ್ನು ಕರೆ ಯಿಸಿಕೊಂಡು ಅವಳು ವಿಠಲನ ಬಳಿಯಲ್ಲೇನಾದರೂ ಹೊಸಸಂಗತಿಗಳನ್ನು ತಿಳಿ ದಳೇ ಎಂದು ವಿಚಾರಿಸಿ ನೋಡಿದನು. ವಿಠಲನಿಗೆ ಪ್ರಫುಲ್ಲೆಯ ವಿಷಯದಲ್ಲಿ ಯಾವ ಸಂಗತಿಯೂ ಗೊತ್ತಿಲ್ಲವೆಂದು ನಳಿನಿಯು ನಂಬಿಕೆ ಹೇಳಿದಳು.

ಆದರೂ ' ಕಳ್ಳನ ಮನಸ್ಸು ಹುಳ್ಳುಹುಳ್ಳಗೆ ' ಎಂಬಂತೆ ನಾಗೇಶನ ಚಿತ್ತವು ಅಸ್ವಸ್ಥವಾಯಿತು. ಅವನು ಕೂಡಲೆ ತನ್ನ ರಹಸ್ಯಸ್ಥಾನವಾದ ಶವ ಮಂದಿ ರಕ್ಕೆ ಹೋದನು. ಹೋಗಿ ಒಳಗಿನ ಅಗುಳಿಯನ್ನು ಭದ್ರವಾಗಿ ಹಾಕಿಕೊಂಡು ನೇರವಾಗಿ ನೆಲಮಾಳಿಗೆಗೆ ಇಳಿದನು. ವ್ಯಾಕುಲಚಿತ್ತನಾದ ಆ ಧೂರ್ತನ ನೀಚ ಮುಖವು ಆ ಬೆಳಕಿನಲ್ಲಿ ಜೀವಚ್ಛವದ ಮೋರೆಯಂತೆ ಮಂಕಾಗಿದ್ದಿತು. ಬಾವಿಯ ಬಳಿಗೆ ಹೋಗಲು ಮುಚ್ಚಳವು ತೆರೆದಿದ್ದಿತು. ಸಮೀಪದಲ್ಲಿ ಹಜ್ಜೆಯ ಗುರುತು ಇದ್ದುದಲ್ಲದೆ ಅಲ್ಲಲ್ಲಿ ಬದಿಯು ತಾನೇ ತಾನಾಗಿದ್ದಿತು. ಆ ಬದಿಯ ಗುರು ತನ್ನೇ ಹಿಂಬಾಲಿಸಲು ಅದು ಜಾಕಾಯ ಪೆಟ್ಟಿಗೆಯನ್ನು ತೋರಿಸಿತು. ನಾಗೇ ಶನು —ಅಯ್ಯೋ ಕೆಟ್ಟೆನಲ್ಲಾ! ಎಂದು ಅರಚುತ್ತ ಎದೆಎದೆ ಬಡಿದುಕೊಂಡು ಅಸಹ್ಯಕರವಾದ ಅಭಯಂಕರಶವವು ಅದರೊಳಗಿದ್ದುದನ್ನು ಕಂಡನು. ಅವನಿಗೆ ಮರಣಕಂಪವುಂಟಾಯಿತು. ಕಟ್ಟಕಡೆಗೆ—ಅಯ್ಯೋ ! ಇದು ವಿಠಲನ ಕೆಲಸ. ಇದಾಗಬಾರದು. ಇನ್ನು ನನ್ನ ಪದಕ್ಕೆ ಮುಕ್ತಾಯ—ಎಂದು ಗೋಳಾಡಿದನು.

ಇವನು ಈಗ ಜುಗುಪ್ಸಾವಹವಾದೊಂದು ಕಾರ್ಯವನ್ನು ಕೈಗೊಂಡನು ತಲೆಯ ಮೇಲೆ ಕೈಯಿಟ್ಟುಕೊಂಡು " ಇನ್ನೇನುಗತಿಯಪ್ಪ" ಎಂದು ಯೋಚಿಸುತ

ವೃಥಾ ಕಾಲಕಳೆಯಲಿಲ್ಲ. ಒಂದು ಗೋಣಿಯಚೀಲದಲ್ಲಿ ಆ ಹೆಣವನ್ನು ತುರುಕಿದನು.

ಆಹಾ! ಈ ಕೃತ್ಯಗಳನ್ನು ಕೇಳಿದರೇನೆ ಸಾಧುಶಿಖಾಮಣಿಗಳ ಮೃದುಹೃದಯವು ಕರಗಿ ಕಣ್ಣೀರು ಹರಿಯುವುದು. ಘೋರಪಾತಕಿಗಳ ಹೃದಯವಾದರೋ ಘನೀಭೂತವಾಗಿ ಶಿಲಾವಸ್ಥೆಯಲ್ಲೇ ಇರುವುದು. ಹೀಗೆನ್ನುವಲ್ಲಿ ನಾಗೇಶನಿಗೆ ಇದೆಲ್ಲ ಅಷ್ಟೇನೂ ದೊಡ್ಡವಿಷಯವಾಗಿ ತೋರಲಿಲ್ಲವೆಂಬುದೇನೂ ಸೋಜಿಗವಲ್ಲ.

ಹಾಗೆ ಚೀಲಕ್ಕೆ ಕೂರಿದ ಹೆಣವನ್ನು—ಹೆಣದ ತುಂಡುಗಳನ್ನು—ಅಥವಾ ಅಸ್ಥಿಪಂಜರವನ್ನು ನಾಗೇಶನು ಹೆಗಲಮೇಲೆ ಹೊತ್ತುಕೊಂಡು ಮೇಲಕ್ಕೇರಿ ಬಂದು ಧೊಪ್ಪನೆ ನೆಲದಮೇಲೆ ಕೆಡವಿದನು. ಬಳಿಕ ನಾನಾ ದುರ್ಭಾಷೆಗಳಿಂದ ಬೈದು ಆ ಚೀಲವನ್ನು ಕಾಲಿನಿಂದ ಒದೆದು ಉರುಳಿಸಿದನು. ಈ ವಿಧವಾದ ವಿವೇಕಕ್ಕೆ ಯಾವುದು ಕಾರಣವೆಂಬುದನ್ನು ಹೇಳುವುದು ನಮ್ಮ ಕೆಲಸವಲ್ಲ, ಹೋಗಲಿ. ಅಂತು ಇಷ್ಟಾಗಲು ಒಂದೆರಡು ನಿಮಿಷ ಸ್ವಲ್ಪಮಟ್ಟಿಗೆ ಸುಧಾರಿಸಿಕೊಂಡು ಆ ಮನೆಯ ಗರ್ಭಾಂಕಣದಲ್ಲಿದ್ದ ಒಂದಾನೊಂದು ಕಿರುಮನೆಯ ಬಾಗಿಲನ್ನು ತೆರೆದು ಒಂದು ಮೂಲೆಯ ನೆಲವನ್ನು ಸುಮಾರು ಅರ್ಧ ಅಡಿಯಷ್ಟು ಆಳ ತನ್ನ ಬೆರಳುಗಳಿಂದಲೇ ತೋಡಿದನು. ಎರಡು ಕಬ್ಬಿಣದ ರೇಖುಗಳು ಕಂಡುಬಂದವು. ಅವನ್ನು ತೆರೆದನು. ಒಳಗೆ ವೈತರಣೀ ನದಿ ಹರಿಯುತ್ತಿದ್ದಿತು.

ನಮ್ಮ ಮೈಸೂರು ಬೆಂಗಳೂರಂತಹ ಪಟ್ಟಣಗಳ ಗ್ರಾಮಸಾರದ ಚರಂಡಿಯ ಕಾಲ್ವೆಗಳೇ ಎಷ್ಟೋ ಆಳವಾಗಿ ಹರಿಯುತ್ತಿರುವಲ್ಲಿ ಹತ್ತುಲಕ್ಷ ಜನರಿಗಾವಾಸವಾದ ಆ ನವನಗರಿಯಲ್ಲಿ ಪೌರಕಾರ್ಯನಿರ್ವಾಹಕಸಮಾಜ (ಮ್ಯುನಿಸಿಪಾಲಿಟಿ) ದವರು ಅನೇಕಲಕ್ಷ ರೂಪಾಯಿ ವೆಚ್ಚಮಾಡಿ ಏರ್ಪಡಿಸಿರುವ ಗ್ರಾಮಸಾರದ ಕಾಲುವೆಗಳು ಎಷ್ಟುಮಟ್ಟಿನವೆಂಬುದನ್ನು ಹೇಳಬೇಕಾದುದೇ ಇಲ್ಲ! ಅವು ಅನೇಕ ಶಾಖೆಗಳಾಗಿ ಹರಿಯುತ್ತವೆಯಾದರೂ ಯಾವುದೊಂದು ದೊಡ್ಡ ಚರಂಡಿಯಲ್ಲೂ ಎಂಟಡಿಗಳ ಆಳಕ್ಕಿಂತ ಕಡಿಮೆ ನೀರು ಹರಿಯುತ್ತಿರಲಿಲ್ಲ. ಈ ಮಹಾಬಿಲವು ಆ ವೈತರಣೀನದಿಗೆ ಒಂದು ಪ್ರವೇಶಮಾರ್ಗವಾಗಿದ್ದಿತು. ನಾಗೇಶನು

ಆ ಚೀಲವನ್ನು ಎಡಗೈಯಿಂದ ದರದರನೆ ಎಳೆದುಕೊಂಡು ಹೋಗಿ ಆ ಮೂಟೆ ಯನ್ನು ಉಳ್ಳಾ ಉಸರಾ ಎತ್ತಿ—ಥು, ದುಷ್ಟಪ್ರಾರಬ್ಧವೆ, ಹಾಳಾಗಿಹೋಗು, ಇನ್ನಾದರೂ ನಾನು ಸುಖವಾಗಿರುವೆನು—ಎಂದು ಹೇಳುತ್ತ ಆದನ್ನು ಆ ಕಾಲು ವೆಗೆ ತಳ್ಳಿದನು. ಪುನಃ ಆ ರೇಖುಗಳನ್ನೇ ಗದಿಯಾಗಿ ಮುಚ್ಚಿ ಮೇಲೆ ಮಣ್ಣನ್ನು ಹರಡಿ ಅದರಮೇಲೆ ಧೂಳನ್ನೆರಚಿ ಐಬು ಸಿಕ್ಕದಂತೆ ಮಾಡಿಟ್ಟು ಇನ್ನು ಮುಂದಕ್ಕೆ ತನ್ನ ತಪ್ಪಿತವನ್ನು ತೋರಿಸಬಲ್ಲ ಕುರುಹುಗಳು ಯಾವುವೂ ಇಲ್ಲವೆಂದು ತನ್ನ ಕಷ್ಟಕ್ಕೆ ತಾನೇ ಸಮಾಧಾನಮಾಡಿಕೊಂಡು ಎಲ್ಲಾ ಬಾಗಿಲುಗಳನ್ನೂ ಹಾಕಿ ಕೊಂಡು ಹೊರಗೆ ಬಂದನು.

ತಾನು ಮಾಡಿದ ಕೆಲಸವನ್ನು ಮತ್ತೆಯಾರೂ ನೋಡಿಲ್ಲವೆಂದು ನಾಗೇ ಶನು ನಂಬಿಕೊಂಡನು. ಇದು—ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದಂ ತಾಯಿತು. ನಾಗೇಶನು ಆ ಮನೆಯನ್ನು ಬಿಟ್ಟು ಒಂದೆರಡು ಹೆಜ್ಜೆ ನಡೆದನೋ ಇಲ್ಲವೋ, ಇದುವರೆಗೂ ನೆರಳಿನಂತೆ ಹಿಂಬಾಲಿಸಿ ಎಲ್ಲವನ್ನೂ ಪರಿಶೀಲಿಸುತ್ತಿದ್ದ ಒಬ್ಬ ವೃದ್ಧನು ಮತ್ತೆ ಬೆನ್ನಹತ್ತಿದನು. ನಾಗೇಶನು ತನ್ನ ಮನೆಗೆ ಹೋಗಿ ಇನ್ನೂ ಕೆಲವು ದಿನಗಳವರೆಗೆ ತಾನು ಊರಲ್ಲಿರುವುದಿಲ್ಲವೆಂದು ತನ್ನ ಹೆಂಡತಿಗೆ ಹೇಳಿ ಕೈಯಲ್ಲಿ ಒಂದು ಯಾನಭಸ್ತ್ರಿಕೆ (ರೈಲ್ ಚೀಲ) ಯನ್ನು ಹಿಡಿದುಕೊಂಡು ಹೊರಟನು. ಇವನು ಸ್ವಂತದೇಶಕ್ಕೆ ಹೊರಟುಹೋಗುವೆನೆಂದು ಈ ವೃದ್ಧನಾದ ನಟೇಶನು ಭಾವಿಸಿದ್ದನು. ಆದರೆ ನಾಗೇಶನು ರೈಲ್ವೆಸ್ಟೇಷನ್ನಿಗೆ ಹೋಗಿ ಓದಾಣಿಗೆ ಟಿಕೇಟ್ ತೆಗೆದುಕೊಂಡನು. ಇದರಿಂದ ಅವನು ಈ ದೇಶದಲ್ಲೇ ಇರುವವನೆಂದಾಯಿತು. ಈ ಸುಳಿವನ್ನು ತಿಳಿದು ನಟೇಶನು ಓದಾಣಿಯಲ್ಲಿರುವ ತನ್ನ ಕಡೆಯ ಆಪ್ತನಾದೊಬ್ಬ ದೊಡ್ಡಮನುಷ್ಯನಿಗೆ—ಈ ರೈಲಿನಲ್ಲಿ ಇಂತಹವನೊ ಬ್ಬನು ಬರುವನೆಂದೂ ಇವನ ಚಾಲುಚಲನುಗಳನ್ನೆಲ್ಲ ರಹಸ್ಯವಾಗಿ ಪರೀಕ್ಷಿ ಸುತ್ತ ಇವನಮೇಲೆ ಬಲವಾದ ಕಾವಲಿಟ್ಟಿರಬೇಕೆಂದೂ ಟೆಲಿಗ್ರಾಫ್‌ಕೊಟ್ಟನು. ಇಷ್ಟಾದಮೇಲೆ ನಡೆದ ಸಂಗತಿಯನ್ನೂ ತಾನು ಮಾಡಿದ ಕೆಲಸವನ್ನೂ ವಿಠಲನಿಗೆ ಅರಿಕೆಮಾಡುವುದಕ್ಕೆಂದು ಆಫೀಸಿಗೆ ಬಂದನು.

ಆಫೀಸಿನಲ್ಲಿ ನೋಡಿದರೆ ಎಲ್ಲಾ ಪದಾರ್ಥಗಳನ್ನೂ ಚೆಲ್ಲಾಪಿಲ್ಲಿಯಾಗಿ ಹರಡಿದಾರೆ. ಬೀರುಗಳು ಮತ್ತು ಮೇಜುಗಳ ಖಾನಿಗಳೆಲ್ಲ ಬರಿದಾಗಿವೆ.

ಕಾಗದಪತ್ರಗಳೆಲ್ಲಾ ಗಾಳಿಪಟವಾಗಿ ಹಾರಾಡುತ್ತಿವೆ. ಡೈರಿಗಳೂ ಲೆಕ್ಕದ ಪುಸ್ತಕಗಳೂ ತಲೆಕೆಳಗಾಗಿ ಬಿದ್ದಿವೆ. ಒಳಗೆ ವಿಠಲಮೂರ್ತಿಯು ಮಲಗುವ ಮನೆಯೆಲ್ಲಾ ಬರಿದಾಗಿದೆ. ನಟೇಶನಿಗೆ ಸಂಶಯವುಂಟಾಯಿತು. ಈ ಅನಾಹುತದಲ್ಲಿ ವಿಠಲಮೂರ್ತಿಗೆ ಏನೋ ಅನರ್ಥವುಂಟೆಂದು ಕೊರಗಿದನು. ಸ್ವಲ್ಪ ಹೊತ್ತು ಮೂಗಿನಮೇಲೆ ಬೆರಳಿಟ್ಟುಕೊಂಡು ಯೋಚಿಸಿ ಕೊನೆಗೆ–ಓಹೋ ಈಗ ಎಲ್ಲಾಗೊತ್ತಾಯಿತು–ಎಂದು ಗೊಣಗುಟ್ಟುತ್ತ ಆ ಕಾಗದಪತ್ರಗಳನ್ನೆಲ್ಲಾ ಒಂದೊಂದನ್ನಾಗಿ ಆಯುತ್ತಿದ್ದನು. "ಹಾಳುಪೆಟ್ಟಿಗೆಯಿಂದ ಇಷ್ಟು ಅನರ್ಥ" ಎಂದು ಪುನಃ ಗೊಣಗಿದನು. ಅದಕ್ಕೆ "ಆ ಪೆಟ್ಟಿಗೆ ಯಾವುದು' ಎಂದು ಸದ್ದಾಯಿತು ವಿಜನವಾದ ಆ ಸ್ಥಳದಲ್ಲಿ ಹಿಂದುಗಡೆಯಿಂದ ಬಂದ ಈ ಧ್ವನಿಯನ್ನು ಕೇಳುತ್ತಲೇ ನಟೇಶನು ಬೆರಗಾದನು. ಈ ಧ್ವನಿಯು ಗಂಭೀರವಾಗಿಯೂ ಆದರಪುರಸ್ಸರವಾಗಿಯೂ ಇದ್ದಿತು. ಹಿಂದಿರುಗಿ ನೋಡಲು ಒಂದು ವ್ಯಕ್ತಿ. ಎದೆ ಅಗಲ, ಅಜಾನುಬಾಹು. ಸೌಮ್ಯಸ್ವಭಾವವನ್ನುಸೂಚಿಸುವ ಸುಂದರಮುಖ.

ನಟೇಶನು ಬೆಚ್ಚಿ ಹಿಂದಿರುಗಿ ನೋಡಿದುದನ್ನು ಕಂಡು ಆ ವ್ಯಕ್ತಿಯು ಪಕಪಕನೆ ನಗುತ್ತ ನಟೇಶನ ಹೆಗಲನ್ನು ತಟ್ಟುತ್ತ–ಏನು ಮುದುಕಯ್ಯ? ಏಕೆ ಹೀಗೆ ದೆವ್ವವನ್ನು ಕಂಡಂತೆ ಹೆದರುತ್ತೀಯಲ್ಲಾ ! ನೀನು ಇಷ್ಟುಭೀತನಾಗುವೆಯೆಂದು ನಾನು ತಿಳಿದಿರಲಿಲ್ಲ. ನೀನು ಗಟ್ಟಿಯಾಗಿ ಗೊಣಗುತ್ತಿದ್ದೆ. ನಾನು ಉತ್ತರಕೊಟ್ಟೆ. ನಾನು ಶ್ರೀಮತಿಯೆಂಬ ಹಡಗಿನ ಯಜಮಾನನಾದ ಪಲ್ಲವ. ನನ್ನ ಹಡಗು ಈ ಪ್ರಪಂಚದ ಎಲ್ಲಾ ಸಾಗರಗಳ ಎದೆಯ ಮೇಲೂ ದೇಕಾಡಿದೆ.

ನಟೇಶ–ಓಹೋ ! ಅಯ್ಯ, ನಿನ್ನನ್ನು ನೋಡಿ ಬಹಳ ಹರ್ಷಗೊಂಡೆನು, ನೀನು ಪ್ರಾಯಶಃ ನನ್ನನ್ನು ಮರೆತಿರಬಹುದೇನೋ ! ನನ್ನ ಹೆಸರು ನಟೇಶ. ನಾನು ಒಂದುಸಲ ನಿನ್ನನ್ನು ಲಲಿತಪಟ್ಟಣದಲ್ಲಿ ನೋಡಿದ್ದೆ.

ಪಲ್ಲವ–ಇದೇನು ! ನಿನ್ನ ಹೆಸರು ಪರಂತಪನೆಂದಲ್ಲವೆ ? ನಾವು ಒಬ್ಬರನ್ನೊಬ್ಬರು ನೋಡಿದ್ದು ಸುಮಾರು ಹತ್ತಿರ ಹತ್ತಿರ ಇಪ್ಪತ್ತು ವರ್ಷಕ್ಕೆ ಬಂದಿದೆ. ಆಗ್ಗೆ ಆ ಲಲಿತಪಟ್ಟಣದಲ್ಲೆಲ್ಲ ನೀನೇ ಮಹಾ ಪ್ರಖ್ಯಾತನಾದ ಪತ್ತೇದಾರನಾಗಿದ್ದೆಯಲ್ಲವೆ ? ಇಪ್ಪತ್ತು ವರ್ಷಗಳ ಹಿಂದೆ ವಜ್ರಗಳನ್ನು ಕದ್ದಿದ್ದ ಕಳ್ಳರನ್ನು ಪತ್ತೆ ಮಾಡಿದ ಕೀರ್ತಿಶಾಲಿಯು ನೀನೇ ಅಲ್ಲವೆ ?

ನಟೇಶನು ಮಂದಹಾಸವನ್ನು ಬೀರುತ್ತ, ಈ ಪಲ್ಲವನು ಏತಕ್ಕಿಲ್ಲಿಗೆ ಬಂದಿರುವನೋ ಎಂದು ಪರಿಭಾವಿಸಿ—ಎಲೈ ನಾವಿಕಶಿರೋಮಣಿ, ಈಗ ನನ್ನಿಂದ ನಿನಗೇನಾಗಬೇಕು ?

ಪಲ್ಲವ—ಇಲ್ಲಿ ಪ್ರಸಿದ್ಧ ಪತ್ತೆದಾರ ಯಜಮಾನ ವಿಠಲನ ಸಂಗಡ ಮಾತಾಡುವುದಕ್ಕೋಸ್ಕರ ಬಂದೆನು. ಆದರೆ ಇಲ್ಲಿ ನನಗೆ ಈ ಪೂರ್ವಸ್ನೇಹಿತನ ಭೇಟಿಯೂ ಆಗುವುದೆಂಬುದು ಸ್ವಪ್ನದಲ್ಲೂ ಇರಲಿಲ್ಲ.

ನಟೇಶ—ವಿಠಲನು ಈಗ ಇಲ್ಲಿಲ್ಲ. ಎಷ್ಟು ಹೊತ್ತಿಗೆ ಬರುವನೋ ಅದೂ ಗೊತ್ತಿಲ್ಲ. ನನ್ನಿಂದೇನಾದರೂ ಆಗಬಹುದಾಗಿದ್ದರೆ ಹೇಳು.

ಪಲ್ಲವ—ಒಂದು ವಿಚಿತ್ರವಾದ ಮೊಕದ್ದಮೆಯುಂಟು. ನಾನು ಆತನನ್ನೇ ಸಾಕ್ಷಾತ್ತಾಗಿ ಕಂಡು ಮಾತಾಡತಕ್ಕದ್ದು. ಅದು ಒಂದು ಪುಟ್ಟಪೆಟ್ಟಿಗೆಯ ವಿಷಯ. ನೀನು 'ಪೆಟ್ಟಿಗೆ' ಯೆಂದು ನುಡಿದಕೂಡಲೆ ಆ ವಿಷಯವೇ ಆಗಿರಬಹುದೆಂದುಕೊಂಡೆನು.

ಆಗ ನಟೇಶನು ಸಂಶಯಗ್ರಸ್ತನಾಗಿ ಆಪಾದಮಸ್ತಕವೂ ಅವನನ್ನು ದೃಷ್ಟಿಸಿ ನೋಡಿದನು. ಆದರೆ ಪಲ್ಲವನ ಮುಖದಲ್ಲಿ ಸಹಜವಾದ ಪ್ರಸನ್ನತೆಯು ತೋರುತಿದ್ದಿತೇ ವಿನಾ ಯಾವ ಕೃತ್ರಿಮಭಾವವೂ ಕಾಣಲಿಲ್ಲ. ಆದುದರಿಂದ ಅವನು ಪ್ರಾಮಾಣಿಕನಿರಬಹುದೆಂದು ನಟೇಶನ ಮನಸ್ಸು ಸ್ವಲ್ಪಮಟ್ಟಿಗೆ ನಂಬುವಂತಾಯಿತು.

ನಟೇಶ—ಆ ಪೆಟ್ಟಿಗೆಯ ವಿಷಯವೇನು ?

ಪಲ್ಲವ—ನಟೇಶ, ನನಗೇನೂ ಗೊತ್ತಿಲ್ಲ. ಆದರೆ ಕೆಲವು ಸಂಗತಿಯುಂಟು. ಅದು ವಿಠಲನೊಬ್ಬನಿಗೆ ಮಾತ್ರ ಹೇಳತಕ್ಕದೆಂದು ನನಗೆ ಕಟಪ್ಪಣೆ. ನೋಡು, ಆ ವಿಧವಾದ ನಂಬಿಕೆಯನ್ನುಳಿಸಿಕೊಳ್ಳುವುದೇ ಒಳ್ಳೆಯದಲ್ಲವೆ ? ಒಬ್ಬರಿಗೊಂದು ಮಾತು ಕೊಟ್ಟರೆ ಪತ್ರ ಬರೆದುಕೊಟ್ಟುದಕ್ಕಿಂತ ಹೆಚ್ಚಾಗಿ ಅದನ್ನು ಗೌರವಿಸಬೇಕೆಂಬುದೇ ನನ್ನ ಮತ.

ನಟೇಶ—ನನಗೋಸ್ಕರ ನಿನ್ನ ಪ್ರತಿಜ್ಞೆಗೂ ವಾಗ್ದಾನಕ್ಕೂ ವಿರೋಧವಾಗಿ ನಡೆಯಬೇಕೆಂಬುದಿಲ್ಲ. ಆದರೆ ಒಂದು ಸಂಗತಿಯುಂಟು. ವಿಠಲನು ಯಾವುದೊಂದು ರಹಸ್ಯ ವಿಷಯವನ್ನೂ ನನ್ನ ಸಂಗಡ ಹೇಳದಿರುವುದಿಲ್ಲ. ಆದುದರಿಂದ ಯಾವ ವಿಧವಾದ ಪೆಟ್ಟಿಗೆಯೆಂದು ನಾನು ನಿನ್ನನ್ನು ಕೇಳಬಹುದೊ?

ಪಲ್ಲವ—ಅದನ್ನು ಹೇಳುವುದರಲ್ಲೇನೂ ಬಾಧೆ ತೋರಲಿಲ್ಲ. ಅದು ಅದ್ಭುತಮಹಿಮೆಯುಳ್ಳ ಪಚ್ಚೆಯ ಪೆಟ್ಟಿಗೆ. ಅದರಲ್ಲಿ ಅತ್ಯಂತ ರಹಸ್ಯಗಳುಂಟೆಂಬುದು ನನ್ನ ನಂಬಿಕೆ.

ನಟೇಶ—ಅಂತಹುದೊಂದು ಪೆಟ್ಟಿಗೆಯು ನಮ್ಮ ಯಜಮಾನ ವಿಠಲ ಮೂರ್ತಿಯ ಬಳಿಯಲ್ಲುಂಟು.

ಪಲ್ಲವ—ಹಾಗಾದರೊಳ್ಳೆಯದು.

ನಟೇಶ—ಈಗ ನಮ್ಮ ವಿಠಲನು ನಡೆಯಿಸುತ್ತಿರುವ ಕಾಂತನಾಥನ ಮರಣ ವಿಷಯಕವಾದ ಮೊಕದ್ದಮೆಯಲ್ಲಿ ನೀನೇನಾದರೂ ಹೇಳತಕ್ಕುದ್ದುಂಟೋ?

ಪಲ್ಲವ—ಎಷ್ಟೋ ಇದೆ. ಬಾ, ಆಗಲಿ. ನೀನು ನನ್ನ ಕಥೆಯನ್ನು ಕೇಳಿದರೆ ನಿನಗೆ ನಂಬಿಕೆಯೋ ಹುಟ್ಟದಿರಬಹುದು.

ನಟೇಶ—ನಾವಿಕಮಹಾಶಯ, ಹಡಗಿನ ಪಯಣದಲ್ಲಿ ಹೊತ್ತು ಕಳೆಯುವುದಕ್ಕೋಸ್ಕರ ನೀನು ಹೇಳುತ್ತಿದ್ದ ಕಟ್ಟು ಕಥೆಗಳನ್ನು ಹೊರತು ಉಳಿದ ಯಾವುದನ್ನು ನೀನು ಹೇಳಿದರೂ ನಾನು ನಂಬುತ್ತೇನೆ.

ಪಲ್ಲವ—ಅಯ್ಯೋ ಅಯ್ಯೋ! ಅವು ನಕಲಿಯ ಕಥೆಗಳು. ಇದಕ್ಕೂ ಅವಕ್ಕೂ ಎಲ್ಲಿಂದೆಲ್ಲಿಗೆ? ಇದು ಪರಮಾದ್ಭುತವಿಷಯ. (ಆಲಿಸಿ) ಅಗೊ! ಅದೇನು ಸದ್ದು!

ಪಲ್ಲವನು ಕುರ್ಚಿಯಿಂದ ಥಟ್ಟನೆ ಎದ್ದು ಒಂದೇ ಉಸಿರಿನಲ್ಲಿ ಓಡಿ ಕದವನ್ನು ತೆರೆದನು. ಏನೋ ಕಾಣಿಸಿತು. ಅವನು ನಾವಿಕಪತಿಯಾದರೂ ಎದೆಗುಂದಿ ಗಾಬರಿಗೊಂಡು ಒಂದು ಹೆಜ್ಜೆ ಹಿಂದಕ್ಕೆ ಸರಿದನು. ಆಗ ಚೆನ್ನಾಗಿ

ನೋಡಲು ಒಂದಾನೊಂದು ವ್ಯಕ್ತಿಯು ಕಂಡುಬಂದಿತು. ಬಟ್ಟೆಬರೆಗಳೆಲ್ಲ ಬದಿ. ಮುಖದಲ್ಲಿ ರಕ್ತ ಸುರಿಯುತ್ತಿದ್ದಿತು. ನರಳುತ್ತ ಬಂದು ಆಫೀಸಿನ ನಡುವೆ ನೆಲಕ್ಕೆ ಬಿದ್ದು ತೆಪತೆಪನೆ ಕೈಕಾಲುಗಳನ್ನು ಬಡಿಯಲಾರಂಭಿಸಿತು.

ನಟೇಶನು ಈ ಅತ್ಯಾಹಿತದಲ್ಲೂ ಬಲು ಚಟುವಟಿಕೆಯಿಂದ ಸರ್‍ರನೆ ಓಡಿ ಹೋಗಿ ಒಂದು ಗಾಜಿನ ಲೋಟದಲ್ಲಿ ನೀರನ್ನೂ ಸ್ಪಂಜನ್ನೂ ತಂದು ನರಳುತ್ತಿದ್ದ ಆ ವ್ಯಕ್ತಿಯ ಮುಖವನ್ನು ಚೆನ್ನಾಗಿ ತೊಳೆದು ನೋಡಿದನು. ಅದುವರೆಗೂ ಆ ವ್ಯಕ್ತಿ ಯಾರೆಂಬುದನ್ನು ಗುರುತಿಸುವುದೇ ಕಷ್ಟವಾಗಿದ್ದಿತು. ಈಗ ಕರೆಕಟ್ಟಿದ್ದ ರಕ್ತವನ್ನು ತೊಳೆದು ಪರೀಕ್ಷಿಸಲು ಯಜಮಾನ ವಿಠಲನೇ ಆ ವ್ಯಕ್ತಿಯೆಂದು ಗೊತ್ತಾಯಿತು. ಆಗ ನಟೇಶನಿಗೆ ಏಕಕಾಲದಲ್ಲೇ ಹರ್ಷವಿಷಾದಗಳುಂಟಾದುವು. ಬಳಿಕ 'ವಿಠಲ' ಎಂದು ಗಟ್ಟಿಯಾಗಿ ಕೂಗಿದ್ದಲ್ಲದೆ, ಅಯ್ಯೋ! ಪಾಪಿಗಳು ನಮ್ಮ ವಿಠಲನನ್ನು ಕೊಲ್ಲಲೆಳಸಿದ್ದರಲ್ಲಾ! ಅಥವಾ ಕೊಲ್ಲುತ್ತಲೇ ಇದ್ದರಲ್ಲಾ! ಅಹಾ! ಆ ಕೊಲೆಪಾತಕಿಗಳನ್ನು ನಾನೇನಾದರೂ ಕಂಡರೇನೆ! —ಎಂದು ಹೇಳುತ್ತ ತುಂಬ ಮರುಗಿದನು.

---

# ಹನ್ನೊಂದನೆಯ ಪರಿಚ್ಛೇದ

ಇನ್ನು ಮುಂದಕ್ಕೇನು ಮಾಡಬೇಕೆಂಬುದು ನಟೇಶನಿಗೆ ಗೊತ್ತಾಗಲಿಲ್ಲ. ಆದರೆ ನೌಕಾಧ್ಯಕ್ಷನಾದ ಪಲ್ಲವನು ಮಾತ್ರ ಶಾಂತನಾಗಿ ವಿಠಲನ ನಾಡಿಯನ್ನೂ ಗಾಯಗಳನ್ನೂ ಪರೀಕ್ಷಿಸಿದನು. ಪ್ರಾಣಭಯವೇನೂ ತೋರದಿದ್ದರೂ ಎಡಗಣ್ಣಿನ ಬಳಿಯಲ್ಲಿ ಮಾತ್ರ ಬಲವಾಗಿ ಕತ್ತರಿಸಿಹೋಗಿದ್ದಿತು. ಅದನ್ನು ನೋಡಿದರೆ ಅವನ ತಲೆಯ ಚಿಪ್ಪನ್ನು ಕಳಚಿ ತೆಗೆಯುವುದಕ್ಕೋಸ್ಕರ ಹರಿತವಾದ ಒಂದು ಆಯುಧದಿಂದ ಎಬ್ಬಿದಂತೆ ತೋರುತ್ತಿದ್ದಿತು. ಇಷ್ಟೇ ಅಲ್ಲದೆ ಒಂದು ತೋಳಿನ ಮೂಳೆಗೆ ಬಹಳ ಪೆಟ್ಟು ತಗಲಿ ಅಲ್ಲಾಡಿಸುವುದಕ್ಕೂ ಅಸಾಧ್ಯವಾಗಿದ್ದಿತು.

ಪಲ್ಲವನು ಇಷ್ಟನ್ನೆಲ್ಲ ಪರೀಕ್ಷಿಸಿದನಂತರ—ನಟೇಶ ಹೋಗು, ಬೇಗ ವೈದ್ಯ ನನ್ನು ಕರೆದುಕೊಂಡು ಬಾ. ವಿಠಲನು ಇನ್ನೂ ಸತ್ತಿಲ್ಲ. ಏಟೇನೋ ಬಲ ವಾಗಿ ಬಿದ್ದಿದೆ.

ನಟೇಶ—ಆ ಹಾಳುಪೆಟ್ಟಿಗೆಯಿಂದಲೇ ಇಷ್ಟು ಅನರ್ಥ—ಎನ್ನುತ್ತ ಹೋಗಿ ಉತ್ತರಕ್ಷಣದಲ್ಲೇ ಶಸ್ತ್ರವೈದ್ಯ (A surgeon) ನನ್ನು ಕರೆತಂದನು. ಆತನು ವಿಶೇಷ ಶ್ರಮಪಟ್ಟು ಔಷಧೋಪಚಾರಗಳಿಂದ ಸತ್ಕರಿಸಲು ಸುಮಾರು ಒಂದು ಘಂಟೆಯ ಮೇಲೆ ವಿಠಲನಿಗೆ ಜ್ಞಾನಬಂದಿತು. ಆದರೆ ತನಗೇನು ನಡೆಯಿ ತೆಂಬುದು ವಿಠಲನಿಗೆ ಸ್ಪಷ್ಟವಾಗಿ ಗೊತ್ತಿರಲಿಲ್ಲ. ಶಾಂತಕುಮಾರಿಯೆಂಬ ಯಾವಳೊ ಒಬ್ಬ ಸ್ತ್ರೀಯು ಕುಮುದಿನೀ ನದೀತೀರದ ಮಂಗಳತರಂಗವೆಂಬ ಮನೆಗೆ ತಾನು (ವಿಠಲನು) ಬರಬೇಕೆಂದೂ ತನ್ನ ಸಂಗಡ ರಹಸ್ಯವಾದೊಂದು ಮೊಕದ್ದಮೆಯ ವಿಷಯವನ್ನು ಯೋಚಿಸಬೇಕಾಗಿದೆಯೆಂದೂ ಕಾಗದ ಬಂದು ದರಿಂದ ಅಲ್ಲಿಗೆ ಹೋಗಬೇಕಾಯಿತು. ವಿಠಲನು ಆ ಮನೆಯ ಬಾಗಿಲಿಗೆ ಹೋಗುವಾಗ್ಗೆ ಸರಿಯಾಗಿ ಒಬ್ಬ ಸ್ತ್ರೀಯು ಬಂದು ಕದವನ್ನು ತೆರೆದಳು. ಅವಳು ವದನಾಲಂಕಾರಕ್ಕೋ ಅಥವಾ ಮತ್ತೆ ಯಾವ ಉದ್ದೇಶದಿಂದಲೋ ಮುಖಕ್ಕೆ ಬಣ್ಣವನ್ನು (Face Powder) ಹತ್ತಿಸಿಕೊಂಡಿದ್ದಂತೆ ತೋ ರಿತು. ಒಳಗೆ ನಡುಮನೆಯಕಡೆ ಹೋಗಲು ಮಾರ್ಗವು ಬಲುಕತ್ತಲಾಗಿ ದ್ದಿತು. ಅಲ್ಲಿಗವನು ಅಡಿಯಿಟ್ಟ ಕೂಡಲೆ ಇಬ್ಬರು ಬಂದು ಮೇಲೆ ಬಿದ್ದರು. ಬಳಿಕ ಪರಸ್ಪರ ಗುದ್ದಾಟಕ್ಕೂ ಕುಸ್ತಿಗೂ ಮೊದಲಾಯಿತು. ಅವರಿಬ್ಬರು, ಇವನೊಬ್ಬ. ಆದುದರಿಂದ ವಿಠಲನ ಯತ್ನ ಸಾಗಲಿಲ್ಲ. ಅವರಿಬ್ಬರೂ ಇವನನ್ನೆತ್ತಿಕೊಂಡು ಹೊಳೆಯ ಆಚೆಯ ಕರೆಗೈದಿ ಮುಂದಕ್ಕೆ ಒಂದು ಗುಡ್ಡದ ಮೇಲಕ್ಕೆ ನಡೆದರು. ಬಿಡಿಸಿಕೊಳ್ಳಬೇಕೆಂದು ಒದೆದಾಡಿದುದೆಲ್ಲ ವ್ಯರ್ಥ ವಾಯಿತು. ಎಷ್ಟೋ ಕೂಗಿಕೊಂಡನು. ಆದರೂ ಯಾರೂ ಸಹಾಯಕ್ಕೆ ಬರ ಲಿಲ್ಲ. ಅವರಿಬ್ಬರೂ ಮೌನವಾಗಿ ಎತ್ತಿಕೊಂಡು ಹೋಗಿ ಗುಡ್ಡದ ಮೇಲಿನಿಂದ ಒಂದು ಕಮರಿಗೆ ಎಸೆದರು. ಆದರೆ ಜಗದೀಶ್ವರನ ಅನುಜ್ಞೆಯಿಲ್ಲದೆ ಅಣು ರೇಣುತೃಣಕಾಷ್ಠಗಳೂ ಚಲಿಸಲಾರವಲ್ಲವೆ? ಹಾಗೆ ತಳ್ಳಲ್ಪಟ್ಟ ನಿರ್ಭಾಗ್ಯ ನಾದ—ಓಹೋ! ಅವನೆಂದಿಗೂ ನಿರ್ಭಾಗ್ಯನಲ್ಲ, ವಿಠಲನು ಪುಣ್ಯವಶಾತ್ ಒಂದು

ಮರದ ಮೇಲೆ ಬಿದ್ದನು. ಆದುದರಿಂದ ಪ್ರಾಣವಾದರೂ ಉಳಿಯಿತು. ಅನಂತರ ಅವರು ಹೇಗಾದರೂ ವಿಠಲನು ಸತ್ತೇ ಇರಬೇಕೆಂದು ದೃಢವಾಗಿ ನಂಬಿ ಸಂತೋಷದಿಂದ ಹಿಂದಿರುಗಿದರು. ಆ ಹತ್ಯಾಕಾರಿಗಳು ಹೊರಟು ಹೋದ ಸುಳಿವು ತಿಳಿದ ಮೇಲೆ ವಿಠಲನು ತನ್ನ ಆಫೀಸಿಗೆ ಒಂದೇ ಉಸಿರಿನಲ್ಲಿ ಓಡಿ ಬಂದನು. ಮೇಲಿಂದ ಆ ಕಲ್ಲುಕಮರಿಯಲ್ಲಿ ಬಿದ್ದಾಗ ತೋಳಿಗೆ ಪೆಟ್ಟು ತಗುಲಿದುದರಿಂದ ಅದು ಮುರಿದುಹೋಯಿತಲ್ಲದೆ ತಲೆಗೂ ಪ್ರಬಲವಾದ ಪೆಟ್ಟು ಉಂಟಾಯಿತು. ಇಷ್ಟು ನಡೆದ ನಿಜಾಂಶ.

ವಿಠಲನು ಸ್ವಲ್ಪ ತೆಪ್ಪತ್ತುಕೊಳ್ಳಲು ಪಲ್ಲವನು ನಟೇಶನಂ ಕುರಿತು_ಅಯ್ಯ ನಾನು ಪುನಃ ಯಾವಾಗಲಾದರೂ ಬಂದು ವಿಠಲನ ಸಂಗಡ ಮಾತಾಡುತ್ತೇನೆ, ಎಂದು ಹೇಳಿ ಹೊರಡಲುಜ್ಜುಗಿಸಿದನು. ಈ ಮಧ್ಯೆ ವಿಠಲನಿಗೆ ಜ್ಞಾನಬಂದ ಮೇಲೆ ನಟೇಶನು ಪಲ್ಲವನು ಬಂದಿರುವ ಉದ್ದೇಶವನ್ನು ಹೇಳಿ ಪರಿಚಯ ಮಾಡಿಸಿದ್ದನು. ಈಗ ಪಲ್ಲವನು ನಟೇಶನ ಸಂಗಡ ಹೇಳಿದ, ಮೇಲೆ ಕಂಡ ಪಿಸುಮಾತನ್ನು ಹಾವಿನ ಕಿವಿಯುಳ್ಳ ವಿಠಲನು ಆಲಿಸಿ ಪಲ್ಲವನಂ ಕುರಿತು_ಎಲೈ, ನಾವಿಕಪತಿ, ನೀನು ಹೊರಡಬೇಡ. ನೀನು ಬಂದ ಕೆಲಸವೇನೋ ದಯವಿಟ್ಟು ತಿಳಿಸು.

ಪಲ್ಲವ_ನಿನಗೆ ಇದರಿಂದೇನೂ ಆಯಾಸವಾಗದಿದ್ದರೆ ಅವಶ್ಯಕವಾಗಿ ಹೇಳುವೆನು.

ವಿಠಲ–ನನಗೆ ಇಂತಹ ಪೆಟ್ಟುಗಳಿಗೇನೂ ಕಡಿಮೆಯಿಲ್ಲ. ಜನಗಳ ಯೋಗಕ್ಷೇಮಚಿಂತೆಗೆ ಬದ್ಧಕಂಕಣರಾದ ಪತ್ತೇದಾರರು ಸ್ವಸುಖದ ಮೇಲೆ ದೃಷ್ಟಿಯಿಟ್ಟು ಇಂತಹುದಕ್ಕೆಲ್ಲ ಹಿಂದೆಗೆದರಾದೀತೆ? ನಮ್ಮ ಕರ್ತವ್ಯವನ್ನು ನಾವು ಮಾಡುವುದರಲ್ಲಿ ಇದಕ್ಕಿಂತ ಹೆಚ್ಚಾದ ಇನ್ನು ಯಾವ ಯಾವ ಗಂಡಗಳನ್ನನುಭವಿಸಬೇಕಾಗಿದೆಯೋ ಏನೋ! ಈಗ ನನ್ನಿಂದಾಗಬೇಕಾದುದೇನು?

ಪಲ್ಲವ_ನಾನು ನಿನ್ನೊಬ್ಬನ ಹೊರತು ಮತ್ತಾರೆದುರಿಗೂ ಆ ಸಂಗತಿಯನ್ನು ಹೇಳುವುದಿಲ್ಲವೆಂದು ಮಾತುಕೊಟ್ಟಿರುವೆನಲ್ಲಾ!

ವಿಠಲನು_ನಾನು ಎಂತಹ ರಹಸ್ಯವನ್ನೂ ನಮ್ಮ ನಟೇಶನಿಗೆ ತಿಳಿಸದಿರುವುದಿಲ್ಲ.

ನಟೇಶ—ಮಹಾಶಯ, ಇಗೋ! ನಾನು ಹೊರಕ್ಕೆ ಹೊರಡುತ್ತೇನೆ, ಮಾತಾಡಿಕೊಳ್ಳಿರಿ.

ವಿಠಲನಿಗೂ ಪಲ್ಲವನಿಗೂ ಒಂದು ಘಂಟೆ ಹೊತ್ತು ಸಂಭಾಷಣೆಯಾದ ನಂತರ ಪಲ್ಲವನು ಹೊರಕ್ಕೆ ಬಂದು—ನಟೇಶ, ಕ್ಷಮಿಸು. ಇನ್ನು ನೀನು ಬರಬಹುದು—ಎನ್ನಲು ನಟೇಶನು ಒಳಕ್ಕೆಬಂದನು. ಬಂದು ವಿಠಲನ ಮುಖವನ್ನು ನೋಡಲು ಆತನು ಯಾವಾಗ್ಗಿಂತ ಗಂಭೀರವಾಗಿ ಏನನ್ನೋ ಯೋಚಿಸುತ್ತಿರುವುದಾಗಿ ಕಂಡುಬಂದಿತು.

ವಿಠಲ—ನಟೇಶ ಹಡಗೊಡೆಯನಾದ ಪಲ್ಲವನು ಹೃದಯಭೇದಕವಾದೊಂದು ಕಥೆಯನ್ನು ಹೇಳಿದನು ಅವೆಲ್ಲ ದಿಟವಾಗಿದ್ದಲ್ಲಿ ದೈವಕೃಪೆಯಿಂದ ನಮ್ಮ ಕೇಸಿಗೆ ಬೇಕಾದ ಸಾಧನ (Evidences) ಗಳೆಲ್ಲ ದೊರೆತಂತೆಯೇ.

ನಟೇಶ—ಒಳ್ಳೆಯದು. ಅದು ಚಾರುಚಂದ್ರನ ಕುಟುಂಬದ ವಿಷಯವೊ? ಯಾರದು?

ವಿಠಲ—ಆಹಾ! ಕಾಂತನಾಥನದೇ.

ಪಲ್ಲವ—ಸರಿ ಹಾಗಾದರೆ, ಸಂದೂಕ ಜೋಕೆಯಾಗಿದೆ. ಹುಡುಗಿ ಸುರಕ್ಷಿತಳಾಗಿದಾಳೆ.

ವಿಠಲ—ನೀನು ಹೇಳಿದುದನ್ನು ನಾನು ನೋಡಿಕೊಳ್ಳುತ್ತೇನೆ. ಆದರೆ ಈ ಮಧ್ಯೆ ನೀನು ನನ್ನನ್ನು ಕಂಡುದನ್ನು ಯಾರಿಗೂ ಹೇಳಕೂಡದು.

ಪಲ್ಲವ—ನಿನ್ನ ಬುದ್ಧಿವಾದವನ್ನನುಸರಿಸುವುದು ನನ್ನ ಭಾರ, ಎಂದು ಇಬ್ಬರನ್ನೂ ವಂದಿಸಿ ಹೊರಟುಹೋದನು.

ತನ್ನ ಕೇಸಿಗೆ ಸಹಾಯಕನಾದ ಪಲ್ಲವನು ಹೊರಟುಹೋದಮೇಲೆ ವಿಠಲನು ಒಂದು ಕಾಗದವನ್ನು ಬರೆದು ಅದನ್ನು ಕೈಯಲ್ಲಿಟ್ಟುಕೊಂಡು ನಟೇಶನಂ ಕುರಿತು—ಅಯ್ಯ, ಕೇಳು, ಕಾಂತನಾಥನಿಗೆ ಒಬ್ಬ ಅಣ್ಣನಿರುವನಂತೆ.

ನಟೇಶ—ಹೌದು. ಅವನ ಹೆಸರು ವನಜಚಂದ್ರ, ಅವನು ಬಹಳ ತುಂಟ, ಜೂಜುಕೋರ, ದುಂದುಗಾರ, ಕುಡುಕ.

ವಿಠಲ_ಇಗೋ, ಈ ಕಾಗದವನ್ನೋದುತ್ತೇನೆ ಕೇಳು. ಇದನ್ನು ಲಲಿತ ಪಟ್ಟಣದಲ್ಲಿರುವ ನನ್ನ ಮಿತ್ರನಾದೊಬ್ಬ ಪ್ರಸಿದ್ಧ ಪತ್ತೆದಾರನಿಗೆ ಕಳುಹಿಸತಕ್ಕದು 'ವನಜಚಂದ್ರನು ನ್ಯಾಯವಾದ ಹಕ್ಕುದಾರನಲ್ಲವೆಂದೂ ಕಾಂತನಾಥನೇ ನಿಜವಾದ ಹಕ್ಕುದಾರನೆಂದೂ ಕೇಳುತ್ತೇನೆ. ಈ ವಿಷಯವನ್ನು ಚೆನ್ನಾಗಿ ತಿಳಿದು ದಯವಿಟ್ಟು ಇನ್ನೂ ವಿಶೇಷ ಸಂಗತಿಗಳೊಡನೆ ವಿಶದವಾಗಿ ಬರೆಯಿಸಬೇಕೆಂದು ಕೋರುತ್ತೇನೆ.' ಹೀಗೆ ಕಾಗದವನ್ನು ಓದಿದನಂತರ, ನಟೇಶ_ಹಾಗಿದ್ದರೆ ಕಾಂತನಾಥನನ್ನು ಕೊಲೆ ಮಾಡಿದುದಕ್ಕೆ ಸರಿಯಾದ ಕಾರಣವಿದ್ದಂತಾಯಿತು.

ವಿಠಲ_ವನಜಚಂದ್ರನೇ ಈ ದುಷ್ಕೃತ್ಯವನ್ನು ಯೋಚಿಸಿದವನಿರಬಹುದು. ದಿಟ, ಅವನೇ ಎಂದು ನನಗೆ ತೋರುತ್ತಿದೆ. ಚಾರುಚಂದ್ರನು ಉಡುಗಿದ ಮುದುಕ, ಅವನೇನು ಇಂದೋ ನಾಳೆಯೊ! ಮುಂದೆ ತಂದೆ ಸತ್ತಮೇಲೆ ಕಾಂತನಾಥನು ತನ್ನ ಹುಟ್ಟು ಪೂರ್ವೋತ್ತರವನ್ನೆಲ್ಲ ಎತ್ತಿದರೆ ತನಗೆ (ವನಜಚಂದ್ರನಿಗೆ) ತೊಂದರೆಯಾಗುವುದೆಂದೂಹಿಸಿ ಕಾಂತನಾಥನನ್ನು ಕೊಲ್ಲಿಸಲೆಳಸಿರಬಹುದು.

ನಟೇಶ_ಇದನ್ನು ಪಲ್ಲವನು ನಿನ್ನ ಕೂಡೆ ಹೇಳಿದನೊ?

ವಿಠಲ_ಹೌದು, ಇಷ್ಟೇ ಅಲ್ಲ, ಇನ್ನೂ ಮುಖ್ಯವಾದುದನ್ನೆಷ್ಟನ್ನೋ ಹೇಳಿದನು. ಅಂತು ಪಚ್ಚೆಯ ಪೆಟ್ಟಿಗೆಯು ಬಹು ಅಮೂಲ್ಯವಾದ ಶ್ರೇಷ್ಠವಸ್ತು.

ನಟೇಶ_ಗಲಿಬಿಲಿ ಮಾಡುವ ಆ ಹಾಳು ಪೆಟ್ಟಿಗೆಯು ನನಗೇನ್ನೋ ಅರೆಕಾಸಿನ ಬೆಲೆಗೂ ಬಾಳದು. ಅದನ್ನು ಸಮುದ್ರಕ್ಕಾದರೂ ಎಸೆದುಬಿಟ್ಟರೆ ಕ್ಷೇಮವಾಗಿರಬಹುದು.

ವಿಠಲ_ನೀನು ಹಠಹಿಡಿದು ಯಾವಾಗಲೂ ಅದನ್ನು ದ್ವೇಷಿಸುತಿದ್ದೀಯೆ. ಆಗಲಿ ನಟೇಶ, ನನ್ನ ಹೆಸರಿನಲ್ಲಿ ಈ ಟೆಲಿಗ್ರಾಫನ್ನು ಕೊಟ್ಟುಬಾ. ಪ್ರಫುಲ್ಲೆಯೊಡನೆ ಸ್ವಲ್ಪ ಮಾತಾಡಿಕೊಂಡು ಬರಬೇಕಾಗಿರುವುದರಿಂದ ನಾನು ಈ ರಾತ್ರಿ ಹಳ್ಳಿಗೆ ಹೊರಡುತ್ತೇನೆ. ಇಲ್ಲಿನವರ ಮೇಲೆ ನೀನೊಂದು ಕಣ್ಣಿಟ್ಟೇ ಇರಬೇಕು. ಯಾರು ಕೇಳಿದರೂ ವಿಠಲನು ಏನಾದನೋ ಗೊತ್ತಿಲ್ಲವೆಂದು ಹೇಳುತ್ತಿರು. ನಾನು ಹೊಳೆಯಲ್ಲಿ ಬಿದ್ದು ಸತ್ತನೆಂದು ಅವರು ತಿಳಿದುಕೊಳ್ಳಲಿ.

ನಟೇಶನು ಹಾಗೆಯೇ ಒಪ್ಪಿಕೊಂಡು ಟೆಲಿಗ್ರಾಫ್ ಕೊಡುವುದಕ್ಕೆ ಹೋದನು. ವಿಠಲನು ರೈಲ್ವೇಸ್ಟೇಷನ್ನಿಗೆ ಹೋದನು. ವಿಠಲನಿಗೆ ಎಂದೂ ಇಲ್ಲದಷ್ಟು ಮನ ಸ್ತೃಪ್ತಿಯು ಈಗ ಉಂಟಾಗಿದೆ. ಈ ವಿಧವಾದ ಸಂತೋಷಕ್ಕೂ ತೃಪ್ತಿಗೂ ಪಲ್ಲವನು ತಿಳಿಸಿದ ಸುವಾರ್ತೆಯೇ ಕಾರಣ. ಈಗ ಸ್ವಲ್ಪಕಾಲ ವಿಶ್ರಾಂತಿ ಸುಖವನ್ನನುಭವಿಸಬೇಕೆಂದು ವಿಠಲನು ಯೋಚಿಸಿದನು. ಈ ಮಧ್ಯೆ ವಿಠಲನು ವಾರಣಲಾಲನಿಗೆ ಒಂದು ಕಾಗದವನ್ನು ಬರೆದು (ಸೋದರಮಾವನಾದ ವಾಗೀಶನು ಬರೆದಂತೆ) ಅದರಲ್ಲಿ ನಿಮ್ಮ ಸೋದರಮಾವನಾದ ತನಗೆ ಕೆಲವುಕಾಲದ ಮಟ್ಟಿಗೆ ಸಮುದ್ರಮಾರುತವು ಆವಶ್ಯಕವಾಗಿರುವುದರಿಂದ ತೀರಪ್ರಾಂತಕ್ಕೆ ಹೋಗಿರುವುದಾಗಿಯೂ ಈ ಸಂಗತಿಯನ್ನು ಪ್ರಫುಲ್ಲೆ ( ಕೃತಕಪ್ರಫುಲ್ಲೆಯಾದ ಸೌದಾಮಿನಿಗೆ ) ಮುಂತಾದವರಿಗೆ ತಿಳಿಸಬೇಕೆಂದೂ ಕೇಳಿದನು. ವಿಠಲನು ಸ್ವಲ್ಪದಿನ ಸುಧಾರಿಸಿಕೊಂಡಮೇಲೆ ಪುನಃ ಸೋದರಮಾವನಂತೆ ವೇಷಧಾರಿಯಾಗಿ ಬಂದು ವಾರಣ ಸೌದಾಮಿನಿ ಮುಂತಾದವರೊಡನೆ ಅದೇ ಮನೆಯಲ್ಲಿದ್ದು ಮುಂದೆ ತನ್ನ ಕೇಸಿಗೆ ಸಂಬಂಧಪಟ್ಟುದನ್ನೆಲ್ಲ ಸರಿಪಡಿಸಿಕೊಳ್ಳಬೇಕೆಂದೂ ಆಗೇನಾದರೂ ಅವರು ತನ್ನನ್ನು ಗುರುತಿಸಲಾರದಿದ್ದರೆ ಮಾಧವ ಮುಂತಾದವರನ್ನು ಬಯಲಿಗೆಳೆಯಬೇಕೆಂದೂ ಉದ್ದೇಶಿಸಿಕೊಂಡಿದ್ದನು.

ಪ್ರಫುಲ್ಲೆಯು ಬಲು ಸಂತೋಷದಿಂದ ವಿಠಲಮೂರ್ತಿಯನ್ನು ಬರಮಾಡಿಕೊಂಡು ಸಾಕ್ಷಾತ್ ಔರಸಪುತ್ರಿಗಿಂತ ಅತಿಶಯವಾಗಿ ಆದರಿಸಿದಳು. ಆತನಿಗೆ ಸಂಭವಿಸಿದ್ದ ಅಪಾಯವನ್ನು ಕೇಳಿ ಮಮ್ಮಲ ಮರುಗಿದಳು. ವಿಠಲನು ಹೊಸ ಮಂಗಲವನ್ನು ತಲಪಿದ ಎರಡು ದಿನಗಳಮೇಲೆ ಒಂದುದಿನ ಸಂಜೆಯಲ್ಲಿ ಒಂದು ಜಾರುಕುರ್ಚಿ (Eesy chair) ಯಮೇಲೆ ಕುಳಿತು ಒರಗಿಕೊಂಡಿದ್ದನು. ಆ ಅಂಗಳದಲ್ಲಿ ಸಮೀಪದ ಹಲಸಿನ ಮರದಡಿಯಲ್ಲಿ ಒಂದು ಬೆಂಚಿನಮೇಲೆ ಪ್ರಫುಲ್ಲೆಯು ಕುಳಿತು ಏನೋ ಒಂದು ಪುಸ್ತಕವನ್ನೋದುತಿದ್ದಳು. ಈ ಪತ್ತೇದಾರನಿಗೆ ಹಿಂದುಗಡೆಯಿಂದ ಏನೋ ಕೇಳಿಸಿತು. ಈತನು ಸುತ್ತಲೂ ನೋಡುವಲ್ಲಿ ಬೇಲಿಯಮೇಲಿಂದ ಒಂದು ಪುಟ್ಟಕಲ್ಲು ಬಂದು ಪ್ರಫುಲ್ಲೆಯ ಕಾಲಿಗೆ ತಗುಲಿತು. ಅದರ ಸುತ್ತಲೂ ಕಾಗದವನ್ನು ಸುತ್ತಿದ್ದಿತು. ಪ್ರಫುಲ್ಲೆಯು ಸಣ್ಣ ಧ್ವನಿಯಲ್ಲಿ ಏನನ್ನೋ ಅಂದುಕೊಂಡು ಅದನ್ನು ಕೈಗೆ ತೆಗೆದುಕೊಂಡಳು. ಮುಂದಕ್ಕೆ ಅವ

ಳೇನು ಮಾಡುವಳೋ ತಿಳಿಯಬೇಕೆಂದು ವಿಠಲನು ಕಣ್ಣು ಮುಚ್ಚಿ ನಿದ್ರೆಯನ್ನು ನಟಿಸುತ್ತಿದ್ದನು. ಇಷ್ಟಾಗುವಾಗ್ಗೆ ಸಂಜೆಗತ್ತಲೆಯ ಕಾವಳವು ಹೆಚ್ಚುತ ಬಂದಿತು. ಪ್ರಫುಲ್ಲೆಯು ಮೊದಲು ಅಧೀರೆಯಾದಳು. ಆದರೂ ಯಾರೂ ಕಾಣಲಾರರೆಂದು ಭಾವಿಸಿ ಆ ಕಲ್ಲಿಗೆ ಸುತ್ತಿದ್ದ ಕಾಗದವನ್ನೋದಿಕೊಂಡಳು. ಓದುತ್ತ ಬಂದಂತೆಲ್ಲ ಮುಖವು ಸ್ವಲ್ಪ ಕಳೆಗುಂದುತಿದ್ದುದಲ್ಲದೆ ಕೈ ಕಾಲುಗಳು ನಡಗುತ ಬಂದವು ಆ ಮೇಲೆ ಅ ಕಾಗದವನ್ನು ಮಡಿಸಿ ತನ್ನ ಷರಟು ಕುಪ್ಪಸ (Jacket) ದ ಜೇಬಿನಲ್ಲಿಟ್ಟುಕೊಂಡು ವಿಠಲನ ಬಳಿಗೆ ಹೋಗಿ ನೋಡಿದಳು. ಆದರೆ ಏನೂ ಮಾತಾಡಲಿಲ್ಲ. ಪ್ರಫುಲ್ಲೆಯು ಅವನಿಗಾಯಾಸ ಕೊಡಲಿಲ್ಲ. ಆಕೆಯು ಇನ್ನು ತನ್ನ ಕಷ್ಟ ಹರಿಯಿತೆಂಬುದನ್ನು ಸೂಚಿಸಿದಳೋ ಎಂಬಂತೆ ನಿಟ್ಟುಸಿರಿಟ್ಟು ಹೆಬ್ಬಾಗಿಲ ಹಾದಿಯಲ್ಲೇ ಹೋಗಿ ಒಂದು ಅರಣ್ಯವನ್ನು ಹೊಕ್ಕು ಬಳಿಕ ಬೇಗ ಬೇಗ ಓಡಲಾರಂಭಿಸಿದಳು.

ವಿಠಲ—ಓಹೋ! ಈ ವೇಳೆಯಲ್ಲಿ ಕೋಮಲಾಂಗಿಯಾದ ಈ ಹರೆಯದ ಹುಡುಗಿಯು ಮನೆಯಿಂದ ಹೊರಗೆ ಹೊರಟು ಕಾಡಿಗೆ ಹೋಗುವುದೆಂದರೇನು! ಈಗ ಯಾವನೋ ಒಬ್ಬನು ಅವಳಿಗೊಂದು ಕಾಗದವನ್ನೆಸೆದಿದ್ದನು. ಆಗಲಿ— ಎಂದುಕೊಂಡು ಕೈಯಲ್ಲೊಂದು ಬೆತ್ತವನ್ನು ಹಿಡಿದುಕೊಂಡು ಬೇಗಬೇಗ ಹೊರಟು ಪ್ರಫುಲ್ಲೆಯನ್ನು ಸಮೀಪಿಸುತ್ತ ಬಂದನು. ಆದರೆ ಆವಳು ತನ್ನನ್ನು ನೋಡಿಬಿಟ್ಟಾಳೆಂದು ಸ್ವಲ್ಪ ಸ್ವಲ್ಪ ಹಿಂದಾಗಿ ಮರಗಳ ಮರೆಯಲ್ಲಿ ನಡೆಯುತಿದ್ದನು.

ಆ ಕಾಂತಾರದಲ್ಲೊಂದು ವಿಸ್ತಾರವಾದ ಮೈದಾನ. ಅಲ್ಲಿಗೆ ಹೋಗಲು ಯಾವನೋ ಒಬ್ಬನು ಈಕೆಯ ಬಳಿಗೆ ಬಂದುದನ್ನು ವಿಠಲನು ದೂರದಿಂದ ನೋಡಿದನು. ಅವರಿಬ್ಬರಿಗೂ ಪ್ರೇಮಸೂಚಕವಾದ ಸರಸ ಸಲ್ಲಾಪಗಳು ನಡೆದುವು. ಇಲ್ಲಿಯವರೆಗೂ ಸಹಿಷ್ಣುವಾಗಿದ್ದ ವಿಠಲನು ಇನ್ನು ಸುಮ್ಮನಿರಲಾರದಾದನು. ಕಣ್ಣುಗಳು ತನಿಗೆಂಡಗಳನ್ನು ಸುರಿಸುವಂತಾದುವು. ಮನಸ್ಸಿನಲ್ಲಿ—ಅಹಾ! ಈ ಅತ್ಯಾಚಾರವನ್ನು ಮಾಡುತಿರುವವನಾರು? ಇರಲಿ. ಇದಕೆ ತಕ್ಕುದನ್ನು ಮಾಡಬಲ್ಲೆ—ಎಂದುಕೊಂಡನು. ಪ್ರಫುಲ್ಲೆಯೂ ಆ ಮನುಷ್ಯನೂ ಪಿಸುಮಾತಾಡಿಕೊಂಡರು. ಅದೇನೆಂಬುದು ವಿಠಲನಿಗೆ ತಿಳಿಯಲಿಲ್ಲ. ಅವನ ಮುಖವು ವಿಠಲನಿಗೆಂದೂ ಪೂರ್ವಪರಿಚಿತವಾದುದಲ್ಲ. ಅವರ ಸಂಭಾಷಣೆ

ಸುಮಾರು ಅರ್ಧಗಂಟೆ ನಡೆಯಿತು. ಕಟ್ಟಕಡೆಯಲ್ಲಿ ಪ್ರಫುಲ್ಲೆಯು ಗಟ್ಟಿಯಾಗಿ_ ನೀನು ಹೋಗಿ ಯಜಮಾನ ವಿಠಲನನ್ನು ಕಾಣು. ಕಾಣುತ್ತೀಯೊ ? ಎಂದಳು.

ಆ ಮನುಷ್ಯ_ಇನ್ನೂ ಈಗಲೇ ಬೇಡ. ಕೆಲವು ದಿನಗಳ ಮೇಲಾಗಲಿ. ನನ್ನ ಮಾತನ್ನು ನಂಬು. ಎಲ್ಲವೂ ಸರಿಹೋಗುವುದು. ನಾನು ಹೊರಡು ವೆನು. ಆದರೆ ನನ್ನನ್ನು ನೀನು ಕಂಡುದು ಈಗ ಯಾರಿಗೂ ಗೊತ್ತಾಗ ಕೂಡದು. ನೀನು ಮನೆಗೆ ಹೊರಡು.

ಪ್ರಫುಲ್ಲೆ_ನಾನು ಪುನಃ ನಿನ್ನನ್ನು ನೋಡುವುದು ಯಾವಾಗ ?

ಮನುಷ್ಯ-ಇನ್ನು ಕೆಲವು ದಿನಗಳಲ್ಲೇ ನಾನು ಹಿಂದಿರುಗಿ ಬರುವೆನು; ಹೀಗೆಂದು ಹೇಳಿ ನಿಂತುಬಿಟ್ಟನು.

ಪ್ರಫುಲ್ಲೆಯು ಗೃಹಾಭಿಮುಖಳಾದಳು. ಅತನು ಬಹಳ ಹೊತ್ತು ಆಕೆಯ ಕಡೆಯೇ ಬಹು ಕುತೂಹಲದಿಂದ ನೋಡುತ್ತಿದ್ದನು. ಪ್ರಫುಲ್ಲೆಯು ಮರೆಯಾ ಗುವವರೆಗೂ ಅವಿತುಕೊಂಡಿದ್ದ ವಿಠಲನು ಈಗ ಸರ್‍ರನೆ ಬಾಣದಂತೆ ಈಚೆಗೆ ನುಗ್ಗಿ ಆ ಹೊಸಬನ ಮುಂದೆ ಬಂದು ನಿಂತು ಗಂಭೀರ ಗರ್ಜನೆಯಿಂದ-' ಯಾರಯ್ಯಾ ನೀನು ? ಏನು ನಿನ್ನ ಈ ಅಕಾರ್ಯ? '

ಮೋಡವಿಲ್ಲದ ಗಗನದಿಂದ ಸಿಡಿಲು ಬಡಿದಂತೆ ಅನಿರೀಕ್ಷಿತವಾಗಿ ಹೀಗೆ ಯಾರೋ ಬಂದು ತನ್ನ ಕೃತ್ಯವನ್ನು ಕಂಡರಲ್ಲಾ ಎಂದು ಅತನು ಕೇವಲ ಗಾಬ ರಿಗೊಂಡನು. ಏನೂ ತೋರದೆ ಸ್ತಬ್ಧನಾಗಿ ನಿಂತನು. ಒಂದೆರಡು ಕ್ಷಣ ಮಾತಾಡಲಾರದೆ ಹೋದನು. ಕಟ್ಟಕಡೆಗೆ ವಿಠಲನ ಮುಖವನ್ನು ದುರುಗುಟ್ಟಿ ಕೊಂಡು ನೋಡುತ್ತ ಕೈಗಳನ್ನು ಹಿಂದಕ್ಕೆ ಕಟ್ಟಿಕೊಂಡು_ಅದೇನಾದರೂ ಆಗಲಿ, ನೀನು ಯಾರು ? ಎಂದನು.

ವಿಠಲ_ನಾನು ಯಾರಾದರೂ ಆಗಲಿ, ನಿನಗೇನು ? ನೀನು ಯಾರೆಂಬುದು ನನಗೆ ಗೊತ್ತಾಗಬೇಕಾದುದು ಮುಖ್ಯ. ನಮ್ಮ ಬಾಲೆಯನ್ನು ಪುಸಲಾಯಿಸಿ ಮನೆಯಿಂದ ಹೊರಕ್ಕೆ ಬರಮಾಡಿಕೊಂಡ ದುರುಳನ ವಿಷಯವನ್ನು ಮೊದಲು ತಿಳಿ ಯಬೇಕು.

ಆ ಮನುಷ್ಯ_ನೀನು ವಿಠಲಮೂರ್ತಿಯೊ ?

ವಿಠಲ_ಹೌದು.

ಆ ಮನುಷ್ಯ_ನೀನು ನನಗೆ ತುಂಬ ಗಾಬರಿ ಹತ್ತಿಸಿಬಿಟ್ಟೆಯಲ್ಲ. ಹೀಗಾಗುವುದೆಂದು ನಾನು ತಿಳಿದಿರಲಿಲ್ಲ. ನಾನು ಪ್ರಫುಲ್ಲೆಯನ್ನು ನೋಡಬೇಕಾಗಿದ್ದಿತು. ನೋಡಿದುದಾಯಿತು.

ವಿಠಲ_ಆದರೆ ಆ ಪರಸ್ತ್ರೀಯ ಕೈಯನ್ನು ಮುಟ್ಟಿ ಮುತ್ತು ಕೊಡುವುದಕ್ಕೆ ಹೇಗೆ ಮನಸ್ಸು ಬಂದಿತು ? ಅದು ಎಂತಹ ಅಯೋಗ್ಯರು ಮಾಡುವ ಕೆಲಸ !

ಆ ಮನುಷ್ಯ_ಅದು ಆದರೂ ಆಗಬಹುದಾಗಿದ್ದಿತು. ಇಲ್ಲದಿದ್ದರೂ ಅನಾವಶ್ಯಕವೇ ಅಗಿದ್ದಿತು. ನೀನು ನಾನಿಳಿದಿರುವ ಸ್ಥಳಕ್ಕೆ ಬಂದರೆ ನಾನು ಯಾರೆಂಬುದನ್ನೂ ನನಗೆ ಇಲ್ಲಿ ಏನು ಕೆಲಸವಿದೆಯೆಂಬುದನ್ನೂ ಹೇಳುವೆನು.

ವಿಠಲ_ಹಾಗಾದರೆ ಬರುತ್ತೇನೆ.

ವಿಠಲನೂ ಹೊಸಬನೂ ಜತೆಯಲ್ಲಿ ಹೊರಟರು. ಆತನು ಸಮೀಪದ ತಾಲ್ಲೂಕ್ ಹೆಡ್‌ಕ್ವಾರ್ಟರಿನ ಒಂದು ಹೋಟಲಿನಲ್ಲಿಳಿದಿದ್ದನು. ಭೋಜನವಾದ ನಂತರ ಒಂದು ಕೊಟಡಿಯಲ್ಲಿ ಇವರಿಬ್ಬರಿಗೂ ರಹಸ್ಯವಾಗಿ ಸಂಭಾಷಣೆ ನಡೆಯಿತು. ತರುವಾಯ ವಿಠಲನು ಮನೆಗೆಹೊರಡುವಾಗ್ಗೆ ಸುಮಾರು ಅರ್ಧ ರಾತ್ರಿಯ ಸಮಯ. ಆ ಹೊಸಬನು ಕೊಟ್ಟ ವಾಗ್ಮೂಲವು ವಿಠಲಮೂರ್ತಿಗೆ ತೃಪ್ತಿಕರವಾಗಿದ್ದಿತು. ಹೊರಡುವುದಕ್ಕೆ ಮುಂಚೆ ವಿಠಲನು_ನೀನು ಹೋಟಲಲ್ಲಿರುವುದು ಉಚಿತವಲ್ಲ. ಬಂದು ನಮ್ಮ ಹಳ್ಳಿಯಮನೆಯಲ್ಲಿದ್ದುಬಿಡು. ಆದರೆ ನಿನ್ನ ನಡತೆಯನ್ನು ನೀನು ಸರಿಯಾಗಿ ನೋಡಿಕೊಳ್ಳಬೇಕು. ಪ್ರಫುಲ್ಲೆಯು ವಿವಾಹಿತಳಾದ ಕುಲವಧುವೆಂಬುದನ್ನು ನೆನೆಪಿನಲ್ಲಿಡಬೇಕು. ನಾನು ನಾಳೆ ಬಂದು ನಿನ್ನನ್ನು ಕರೆದುಕೊಂಡು ಹೋಗುತ್ತೇನೆ.

ಆತರುಣ_ಆ ಕಾಡಿನಲ್ಲಿ ನಾನು ನಿನ್ನನ್ನು ಕಂಡುದು, ಬಳಿಕ ನಡೆದ ವಿಷಯ ಇವನ್ನೆಲ್ಲಾ ನೀನು ಪ್ರಫುಲ್ಲೆಗೆ ತಿಳಿಸಬೇಡ.

ವಿಠಲ_ಹಾಗೆ ತಿಳಿಸುವುದಕ್ಕೆ ಇನ್ನು ಕೆಲವು ಕಾಲ ಹೋಗಬೇಕು. ಎಂದು ಹೊರಟುಹೋದನು.

ಬೆಳಗ್ಗೆ ವಿಠಲನು ಪುನಃ ಬಂದು ಆ ಯುವಕನನ್ನು ಕರೆದುಕೊಂಡು ಹೋದನು. ಇವರಿಬ್ಬರೂ ಬರುವಾಗ್ಗೆ ಪ್ರಫುಲ್ಲೆಯು ದಿವಾನ್ ಖಾನೆಯಲ್ಲಿ ಕುಳಿತು ವರ್ತಮಾನಪತ್ರಿಕೆಯನ್ನೋದುತಿದ್ದಳು. ಈಗ ಥಟ್ಟನೆ ಎದ್ದುನಿಂತು ನೋಡಿದಳು. ಈ ತರುಣನನ್ನು ಕಾಣುತ್ತಲೆ ಪ್ರಫುಲ್ಲೆಯ ಮನಸ್ಸು ಪ್ರಫುಲ್ಲವಾಯಿತು. ಆದರೂ ವಿವೇಕ ಶಾಲಿನಿಯಾದುದರಿಂದ ಹರ್ಷವಿಷಾದಗಳಲ್ಲಿ ಯಾವುದೊಂದರ ಕುರುಹನ್ನೂ ತೋರ್ಪಡಿಸಲಿಲ್ಲ, ಇದಲ್ಲವೆ ಮನೋದಾರ್ಢ್ಯ! ವಿಠಲನು ಏನೆನ್ನುವನೋ ಎಂದು ಆಕೆಯ ದೃಷ್ಟಿಯೆಲ್ಲಾ ಆತನ ತುಟಿಗಳ ಮೇಲೆಯೇ ಇದ್ದಿತು.

ವಿಠಲ_ಪ್ರಫುಲ್ಲೆ ಈತನು ನನ್ನ ಮಿತ್ರ, ಈತನ ಹೆಸರು ಕುಲಚಂದ್ರ_ಎಂದು ಹೇಳಿ ಆತನ ಕಡೆಗೆ ತಿರುಗಿ_ಅಯ್ಯ_ಈಕೆ ಬಲು ಒಳ್ಳೆ ಹುಡುಗಿ_ಎಂದು ತೋರಿಸಿದನು.

ಪ್ರಫುಲ್ಲೆಯು ಲಜ್ಜಿತಳಾಗಿ ನಿಂತಳು. ಯಾವ ಮಾತನ್ನೂ ಆಡಲಿಲ್ಲ. ವಿಠಲನು ಮುಖವನ್ನು ನೋಡಿದನು. ಗಂಭೀರತೆ ಹೊರತು ಮತ್ತೆ ಯಾವ ಬದಲಾವಣೆಯೂ ತೋರ್ಪಡಲಿಲ್ಲ. ವಿಠಲನು ಕಾರ್ಯಾರ್ಥಿಯಾಗಿ ಎಲ್ಲಿಗೋ ಹೊರಟು ಹೋದನು. ತರುವಾಯ ಪ್ರಫುಲ್ಲೆಯು ಆ ತರುಣನನ್ನು ಕುರಿತು_ಆತನಿಗೇನಾದರೂ ಈ ವಿಷಯ ಗೊತ್ತುಂಟೊ?

ತರುಣ_ಆತನಿಗೆಷ್ಟು ತಿಳಿದಿರಬಹುದೆಂದು ನಾವು ನಿರೀಕ್ಷಿಸಿದ್ದೆವೋ ಅದಕ್ಕಿಂತ ಹೆಚ್ಚಾಗಿಯೇ ಆತನಿಗೆ ಗೊತ್ತುಂಟು.

ಪ್ರಫುಲ್ಲೆ_ನಿನಗೆ ವಿಠಲಮೂರ್ತಿಯ ಪರಿಚಯವಿರುವುದೆಂದು ನೀನು ನನಗೆ ಹೇಳಿರಲೇ ಇಲ್ಲವಲ್ಲ!

ತರುಣ_ಇಲ್ಲ, ನಿನ್ನೆ ರಾತ್ರಿ ತಾನೆ ನನಗೆ ಪರಿಚಯವಾಯಿತು.

———

# ಹನ್ನೆರಡನೆಯ ಪರಿಚ್ಛೇದ

ಅತ್ಯಂತ ಸುಂದರಿಯಾಗಿಯೂ ತುಂಬ ಚಾದಾಕುಗಾತಿಯೂ ಆದ ಒಬ್ಬ ಜಗನ್ಮೋಹಿನಿಯು ತನ್ನ ಬಲೆಗೆ ಬೀಳುವ ಪುರುಷನನ್ನು ಸೂತ್ರದ ಗೊಂಬೆಯಂತೆ ತನ್ನಿಷ್ಟಬಂದಂತೆಲ್ಲ ಕುಣಿಸಬಲ್ಲಳೆಂಬ ಸಂಗತಿಯು ಪ್ರಕೃತದಲ್ಲಿ ವಾರಣಲಾಲನ ಸ್ಥಿತಿಗತಿಗಳಿಂದ ಚೆನ್ನಾಗಿ ತಿಳಿಯಬಹುದು. ಲಾವಣ್ಯವತಿಯಾದ ತಿಲೋತ್ತಮೆಯು ಇವನನ್ನು ಸಂಪೂರ್ಣವಾಗಿ ವಶಮಾಡಿಕೊಂಡು ಬಿಟ್ಟಳು. ವಾರಣನ ಪರಮೋದ್ದೇಶವು ಈ ಮಾಯಗಾತಿಯ ಮುಗುಳುನಗೆಯೆಂಬ ಬೆಳುದಿಂಗಳ ಬೆಳಕು ತನ್ನ ಮೇಲೆ ಬೀಳುವಷ್ಟು ಪುಣ್ಯ ಮಾತ್ರ ಲಭಿಸಿದರೂ ಸಾಕೆಂದಿದ್ದಿತು. ಇದಕ್ಕಾಗಿ ಏನೇನೋ ಮಾಡಿದನು. ಅನೇಕ ಸಹಸ್ರ ರೂಪಾಯಿಗಳನ್ನು ಹುಣಿಸೆಯ ಬೀಜದಂತೆ ನಿರ್ಲಕ್ಷ್ಯವಾಗಿ ವೆಚ್ಚಮಾಡುವ ದುಂದುಗಾರನಾದನು. ಗಳಿಗೆಗೊಂದು ಕ್ಷಣಕ್ಕೊಂದರಂತೆ ಇವಳಿಗೆ ಬಗೆಬಗೆಯಾದ ಬಹುಮಾನಗಳನ್ನು ಕೊಡುತ್ತ ಬಂದನು. ಇವಳಲ್ಲೇನೋ ಮಹಾತ್ಮ್ಯವುಂಟೆಂದು ತಿಳಿದು ಮರುಳಾಗುತ ಬಂದನು. ಕಡೆಗೆ ಇವಳು ಏನನ್ನೋ ಮಿಶ್ರಮಾಡಿಕೊಡುತ್ತಿದ್ದ ಮದಿರವನ್ನು ಕೂಡ ನಿಶ್ಶಂಕೆಯಿಂದ ಅಮೃತವೆಂದೇ ಭಾವಿಸಿ ಕುಡಿದು ಆನಂದಪಡುತ್ತಿದ್ದನು.

ತಿಲಮೆಯಲ್ಲಿ ಮಹಿಮೆಯಿದ್ದುದೇನೋ ಸಟೆಯಲ್ಲ. ಪರವಶನಾದ ಈ ತರುಣನು ಸದಾ ಮನಸ್ಸು ಬಂದಂತೆ ನಡೆಯುತ್ತಲೂ ಕನವರಿಸಿಕೊಳ್ಳುತ್ತಲೂ ಇದ್ದನು. ಅಷ್ಟು ಮೇಧಾವಿಯಾಗಿದ್ದ ಈ ತರುಣನನ್ನು ಹೀಗೆ ಮಾಡಿದುದೂ ಒಂದು ಮಹಿಮೆಯಲ್ಲವೆ ! ಯಾರೊಬ್ಬರು ವಾರಣನನ್ನು ನೋಡಿದರೂ ಇವನಿಗೇನೋ ಒಂದು ಮೂಲಿಕಾಪ್ರಯೋಗವಾಗಿರುವುದೆಂದು ಸುಲಭವಾಗಿ ಊಹಿಸಬಹುದಾಗಿದ್ದಿತು.

ಹಿಂದೆ ಹೇಳಿದಂತೆ ವಿಠಲನ ಆಫೀಸಿಗೆ ನುಗ್ಗಿ ಅಲ್ಲಿ ದರೋಡೆ ಮಾಡಿದ್ದವನು ದುರುಳನಾದ ಮಾಧವ. ಪಚ್ಚೆಯ ಪೆಟ್ಟಿಗೆಯನ್ನಪಹರಿಸಬೇಕೆಂಬುದು ಅವನ ಉದ್ದೇಶ. ಆದರೆ ದೌರ್ಭಾಗ್ಯವಶಾತ್ ಆ ಪಾಪಿಗೆ ಅದು ದೊರೆಯಲಿಲ್ಲ.

ಒಂದಾನೊಂದು ದಿನ ರಾತ್ರಿ ಪ್ರಫುಲ್ಲೆಯ ಪ್ರತಿಕೃತಿಯಾದ ಸೌದಾಮಿನಿಯು ವಾರಣನ ಕಿರುಮನೆಗೆ ಬಂದು 'ಅಣ್ಣಯ್ಯ' ಎಂದು ಮುದ್ದಿಸುತ್ತ ತಾನು ಕಾಂತನಾಥನನ್ನು ಮದುವೆಯಾಗಿರುವಳೆಂಬುದು ಮುಂತಾದುದನ್ನು ಬಹು ಆಪ್ತತೆಯಿಂದ ರಹಸ್ಯವಾಗಿ ಹೇಳಿದಳು. ಈಯಂಶವು ವಾರಣನಿಗೆ ತಿಳಿಯದಿರಲಿಲ್ಲವೆಂಬುದನ್ನು ನಾವು ಹೇಳಬೇಕಾದುದೇ ಇಲ್ಲ. ಆದರೂ ವಾರಣನು, ಅವಳು ಸುಳ್ಳು ಹೇಳಿ ಮೋಸಮಾಡುತ್ತಿರುವಳೆಂಬುದನ್ನಾಗಲಿ ತನಗೀವಿಷಯವೇನಾದರೂ ಗೊತ್ತಿರುವುದೆಂಬುದನ್ನಾಗಲಿ ತೋರ್ಪಡಿಸಿಕೊಳ್ಳಲಿಲ್ಲ. ಆತನ ಆಗಿನ ಮನೋಭಾವವು ಹೇಗಿದ್ದಿತೆಂಬುದನ್ನು ಊಹಿಸುವುದೂ ಅಸಾಧ್ಯ. ಆದರೂ ಈ ಪಿತೂರಿಗಾರರೆಲ್ಲ ಸೇರಿ ದುರಾಲೋಚನೆಯಿಂದ ದುಷ್ಕಾರ್ಯಗಳನ್ನು ಮಾಡುತ್ತಿರುವುದು ತನಗೆ ತಿಳಿದಿರುವುದೆಂದು ಬಾಯಿಬಿಟ್ಟರೆ ತಿಲಮೆಯು ಎಲ್ಲಿ ತನ್ನಕೈತಪ್ಪಿ ಹೋದಾಳೋ ಎಂದು ವಾರಣನು ಭೀತನಾಗಿದ್ದನು.

ಕಟ್ಟಕಡೆಗೆ ವಾರಣನು_ತಂಗಿ, ನೀನು ಕಾಂತನಾಥನನ್ನು ಮದುವೆಯಾಗಿದ್ದಿಯೆಂದೂ ಆತನು ಸ್ವರ್ಗಸ್ಥನಾದನೆಂದೂ ಹೇಳುತ್ತೀಯೆ. ಹಾಗಾದರೆ ಲಲಿತಪಟ್ಟಣಕ್ಕೆ ಹೋಗಿ ಆತನ ಆಸ್ತಿಗೆಲ್ಲ ಹಕ್ಕುದಾರಳಾಗಿ ಏತಕ್ಕೆ ನಿಲ್ಲಬಾರದು?

ಸೌದಾಮಿನಿ_ತನ್ನ ಉದ್ದೇಶವೂ ಅದೇ. ಅದಕ್ಕೆ ಇನ್ನೂ ಕೆಲವು ಕಾಲ ಹೋಗಬೇಕು. ನನ್ನಲ್ಲಿ ಕಾಗದ ಪತ್ರಗಳೆಲ್ಲ ಬಲವಾಗಿವೆ. ಆದರೆ ನನಗೆ ಬೇಕಾಗಿರುವುದು ಆದೊಂದು ಪೆಟ್ಟೆ ಸಂದೂಕ. ನಾನು ಅದನ್ನು ಭದ್ರವಾಗಿಟ್ಟಿರೆಂದು ಪ್ರಸಿದ್ಧಪತ್ತೇದಾರನಾದ ವಿಠಲಮೂರ್ತಿ ಎಂಬಾತನ ವಶದಲ್ಲಿಟ್ಟಿದೇನೆ. ಅದು ಬರುವುದೊಂದೇ ತಡ.

ವಾರಣ-ಅವನೊಬ್ಬ ಪತ್ತೇದಾರನೆ?

ಸೌದಾಮಿನಿ_ಹೌದು, ಅವನು ಜಗತ್ಪ್ರಸಿದ್ಧ.

ವಾರಣ_ಬೇಗ ಅದನ್ನು ಹಿಂದಕ್ಕೆ ಕೊಡಲಾರನೆ?

ಸೌದಾಮಿನಿ_ನಾನು ಎಷ್ಟೋ ವೇಳೆ ತಗಾದೆಮಾಡಿ ಸಾಕಾಯಿತು. ಈಗಲಾದರೆ ಆತನೆಲ್ಲೋ ಹೋಗಿಬಿಟ್ಟಿರುವಂತೆ ವರ್ತಮಾನ! ಅಣ್ಣಯ್ಯ ನೀನಾದರೂ ಪ್ರಯತ್ನಮಾಡಿ ಆ ಸಂದೂಕವನ್ನು ತಂದುಕೊಡಬಾರದೆ?

ವಾರಣ—ನೀನು ಈಗ ಮಾಡಿರುವುದಕ್ಕಿಂತ ಹೆಚ್ಚು ಪ್ರಯತ್ನ ನನ್ನಿಂದೇನೂ ನಡೆಯಲಾರದು.

ವಾರಣನು ಅನೇಕ ಸಲ ಮಾಧವ ಭಾಸ್ಕರರೊಡನೆ ಜೂಜಾಡಿ ಬಹು ದ್ರವ್ಯವನ್ನು ಹಾಳುಮಾಡಿಕೊಂಡನು. ಪಾನಕ್ಕಂತು ಪಾರವೇ ಇಲ್ಲ. ತಿಲಮೆಯು ಕೊಟ್ಟುದು ಕೊಟ್ಟುದೇ, ವಾರಣನು ಕುಡಿದುದೂ ಕುಡಿದುದೇ. ತಿಲಮೆಯು ಯಾವ ಆಟವನ್ನು ಬೇಕಾದರೂ ಆಡಿಸಬಲ್ಲ ಠಕ್ಕನ್ನೂ ಥಳಕನ್ನೂ ಚಾಲಾಕನ್ನೂ ಬಲ್ಲವಳು ತನಗೆ ವಾರಣನು ಇನ್ನೆಷ್ಟೇ ಐಶ್ವರ್ಯವನ್ನು ಕೊಟ್ಟರೂ ತಾನು ಅವನ ಸಂಗಡ ಸ್ನೇಹ ಬೆಳಸಿಕೊಂಡಿರುವ ಸಂಗತಿಯು ಮಾಧವನಿಗೆ ತಿಳಿಯಕೂಡನೆಂದು ಹೆದರಿಸುತ್ತಿದ್ದಳಲ್ಲದೆ ಮಾಧವಭಾಸ್ಕರರಿದ್ದಾಗ ವಾರಣನು ತನ್ನ ಹತ್ತಿರ ಕೂಡ ಸುಳಿಯಕೂಡದೆಂದೂ ಕಟ್ಟಪ್ಪಣೆ ಮಾಡಿದ್ದಳು. ಅವನು ಎಲ್ಲಾ ಮಹಾಪ್ರಸಾದವೆಂದು ತಲೆದೂಗುತ್ತಿದ್ದನು. ಆದರೆ ತಾನು ತಿಲಮೆಯ ಸಹವಾಸದಲ್ಲಿರುವ ಸಂಗತಿಯನ್ನು ಮಾಧವನು ಬಲ್ಲನೆಂಬುದು ವಾರಣನಿಗೆ ಗೊತ್ತಿದ್ದಿತೋ ಇಲ್ಲವೋ ಹೇಳುವುದು ಕಷ್ಟ. ಹೇಗೂ ಈ ಸ್ತ್ರೀಯು ಎಷ್ಟೇ ಕೆಟ್ಟವಳೆಂದು ಗೊತ್ತಾದರೂ ಅವನು ಇವಳನ್ನು ಪರದೇವತೆಯನ್ನಾಗಿ ಭಾವಿಸಿದ್ದನೆಂಬುದನ್ನು ನಂಬಬಹುದು. ಮತ್ತು ತಿಲಮೆಯು ತಾನೂ ಯಕ್ಷಿಣಿ ಮಾಯ ಮುಂತಾದುವುಗಳಲ್ಲಿ ಚತುರೆಯಾದ ಮಂತ್ರಗಾತಿಯೆಂದು ವಾರಣನ ಮನಸ್ಸಿಗೆ ನಂಬಿಕೆ ಹುಟ್ಟಿಸುವುದಕ್ಕೋಸ್ಕರ ನಿತ್ಯವೂ ಎಷ್ಟೆಷ್ಟೋ ಕೈಕರಣಗಳನ್ನು ಮಾಡುತ್ತಿದ್ದಳು. ಅವೆಲ್ಲ ಅತ್ಯಂತಾಶ್ಚರ್ಯಕರವಾಗಿದ್ದುದರಿಂದ ವಾರಣನು ಮತ್ತಷ್ಟು ಮರುಳಾಗಲು ತುಂಬ ಅವಕಾಶವಿದ್ದಿತು. ಆದುದರಿಂದಲೇ ಇವನು ಎಷ್ಟು ಹೊತ್ತಾದರೂ ಮೇಲಕ್ಕೇಳದೆ ಇವಳ ಕೆಲಸಗಳನ್ನೆಲ್ಲ ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡುತಿದ್ದನು. ಅವನಿಗೋಸ್ಕರವೇ ಇವಳು ಉದ್ದೇಶಪೂರ್ವಕವಾಗಿ ಕೈಚಮತ್ಕಾರಗಳನ್ನು ಮಾಡುತಿದ್ದಳೆಂಬುದಕ್ಕೆ ಸಂಶಯವೇ ಇಲ್ಲ.

ಸೌದಾಮಿನಿಯೂ ಮಾಧವನೂ ತಮ್ಮ ಹರಣಭರಣ ಶಕ್ತಿಯನ್ನೆಲ್ಲ ವೆಚ್ಚ ಮಾಡಿದರೂ ಆ ಪಚ್ಚೆಯ ಪೆಟ್ಟಿಗೆ ಇರುವ ಸ್ಥಳವು ಕೂಡ ಪತ್ತೆಯಾಗಲಿಲ್ಲ. ಈ ಮಧ್ಯೆ ನಟೇಶನೂ ಕಣ್ಮರೆಯಾದನು. ಅವನೆಲ್ಲಿ ಹೋದನೆಂಬುದನ್ನು ತಿಳಿಯುವುದಕ್ಕೂ ಮಾಧವನು ಬಲು ಸಾಹಸಮಾಡಿದನು. ಆದರೂ ಗೊತ್ತಾಗಲಿಲ್ಲ.

ನಟೇಶನು ನಾಗೇಶನ ಬೆನ್ನಹತ್ತಿ ಅಲ್ಲಿನ ವಿಷಯವನ್ನು ನೋಡುತ್ತ ಓದಾಣಿ ಗ್ರಾಮದಲ್ಲಿದಾನೆ.

ಈ ಕಪಟನಾಟಕದ ಸನ್ನಿವೇಶಗಳೆಲ್ಲ ಈ ಸ್ಥಿತಿಯಲ್ಲಿರುವಾಗ ಒಂದಾನೊಂದು ದಿನ ಪ್ರಾತಃಕಾಲ ವಾರಣನಿಗೆ ಒಂದು ಟೆಲಿಗ್ರಾಫ್ ಬಂದಿತು. ಅದು ವಿಠಲನಿಂದ ಬಂದ ವರ್ತಮಾನ. ಅದರಲ್ಲಿ ಆ ದಿನ ಸಾಯಂಕಾಲ ವಾಗೀಶನಾದ ಮಾವಯ್ಯ ತಾನು ಊರಿಗೆ ಹಿಂದಿರುಗಿ ಬರುವುದಾಗಿ ಬರೆದಿದ್ದಿತು. ಏನೇನು ಮಾಡಿದರೂ ವಿಠಲನನ್ನು ಬಾರದಂತೆ ತಡೆಯುವುದು ಶಕ್ಯವಲ್ಲವೆಂದು ತಿಳಿದು ವಾರಣನು ಕಡೆಗೆ ತನ್ನ ಕೃತ್ರಿಮ ಸಹೋದರಿಗೆ ಆ ದಿನ ಸಂಜೆಗೆ ಮಾವಯ್ಯನಾದ ವಾಗೀಶನು ಬರುವನೆಂಬುದನ್ನು ತಿಳಿಸಿದನು.

ಸೌದಾಮಿನಿ_ಆತನು ಬಂದರೆ ಇಲ್ಲೇ ಇಳಿದುಬಿಡುವನೇನೋ ! ಹೋಟಲಿಗೆ ಸಾಗಿಹೋಗುವಂತೆ ನೀನೇನಾದರೊಂದುಪಾಯ ಮಾಡಲಾರೆಯಾ ?

ವಾರಣ_ಅದು ಹೇಗೆ ಸಾಧ್ಯ ! ಅವನು ಶಾನೇದಿನ ನಿಲ್ಲಲಾರ. ಆದುದರಿಂದ ಇರಲೇಳು. ಉಂ ; ನಾನು ಹೊರಟೆ.

ಸೌದಾಮಿನಿ_ಈಗ ನೀನು ಎಲ್ಲಿಗೆ ಹೊರಟೆ ? ತಿಲಮೆಯನ್ನು ಬೆಸಗೊಳ್ಳುವುದಕ್ಕೊ ? ಓಹೊ ! ಆಹಾ ! ಹಾ ! ಅಣ್ಣಯ್ಯ, ಹುಷಾರಾಗಿರು. ಇಲ್ಲದಿದ್ದರೆ ಗುಂಡಿಗೆಯು ತುಪಾಕಿಯ ಗುಂಡಿನೇಟಿಗೆ ಗುರಿಯಾದೀತು ! ಎಂದಾದರೊಂದು ದಿನ ಮಾಧವನೇನಾದರೂ ಅಕಸ್ಮಾತ್ತಾಗಿ ಬಂದುಬಿಟ್ಟರೆ ದೊಡ್ಡ ಅನಾಹುತ ನಡೆದೀತು !

ವಾರಣ_(ಲೊಟಗರೆಯುತ) ಸರಿಸರಿ, ಅದಕ್ಕಲ್ಲಾ ನಾನು ಬಲು ಜಾಗರೂಕ.

ವಾರಣನು ಮನೆಯಿಂದ ಹೊರಟು ಒಂದೇ ಹೆಜ್ಜೆಯಲ್ಲಿ ತಿಲಮೆಯ ಸಾನ್ನಿಧ್ಯವನ್ನು ಸೇರಿದನು. ಇವನನ್ನು ದೂರದಿಂದ ಕಾಣುತಲೆ ಅವಳು ಬಾಗಿಲಬಳಿಗೆ ಬಂದು ಎದುರುಗೊಂಡು ಹಸ್ತಲಾಘವವನ್ನು ಕೊಟ್ಟು ಉಪಚರಿಸಿದಳು. ವಾರಣನು ಸ್ಪರ್ಶಸುಖಕ್ಕೆ ಸೋತುಹೋಗಿ ಅವಳನ್ನಾಲಿಂಗಿಸಿಕೊಂಡನು. ಅವರಿಬ್ಬರೂ

ಸಂತೋಷಸಾಗರದಲ್ಲಿ ಓಲಾಡುವಾಗ ಈ ಲೋಕವನ್ನೇ ಮರೆತುಬಿಟ್ಟರು. ಸ್ವರ್ಗ ಕ್ಕೆ ಒಂದು ಬೆರಳೆತ್ತರವೂ ಸಾಲದಿರಲಿಲ್ಲ. ಆಹಾ! ಇದೆಂತಹ ಸಶರೀರ ಸ್ವರ್ಗ ಸುಖವೋ ಏನೊ! ಯಥಾಪ್ರಕಾರ ಮಹಾಮೂಲಿಕಾ ಪ್ರಯುಕ್ತವಾದ ಮದ್ಯವು ಮತ್ತಷ್ಟು ಸುಖ ಸಹಾಯಕವಾಯಿತು. ವಾರಣನಿಗೆ ಈಗೇನಾದರೂ ಮಾನ ಮರ್ಯಾದೆಗಳ ಶಂಕೆಯುಂಟೆ? ದ್ರವ್ಯದ ಲಕ್ಷ್ಯವುಂಟೆ? ಅಥವಾ ಜನಮಂಡಲಿ ಯಲ್ಲಿ ತನ್ನ ಸ್ಥಿತಿ ಹೇಗಾಯಿತೆಂಬ ಯೋಚನೆಯಾದರೂ ಉಂಟೆ? "ಕಾಮಾ ತುರಾಣಾಂ ನ ಭಯಂ ನ ಲಜ್ಜಾ" ಎಂಬ ಆರ್ಯೋಕ್ತಿಗೆ ಇದಕ್ಕಿಂತ ಉತ್ತಮ ವಾದ ಲಕ್ಷ್ಯವಾವುದು! ಒಂದುವೇಳೆ ಯಾರಾದರೂ ಬಂದು ವಾರಣನನ್ನು ಮೇಲೆ ಕಂಡ ಈ ಮೂರು ಪ್ರಶ್ನೆಗಳನ್ನು ಕೇಳಿದ್ದರೆ ಅವನು—ಪ್ರೇಮಲತೆಯೊಂದ ನ್ನಲ್ಲದೆ ಮತ್ತಾವುದನ್ನೂ ನಾನು ಪರಿಗಣಿಸೆನು. ಅದೂ ಈ ನನ್ನ ಮೋಹನಾಂ ಗಿಯು, ಈ ನನ್ನ ಪ್ರಾಣಕಾಂತೆಯು, ಊ ಹೂ, ಅಲ್ಲ, ಈ ನನ್ನ ಪ್ರಾಣಾ ಧಿಕಳಾದ ತಿಲೋತ್ತಮೆಯ ಸಾನ್ನಿಧ್ಯವೇ ನನಗೆ ಸಂಪ್ರಾಪ್ತಿಶಾಯಿ ಸ್ವರ್ಗ—ಎಂದೆ ನ್ನುತಿದ್ದನು. ತಿಲಮೆಯು ಕೆಲವು ನಿಮಿಷಗಳವರೆಗೆ ವಾರಣನನ್ನಪ್ಪಿಕೊಂಡಿದ್ದು ಬಳಿಕ ಒಂದುಸಲ ಲಲ್ಲೆಹಾಕಿ ನಕ್ಕಳು. ಅದು ಅವನ ಭಾಗಕ್ಕೆ ಮಿಂಚಿನ, ಬೆಳು ದಿಂಗಳ ಅಥವಾ ವಜ್ರಮಣಿಯ ಪ್ರಕಾಶಕ್ಕಿಂತ ಮೇಲಾಗಿ ತೋರಿತು. ಈ ಕೇಕೆಯಿಂದ ಮನೆಯೆಲ್ಲ ಮೊಳಗುವಂತಾಯಿತು. ಬಳಿಕ ಮಹಡಿಯನ್ನು ಏರು ವಾಗ ವಾರಣನ ಕೈಯನ್ನು ಹಿಡಿದುಕೊಂಡು—ಪ್ರಾಣೇಶ, ಬಾ, ನಮ್ಮ ಶೃಂಗಾ ರವಲ್ಲಿಯಿಂದ ಸುತ್ತುವರಿಯಲ್ಪಟ್ಟ ಪ್ರೇಮಮಂಟಪಕ್ಕೆ ತೆರಳೋಣ, ಎಂದಳು. ಪರವಶನಾದ ವಾರಣನು ಗಂಡು ನಾಯಂತೆ ಹಿಂಬಾಲಿಸಿದನು. ಅವಳು ತನ್ನ ಕುಡಿಗಣ್ಣೋಟಗಳೆಂಬ ಕಾಲಪಾಶಗಳಿಂದ ಅವನನ್ನು ಕಟ್ಟಿ ಎಳೆಯುತ್ತಿದ್ದಳೋ ಎಂಬಂತಿತ್ತು. ಅಥವಾ ಗಾರುಡಮಂತ್ರಕ್ಕೆ ಕೃಷ್ಣಸರ್ಪವು ಕಟ್ಟುಬಿದ್ದಿತೆಂದರೂ ಒಪ್ಪುತಿದ್ದಿತು. ಇಬ್ಬರೂ ಉಪ್ಪರಿಗೆಯಮೇಲೆ ಒಂದು ಕಿರುಮನೆಯನ್ನು ಸೇರಿದ ಕೂಡಲೆ ತಿಲಮೆಯು ಒಳಗಡೆಯ ಕದವನ್ನು ಭದ್ರಪಡಿಸಿ ತೂಗಾಡುವ Spring ಮಂಚದಮೇಲೆ ಹಾಸಿದ್ದ ಹಂಸತೂಲಿಕಾತಲ್ಪದ ಮೇಲಕ್ಕೆ ಉರುಳಿಕೊಂಡಳು. ನಾನಾಬಗೆಯ ಮೃಗಗಳು, ಪಕ್ಷಿಗಳು, ಲತೆಗಳು ಮುಂತಾದವುಗಳಿಂದ ಚಿತ್ರಿಸ ಲ್ಪಟ್ಟ ಚೀಟಿಯ ಬಟ್ಟೆಯ ಗೌಸುಗಳುಳ್ಳ ನಾನಾ ಪ್ರಮಾಣದ ದಿಂಬುಗಳು ಆ ಹಾಸಿಗೆಯಮೇಲೆ ಇಟ್ಟಲ್ಪಡುತಿದ್ದುವು. ಅಲ್ಲಿನ ಗೋಡೆಗಳಿಗೆಲ್ಲ ನಿಲವುಗನ್ನಡಿ

ಗಳು ಸೇರಿಸಲ್ಪಟ್ಟಿದ್ದುವು. ಅಲ್ಲಲ್ಲಿ ಸೋಫಾಗಳೂ ಇದ್ದುವು. ಮಂಚಕ್ಕೆದುರು ಪಾರ್ಶ್ವದಲ್ಲಿ ಒಂದುಕಡೆ ಶ್ರೇಷ್ಠವಾದೊಂದು ಚಿತ್ರಾಸನವು ಹಾಸಲ್ಪಟ್ಟಿದ್ದಿತು.

ತಿಲಮೆಯು ಮಂದಹಾಸದಿಂದ ವಾರಣನಮೇಲೆ ಇಂದುಕಾಂತಿಯನ್ನು ಚೆಲ್ಲುತ್ತ ಅವನ ತೋಳನ್ನು ಹಿಡಿದೆಳೆದು_ಪ್ರಾಣಪ್ರಿಯ, ಬಾ, ನನ್ನ ಪಕ್ಕದಲ್ಲಿ ಕುಳಿತುಕೊ_ಎಂದಳು. ಆ ಮೇಲೆ ಎದ್ದು ಹಿಂದುಗಡೆ ಗೂಡಿನಲ್ಲಿಟ್ಟಿದ್ದ ಒಂದು ಹುಕ್ಕಾ ಪಾತ್ರೆಯನ್ನು ತಂದು ಕೆಳಗಿಟ್ಟು ಅಗ್ನಿ ಪ್ರತಿಷ್ಠಾಪನೆಮಾಡಿ ಅದಕ್ಕೆ ಕೊನೆಯಲ್ಲಿ ಕವಲೊಡೆದ ಒಂದು ಕೊಳವೆಯನ್ನು ಸೇರಿಸಿ_ಬಾ, ಬಾ, ನಲ್ಲ, ಇಗೊ! ತೆಗೆದುಕೊ, ಸೇದು, ಸೊಗಸಾದ ತಂಬಾಕು! ಉತ್ಕೃಷ್ಟವಾದ ಗುಡು ಗುಡಿ! ಎಂದು ಅವನ ಕೈಗೆ ಆ ಕೊಳವೆಯ ಒಂದು ತುದಿಯನ್ನು ಕೊಟ್ಟು ಪುನಃ _ಸೇದು ಸೇದು, ಏನಿದ್ದರೂ ಈಗಣದು ನಮ್ಮದು, ನಾಳೆ ಯಾವುದೋ ನಾವು ಯಾರೋ! ಇಗೊ! ಈಗ ನನ್ನ ಆತ್ಮವು ಎಲ್ಲಾ ಲೋಕಗಳಲ್ಲೂ ಸಂಚರಿಸುತ್ತಿದೆ ಎಲ್ಲಾ ಶಕ್ತಿಗಳನ್ನೂ ಪಡೆದಿದೆ. ನೀನು ನನ್ನ ಪ್ರಾಣ, ಮೋಹನಾಂಗ, ಕೇಳು, ನಿನಗೇನುಬೇಕೋ ಕೇಳು, ಅನುಗ್ರಹಿಸುತ್ತೇನೆ. ಹುಕ್ಕಾಸೇದು.

ವಾರಣ_(ಒಂದು ತುದಿಯನ್ನು ತನ್ನ ಬಾಯಲ್ಲಿ ಇಟ್ಟುಕೊಂಡು ಸೇದು ತ್ತಾ)_ತಿಲಮೆ, ನಾವಿಬ್ಬರೂ ಒಟ್ಟಿಗೆ ಸೇದೋಣ. ತಿಲಮೆಯೂ ಸೇದಿದಳು. ಆದರೆ ಒಂದುಸಲಕ್ಕಿಂತ ಹೆಚ್ಚಾಗಿ ಹೊಗೆಯನ್ನು ಮೇಲಕ್ಕೆ ಸೇದಿಕೊಳ್ಳಲಿಲ್ಲ. ಹಾಗೆಯೇ ಹಿಂದುಗಡೆಯ ದಿಂಬಿಗೊರಗಿಕೊಂಡು ಕಾಲುಚಾಚಿದಳು. ವಾರಣ ನಾದರೋ ಹುಚ್ಚಮ್ಮ ಕಲಗಚ್ಚನ್ನು ಕಂಡಂತೆ ಹೆಚ್ಚುಹೆಚ್ಚಾಗಿ ಸೇದುತ್ತ ಬಂ ದನು. ಕೊಠಡಿಯೆಲ್ಲಾ ಪುಟ್ಟಪುಟ್ಟ ಮೋಡಗಳಿಂದಲೂ ಸುವಾಸನೆಯಿಂದಲೂ ತುಂಬಿಹೋಯಿತು. ವಾರಣನು ಎಲ್ಲೋ ಇದ್ದಂತೆ ಭಾವಿಸಿಕೊಳ್ಳುವವನಾದನು.

ತಿಲಮೆಯು ಈಗ ತಾರಸ್ವರದಿಂದ ಕಿವಿಗೆ ಅಮೃತರಸವನ್ನು ಬೀರುವ ದಿವ್ಯವಾದ ಗಂಧರ್ವಗಾನವನ್ನು ಹಾಡತೊಡಗಿದಳು. ಅವಳದು ಅಪೂರ್ವವಾದ ಶಾರೀರ ಸಂಪತ್ತು. ಅದು ವಾರಣನಿಗೆ ಮಾತ್ರವೇ ಅಲ್ಲ, ಎಂತಹ ಸಂಗೀತ ವಿದ್ಯಾವಿಶಾರದರಿಗೂ ಭ್ರಾಮಕವಾಗಿದ್ದಿತು. ಹಾಡುವಾಗ ತಲೆಯನ್ನು ಹಿಂ ದಕ್ಕೂ ಮುಂದಕ್ಕೂ ತೂಗುತ್ತ ವಾರಣನ ತಲೆಯನ್ನು ತನ್ನ ತೊಡೆಯ ಮೇಲಿಟ್ಟು

ಕೊಂಡು ಒಂದು ಕೈಯಿಂದ ಅವನ ತಲೆಯನ್ನು ನೇವರಿಸುತ್ತಲೂ ಮತ್ತೊಂದ ರಿಂದ ತಾಳ ಹಾಕುತ್ತಲೂ ಇದ್ದಳು. ತರುವಾಯ ಪುನಃ—ಎಲೈ ಮೋಹ ನಾಂಗ, ಪ್ರೇಮವು ತಾನೇ ತಾನಾಗಿ ತುಂಬಿ ತುಳುಕುತ್ತಿದೆ. ಇಗೋ! ತೆರೆ ಮರೆಯಾಗುತಿದೆ. ನಮ್ಮ ಮುಂದಿನ ಗತಿಯ ಮಾರ್ಗಕ್ಕೆ ಈಗಲೇ ಬೆಳಕು ತೋರುತ್ತಿದೆ.—ಎಂದು ಹೇಳುತ್ತ ವಾರಣನ ತಲೆಯನ್ನು ಕೆಳಕ್ಕಿಳಿಸಿ ತಾನೆದ್ದು ನಿಂತುಕೊಂಡು ಯಕ್ಷಿಣಿಯ ದೋಣ್ಣೆಯನ್ನು ಕೈಯಲ್ಲಿ ಹಿಡಿದುಕೊಂಡು ಅದನ್ನು ಮೇಲಕ್ಕೆತ್ತಿದ್ದಳು. ಅಲ್ಲಿ ಎರಡು ತಟ್ಟೆಗಳಲ್ಲಿ ತುಂಬಿಟ್ಟಿದ್ದ ಬಣ್ಣದ ಪುಡಿಯನ್ನು ತೆಗೆದುಕೊಂಡು ಏನೇನೋ ಮಂತ್ರಗಳನ್ನು ಒತ್ತಿ ಒತ್ತಿ ಉಚ್ಚರಿಸುತ ಬೆಂಕಿಗೆಸೆ ದಳು. ಒಂದು ಕಡೆ ಕೆಂಪು ಹೊಗೆಯೂ ಮತ್ತೊಂದು ಕಡೆ ಹಸುರು ಹೊಗೆಯೂ ಹೊರಟು ಎರಡೂ ಒಟ್ಟಿಗೆ ಸೇರಿ ವಿಚಿತ್ರವರ್ಣವಾಗಿ ಪರಿಣಮಿಸಿತು. ಬಳಿಕ ತಿಲಮೆಯು ಅದರ ಮೇಲೆ ಕಪ್ಪಾದ ಒಂದು ಬಗೆಯ ಪುಡಿಯನ್ನೆರಚಲು ಭಯಂ ಕರವಾದ ಒಂದಾನೊಂದು ಇಂದ್ರಜಾಲವು ನಡೆಯಿತು. ಆಗ ಅವಳು ವಾರಣ ನನ್ನು ತಟ್ಟಿ ಎಬ್ಬಿಸಿ ಅದನ್ನು ತೋರಿಸಿದಳು. ಅವನು ಹತ್ತಿರಕ್ಕೆ ಬಂದು ನೋ ಡಲು ಹೃದಯವು ಬೇಗಬೇಗ ಬಡಿಯುತ ಮೈಯೆಲ್ಲ ಬೆವತು ಮರಣಕಂಪವುಂ ಟಾಯಿತು. ಆ ಜ್ವಾಲೆಯಲ್ಲಿ ತರುಣನಾದ ತನ್ನ ಚಿತ್ರವೂ ಇದ್ದಿತು. ಅದರ ಮುಂದಕ್ಕೆ ತನ್ನ ಈ ತಾರುಣ್ಯಾವಸ್ಥೆಯಲ್ಲಿ ಸಂಭವಿಸಿದುದೆಲ್ಲಾ ಒಂದೊಂದಾಗಿ ಚಿತ್ರರೂಪದಲ್ಲಿ ಕಾಣಿಸುತ ಬಂದಿತು. ವಾರಣನಿಗೆ ಮಾತು ನಿಂತುಹೋಯಿತು. ತಿಲಮೆಯು ತನ್ನ (ವಾರಣನ) ಹೆಗಲ ಮೇಲೆ ಕೈಯಿಟ್ಟುಕೊಂಡಿದ್ದುದನ್ನು ಅವನೇ ನಾದರೂ ನೋಡದಿದ್ದಲ್ಲಿ ಇದೆಲ್ಲಾ ಸ್ವಪ್ನವೆಂದೇ ಭಾವಿಸಬಹುದಾಗಿದ್ದಿತು. ವಾರಣನು ತಿಲಮೆಯ ಸಂಗಡ ಮೈತ್ರಿಯುಳ್ಳರುವ ಚಿತ್ರವೂ ಕಂಗೊಳಿ ಸಿತು. ಇಷ್ಟಾದ ಮೇಲೆ ಇನ್ನೊಂದು ಚಿತ್ರವನ್ನು ಕಾಣುತಲೆ ವಾರ ಣನು ಅಸ್ವಾವಸ್ಥೆಗೆ ಬರುವ ಹಾಗಾಯಿತು. ಅದೇನೆಂದರೆ_(೧) ಅನೇಕರು ಸೇರಿರುವ ಒಂದು ಕೊಠಡಿ, ವಾರಣನು ತಿಲಮೆಯ ಪಕ್ಕದಲ್ಲಿ ಕುಳಿತಿರುವುದು, ಅಲ್ಲಿಗೆ ಥಟ್ಟನೆ ಮಾಧವನು ಬರುವುದು. (೨) ಇಷ್ಟರಲ್ಲಿ ಮತ್ತೊಂದು ಚಿತ್ರ. ಅದರಲ್ಲಿ ತನ್ನ ಹೆಂಡತಿಯಾದ ತಿಲಮೆಯನ್ನು ಅಪಹರಿಸಿದುದಕ್ಕೋಸ್ಕರನೆಂದು ಮಾಧವನು ವಾರಣನ ಸಂಗಡ ಜಗಳಕ್ಕೆ ನಿಂತು ಅವರಿಬ್ಬರೂ ಅರಣ್ಯಮಾರ್ಗದಲ್ಲಿ ಪ್ರವಹಿಸುವ ಒಂದಾನೊಂದು ನದಿಯ ತೀರದಲ್ಲಿರುವುದು. ಇಬ್ಬರ ಕೈಯಲ್ಲೂ

ಸಣ್ಣ ಕೈ ತುಪಾಕಿ (ಪಿಸ್ತೂಲು) ಗಳು. ಇಬ್ಬರೂ ಮದ್ದುಹತ್ತಿಸುವುದು. ಮಾಧ ವನು ಉರುಳುವುದು, ವಾರಣನು ಓಡಿಹೋಗುವುದು. (೩) ಇನ್ನೊಂದು ಚಿತ್ರವು ಈಚೆಗೆ ಹೊರಟಿತು. ಅದನ್ನು ನೋಡುತ್ತಲೆ ವಾರಣನು ದೀನಧ್ವನಿ ಯಿಂದ_ಅಯ್ಯೋ ! ದೇವರೇ ! ಇದು ಮಾತ್ರ ಆಗಬಾರದು_ಎಂದನು.

ತಿಲಮೆಯು ಕದಲಮೆದಲದೆ ಶಿಲಾವಿಗ್ರಹದಂತೆ ಸ್ತಬ್ಧಳಾಗಿ ನಿಂತು ನೋಡುತ್ತಿದ್ದಳು. ವಾರಣನು ಹಿಂದಿನ ಎಲ್ಲಾ ಚಿತ್ರಗಳನ್ನು ನೋಡಿ ಸಾಮಾ ನ್ಯವಾಗಿ ಭೀತಿಗೊಂಡಿದ್ದನಾದರೂ ಇಷ್ಟು ಎದೆಯೊಡೆದಿರಲಿಲ್ಲ. ಈ ಚಿತ್ರದಲ್ಲಿ_ ದಿವ್ಯವಾಗಿ ಶೃಂಗರಿಸಿದ ರಮಣೀಯವಾದೊಂದು ಕಿರುಮನೆ, ಅಲ್ಲಿ ವಾರಣನೂ ತಿಲಮೆಯೂ ವಿಹರಿಸುತ್ತಿರುವುದು. ತಿಲಮೆಯು ಮತ್ತು ವಾರಣನ ತೋಳು ಗಳನ್ನು ಸೇರಿಸಿ ಅಯಸ್ಕಂಕಣ (ಹಾತ್‌ಬೇಡಿ)ಗಳನ್ನು ತೊಡಿಸಿರುವುದು ಮತ್ತು ಇವರಿಬ್ಬರೂ ಸತ್ತುಬಿದ್ದಿರುವುದು. ಸಮೀಪದ ಮೇಜಿನ ಮೇಲೆ ಸ್ವಚ್ಛವಾ ದೆರಡು ಶೀಷೆಗಳಲ್ಲಿ ಸರ್ವೋತ್ತಮವಾದ ವಿಷವು ತುಂಬಲ್ಪಟ್ಟಿರುವುದು.

ಸಾಮಾನ್ಯವಾಗಿ ಇತರರಿಗೆ ಸಂಬಂಧಪಟ್ಟ ಇಂತಹ ಚಿತ್ರಗಳನ್ನು ನೋಡಿ ದರೂ ಮನಸ್ಸಿಗೆ ಎಷ್ಟೋ ಭಯವಾಗುವಲ್ಲಿ ಸ್ವವಿಷಯಕವಾದ ಭೂತಭವಿಷ್ಯದ್ವರ್ತ ಮಾನಗಳ ನಡೂಳಿಕೆಗಳನ್ನೆಲ್ಲ ಸ್ಪಷ್ಟವಾಗಿ ತೋರುವ ಮತ್ತು ತಮ್ಮ ದುರಾಚಾ ರಗಳನ್ನು ಸಾರಿ ಹೇಳಿ ಕಣ್ಣಿಗೆ ತೋರಿಸುವ ಈ ಮಾಯಾಚಿತ್ರವನ್ನು ನೋಡಿ ವಾರಣನೂ ತಿಲಮೆಯೂ ಭಯಪಟ್ಟರೆಂಬುದು ನಮಗೇನೂ ಆಶ್ಚರ್ಯಕರವಾಗಿ ತೋರುವುದಿಲ್ಲ. ಕಡೆಗೆ ಎಲ್ಲಾ ಮಾಯವಾಯಿತು. ಹೊಗೆಯ ಕುರುಹು ಕೂಡ ಇಲ್ಲ. ತಿಲಮೆಯು ಯಕ್ಷಿಣಿಯ ದೋಣ್ಣೆಯನ್ನು ಕೆಳಕ್ಕೆಸೆದು ಧೊಪ್ಪನೆ ನೆಲಕ್ಕೆ ಬಿದ್ದು ಗೋಳೋ ಎಂದು ಅಳಲಾರಂಭಿಸಿದಳು. ವಾರಣಪಾಲನು ಅವ ಳನ್ನು ಸಮಾಧಾನಪಡಿಸುವುದಕ್ಕೋಸ್ಕರ ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾ ದುವು. ಸ್ವವಿಷಯಕವಾದ ಚಿತ್ರಗಳನ್ನು ನೋಡಿದುದರಿಂದ ಮುಂದೆ ತನಗೇ ನುಗತಿಯೆಂದು ಎದೆಗುಂದಿದನು. ತಿಲಮೆಯು ಇಂತಹ ಬಾರಾಬಂಗಾಳಿ ವಿದ್ಯೆಗಳಲ್ಲಿ ಅಗ್ರೇಸರಳು.

ವಾರಣ_ತಿಲಮೆ, ಬಾ, ಈ ಮನೆಯಲ್ಲಿರಬಾರದು. ಇನ್ನೆಲ್ಲಿಗಾದರೂ ಹೋಗೋಣ. ಎಂದು ಅವಳನ್ನೆತ್ತಿಕೊಂಡು ಎದುರಿಗಿದ್ದ ಮತ್ತೊಂದು ಕೊಠ ಡಿಗೆ ಹೋದನು.

ತಿಲಮೆ_ಅಹಾ ! ಹೀಗೆ ಇಂದ್ರಜಾಲದಲ್ಲಿ ನನ್ನ ಸ್ವಂತ ಪರಿಣಾಮವು ತೋರುವುದೆಂದು ನನಗೆ ಮೊದಲೆ ಗೊತ್ತಾಗಿದ್ದಲ್ಲಿ ನಾನೆಂದಿಗೂ ಇದಕ್ಕೆ ಕೈ ಹಾಕುತ್ತಲೇ ಇರಲಿಲ್ಲ.

ವಾರಣ_ತಿಲಮೆ, ಮೋಹನೆ, ಹೆದರಬೇಡ. ಅಪಾಯದ ಕಡೆಗೇ ಮನಸ್ಸು ಕೊಡಬೇಡ. ನಾವು ವಿಧಿಯ ಕಣ್ಣಿಗೆ ಮಣ್ಣೆರಚಿ ಸುಖವಾಗಿರೋಣ. ಈ ಮನೆಯನ್ನೇ ಬಿಟ್ಟು ಮತ್ತೆಲ್ಲಿಗಾದರೂ ಹೋಗಿ ಗುಟ್ಟಾಗಿ ವಾಸವಾಡೋಣ.

ತಿಲಮೆ_ಇಲ್ಲ, ಇಲ್ಲ, ಅದೆಂದಿಗಾದೀತು ? ನಾವೆಲ್ಲಿಹೋದರೂ ವಿಧಿಯು ಬೆನ್ನಹತ್ತಿ ಬಂದೇ ಬರುವುದು. ಸರಿ. ನಮ್ಮ ಪರಿಣಾಮ ಇಷ್ಟೇಸರಿ.

ವಾರಣ_ಹಾಗಾದರೆ ಸದ್ಯಕ್ಕೆ ಅದನ್ನು ಮರೆತು ಬದುಕಿರುವಷ್ಟು ಕಾಲವಾದರೂ ಸುಖವಾಗಿರೋಣ.

ತಿಲಮೆಯು ಸ್ವಲ್ಪಹೊತ್ತು ಸುಮ್ಮನಿದ್ದು ಬಳಿಕ ಕೇವಲ ಆಪ್ತತೆಯಿಂದ_ ವಾರಣ, ನನ್ನಲ್ಲಿ ನಿನಗೆ ಪ್ರೇಮವಿರುವುದು ನಿಜವೆ ?

ವಾರಣ_ನಿನಗಾವಿಷಯದಲ್ಲೇನಾದರೂ ಸಂಶಯವುಂಟೊ ?

ತಿಲಮೆ_ಹಾಗಾದರೆ ನಿನ್ನ ಪ್ರೇಮವು ನಾನು ಕೋರುವುದನ್ನು ಅನುಗ್ರಹಿಸಬಲ್ಲುದೊ ?

ವಾರಣ_ಅಂತಹ ಅನುಗ್ರಹವೇನು ನಿನಗೆ ಬೇಕಾದುದು ?

ತಿಲಮೆ_ನನಗೆ ಈಗ ದ್ರವ್ಯವು ಅತ್ಯಾವಶ್ಯಕವಾಗಿದೆ.

ವಾರಣ_ಓಹೋ ! ಹಾಗೊ ? ಎಷ್ಟು ಬೇಕಾಗಿದೆ ?

ತಿಲಮೆ_ಈಗ ದರಿದ್ರಪಕ್ಷ ಹತ್ತುಸಾವಿರ ರೂಪಾಯಿಗಳಾದರೂ ಬೇಕು. ನೀನು ಸಾಲಾಕೊಟ್ಟಿದ್ದರೆ ಜಾಮೀನನ್ನು ಬೇಕಾದರೂ ಕೊಡುತ್ತೇನೆ.

ವಾರಣನು ಸ್ವಲ್ಪ ಹಿಂದೆಗೆದನು. ದ್ರವ್ಯವು ಅಷ್ಟಿಷ್ಟಲ್ಲ, ಹತ್ತುಸಾವಿರ ರೂಪಾಯಿ ! ಅಳೆದರೆ ಸುಮಾರು ಎಷ್ಟೋ ಕೊಳಗಗಳಾಗಬಹುದು. ವಾರ

ಣನು ಕಟ್ಟಕಡೆಗೆ ಕಟ್ಟುಬಿದ್ದು—ತಿಲಮೆ, ಆಗಲಿ—ಎಂದು ಒಂದು ಹುಂಡಿಯನ್ನು (ಚಕ್) ಬರೆದುಕೊಟ್ಟನು.

ತಿಲಮೆ—ಓಹೋ! ನೀನು ನನ್ನನ್ನು ಕಡೆಗಾಣತಕ್ಕವನಲ್ಲವೆಂಬುದನ್ನು ನಾನು ಮೊದಲೇ ಬಲ್ಲೆ. ನೀನೇ ದಾನಕರ್ಣ. ನೀನೇ ಮಹಾತ್ಮ. ಇಗೋ ಒಂದು ಮುತ್ತು!—ಎಂದು ವಾರಣನನ್ನು ಮನಃಪೂರ್ತಿಯಾಗಿ ಕಟ್ಟಿಕೊಂಡು ಮುದ್ದಾಡಿದಳು.

ಹೀಗೆ ಆಗಿನ ಸರಸಸಲ್ಲಾಪಾದಿಗಳಿಂದ ಮುಂದಿನ ಗಂಡವನ್ನು ಮರೆತು ಹೋದ ಈ ನಾಯಿಕಾ ನಾಯಕರುಗಳಲ್ಲಿ ವಾರಣನು ಮನೆಗೆ ಹೋಗಲು ತಿಲ ಮೆಯು ಬೀದಿಯ ಸಂಚಾರಕ್ಕೆ ತಕ್ಕ ಬೆಡಗಿನ ಬಟ್ಟೆಗಳನ್ನುಟ್ಟು ವೈಯಾರದಿಂದ ಸಿಸ್ತುಮಾಡಿಕೊಂಡು ಕುಲುಕುತ್ತ ಹೊರಟು ಆ ಚಕ್ಕನ್ನು ಮುರಿಸಿ ಹಣವನ್ನು ತೆಗೆದುಕೊಂಡಳು. ಅಲ್ಲಿಂದ ಟೆಲಿಗ್ರಾಫ್ ಆಫೀಸಿಗೆ ಹೋಗಿ ಅಲ್ಲಿನ ಮ್ಯಾನೇಜ ರೊಡನೆ ರಹಸ್ಯವಾಗಿ ಬಹಳಹೊತ್ತು ಮಾತಾಡಿದಳು.

ತಿಲಮೆಯು ಆ ಆಫೀಸಿನೊಳಕ್ಕೆ ಹೋದುದನ್ನು ಒಬ್ಬ ವೃದ್ಧನು ಗಮನ ವಿಟ್ಟು ನೋಡುತ್ತಿದ್ದು ಅವಳು ಹಿಂದಕ್ಕೆ ಹೋದನಂತರ ತಾನೂ ಆ ಮ್ಯಾನೇಜರ ನನ್ನು ಕಂಡು ಕೃತಕವೇಷಕ್ಕೆ ಸಂಬಂಧಪಟ್ಟ ತನ್ನ ಗಡ್ಡವನ್ನು ಬಿಚ್ಚಿ ಜೇಬಿನಲ್ಲಿ ಟ್ಟುಕೊಂಡು ನಿಲ್ಲಲು, ಆ ಮ್ಯಾನೇಜರನು ಈ ಮುದುಕನನ್ನು ಸುಲಭವಾಗಿ ಗುರ್ತಿಸಿ—ಓಹೋ! ಇದೇನು ವಿಠಲಮೂರ್ತಿ! ಅಯ್ಯ, ನನ್ನಿಂದ ಏನು ಕೆಲಸ ವಾಗಬೇಕು? ಎಂದನು.

ವಿಠಲನು ಆ ದಿನ ಪ್ರಾತಃಕಾಲ ತನ್ನ ಹಳ್ಳಿಯಿಂದ ಹಿಂದಿರುಗಿ ಬಂದಿ ದ್ದನು. ಪೇಟೆಯಲ್ಲಿ ಹೋಗುತ್ತಿದ್ದಾಗ ಆಕಸ್ಮಾತ್ತಾಗಿ ತಿಲಮೆಯನ್ನು ಕಾಣಲು ಅವಳನ್ನು ಹಿಂಬಾಲಿಸಿ ಬ್ಯಾಂಕಿಗೂ ಹೋಗಿದ್ದು, ಅಲ್ಲಿ ಅವಳು ವಾರಣಲಾಲನ ಚಕ್ಕನ್ನು ಮುರಿಸಿ ನೋಟುಗಳನ್ನು ತೆಗೆದುಕೊಂಡುದನ್ನು ನೋಡಿ ಭೇತಾಳ ನಂತೆ ಬೆನ್ನಹತ್ತಿ ಆ ಟೆಲಿಗ್ರಾಫ್ ಆಫೀಸಿಗೂ ಬಂದಿದ್ದನು.

ವಿಠಲ—ರಹಸ್ಯವಾಗಿ—ಆ ಹೆಂಗಸು ಇಲ್ಲಿಗೇತಕ್ಕೋಸ್ಕರ ಬಂದಿದ್ದಳೈ ಎಂಬುದು ಈಗ ಸ್ವಲ್ಪ ಬೇಕಾಗಿದೆ.

ಮ್ಯಾನೇಜರ್_ಅವಳು ಲಲಿತಪಟ್ಟಣದಲ್ಲಿರುವ ತನ್ನ ಕಡೆಯವರಿಗೆ ಹಣ ವನ್ನು ತಂತಿ ಮಣಿಯಾರ್ಡರ್ ಮೂಲಕ ಕಳುಹಿಸುವುದಕ್ಕೋಸ್ಕರ ಇಲ್ಲಿಗೆ ಬಂದಿದ್ದಳು.

ವಿಠಲ_ನಿನಗೂ ಅವಳ ಪರಿಚಯವುಂಟೊ ?

ಮ್ಯಾನೇಜರ್_ಇಲ್ಲ, ಇಷ್ಟಕ್ಕೆ ಮುಂಚೆ ನಾನವಳನ್ನು ನೋಡಿಯೇ ಇರಲಿಲ್ಲ.

ವಿಠಲ_ಎಷ್ಟು ಹಣ ?

ಮ್ಯಾನೇಜರ್_ಹತ್ತುಸಾವಿರ ರೂಪಾಯಿಗಳು.

ವಿಠಲ_ಯಾರಿಗೆ ಕಳುಹಿಸಿದುದು !

ಮ್ಯಾನೇಜರ್_ಚಾರುಚಂದ್ರನ ಹಿರಿಯಮಗ ವನಜಚಂದ್ರನಿಗೆ.

ವಿಠಲ_ಇನ್ನೇನಾದರೂ ಸಮಾಚಾರವನ್ನು ಕಳುಹಿಸಿದಳೊ ?

ಮ್ಯಾನೇಜರ್_ಅಹಾ ! ಕಳುಹಿಸಿದ್ದಾಳೆ, ಇಗೋ, ಇಲ್ಲಿದೆ_'ಇದು ನಿನ್ನ ಸಮಯಕ್ಕೊದಗಬಹುದು. ಆ ಮುದುಕನ ವಿಷಯವೇನು ? ನೀನು ಕೂಡಲೇ ಇಲ್ಲಿಗೆ ಬಂದುಬಿಡತಕ್ಕುದು. ನಾವು ಲಲಿತಪಟ್ಟಣದಲ್ಲಿ ನಡೆಸುವುದಕ್ಕಿಂತ ಅನು ಕೂಲವಾಗಿ ಎಲ್ಲವನ್ನೂ ಇಲ್ಲೆ ಏರ್ಪಡಿಸಬಲ್ಲೆವು.—ತಿಲೋತ್ತಮೆ.'

ವಿಠಲ_ಮ್ಯಾನೇಜರ್, ನಿನ್ನ ಸಹಾಯವು ಅಮೂಲ್ಯವಾದುದು. ಮುಂದೆ ಇದಕ್ಕೇನು ಉತ್ತರಬರುವುದೋ ಅದರ ಒಂದು ಪ್ರತಿ (ಕಾಪಿ) ಯನ್ನು ದಯ್ಮ ವಿಟ್ಟು ನನಗೋಸ್ಕರ ತೆಗೆದಿಟ್ಟು ಇರು. ನಾನು ಇಲ್ಲಿಗೆ ಬಂದಿದ್ದ ಸಂಗತಿಯನು ಯಾರಿಗೂ ಹೇಳಬೇಡ.

ಮ್ಯಾನೇಜರ್ ಹಾಗೇ ಆಗಲೆಂದು ಒಪ್ಪಿಕೊಳ್ಳಲು ವಿಠಲನು ಹೊರಟು ಹೋದನು. ವಿಠಲನು ಇಲ್ಲಿ ತಿಳಿದ ಈಯಂಶದಿಂದ_ತಿಲಮೆಗೂ ವನಜಚಂದ್ರ ನಿಗೂ ಸಾಮಾನ್ಯಸ್ನೇಹಮಾತ್ರವೇ ಇರಲಾರದೆಂದೂ ಅದಕ್ಕಿಂತ ದೊಡ್ಡದಾದ ಏನೋ ಒಂದು ಸಮೀಪಸಂಬಂಧವೇ ಇರಬೇಕೆಂದೂ ಮನಸ್ಸಿನಲ್ಲಿ ನಿಶ್ಚ ಯಿಸಿದನು.

---

# ಹದಿಮೂರನೆಯ ಪರಿಚ್ಛೇದ

ವಿಠಲನು ವಾರಣಲಾಲನ ಮನೆಗೆ ಹೋಗಿ ಸೋದರಮಾವ ವಾಗೀಶನಂತೆ ನಟಿಸಿದನು, ಸೌದಾಮಿನಿಯೂ ಸಂತೋಷವನ್ನು ನಟಿಸಿ ಸುಖಾಗಮನವನ್ನು ಬಯಸಿದಳು. ಆ ರಾತ್ರಿ ವಾರಣನು ಮನೆಗೆ ಬರುವಾಗ್ಗೆ ಸುಮಾರು ಹನ್ನೆರಡು ಘಂಟೆ. ಮತ್ತು ಆತನ ತಲೆಗೆ ತುಂಬ ಮತ್ತು ಏರಿದ್ದಿತು. ಇದನ್ನು ವಿಠಲನು ಚುರುಕಾಗಿ ಗ್ರಹಿಸಿಕೊಂಡನು. ಮಾರನೆಯ ಬೆಳಗ್ಗೆ ವಾರಣನೂ ವಿಠಲನೂ ಜತೆಯಲ್ಲಿ ಬಹಳ ದೂರದ ವರೆಗೂ ಗಾಳಿಸವಾರಿ (ವಾಕಿಂಗ್) ಹೊರಟಿದ್ದರು.

ಆಗ ವಿಠಲನು_ಆ ಸ್ತ್ರೀಯನ್ನು ನಂಬತಕ್ಕುದಲ್ಲವೆಂತಲೂ ಹಣವನ್ನು ಕಸುಗೊಳ್ಳುವುದೇ ಅವಳ ಮುಖ್ಯೋದ್ದೇಶವಾದುದರಿಂದ ಅವನ (ವಾರಣನ) ಯೋಗಕ್ಷೇಮಗಳನ್ನು ಪರಿಗಣಿಸತಕ್ಕವಳಲ್ಲವೆಂತಲೂ ಎಷ್ಟೆಷ್ಟೋ ವಿಧವಾಗಿ ವಾರಣನಿಗೆ ಬುದ್ಧಿವಾದ ಹೇಳಿದರೂ ಅವನು ಒಂದಕ್ಕೂ ಕಿವಿಗೊಡದೆಯೂ ಕಡೆಗೆ 'ಊ' ಗುಟ್ಟದೆಯೂ ತುಟಸ್ಥನಾಗಿದ್ದನು. ಆದರೂ ಬಿಡದೆ ವಿಠಲನು_ನಿನ್ನೆ ನೀನು ಹತ್ತು ಸಾವಿರ ರೂಪಾಯಿಗಳನ್ನು ಕೊಡಲಿಲ್ಲವೆ ?_ಎಂದನು.

ವಾರಣ_ಈ ಮಾತನ್ನು ಕೇಳಿದ ಕೂಡಲೆ ವಿಸ್ಮಿತನಾಗಿ_ಅದು ನಿನಗೆ ಹೇಗೆ ಗೊತ್ತಾಯಿತು ?

ವಿಠಲ_ನಾನು ನಿನ್ನ ಚೆಕ್ಕನ್ನೇ ನೋಡಿದೆನು.

ವಾರಣ_ಎಲ್ಲಿ ನೋಡಿದೆ ?

ವಿಠಲ_ಬ್ಯಾಂಕಿನಲ್ಲಿ.

ವಾರ_ಒಳ್ಳೆಯದು. ಹಣವನ್ನೇನೋ ಕೊಟ್ಟುದಾಯಿತು. ಆಷ್ಟೇ. ಇನ್ನೇನೂ ಮುಂದಕ್ಕೆ ಕೊಡುವುದಿಲ್ಲ.

ವಿಠಲ_ಅವಳು ಆ ಹಣವನ್ನೇನು ಮಾಡಿದಳು ಬಲ್ಲೆಯಾ ?

ವಾರಣ—ಅವಳೇನಾದರೂ ಮಾಡಿಕೊಳ್ಳಲಿ. ಅದನ್ನೆಲ್ಲಾ ಕಟ್ಟಿಕೊಂಡು ನಿನಗೇನು !

ವಿಠಲ—ವಾರಣ, ನೀನು ಮಾಡುತಿರುವುದು ತಪ್ಪುಕೆಲಸ. ಅವಳು ನಿನ್ನನ್ನು ಹಾಳುಮಾಡುವಳು.

ವಾರಣ—ಹಾಗಾದರೆ ಅವಳು ನನ್ನನ್ನು ನಾಶಮಾಡಲಿಯೇಳು.

ವಿಠಲ—ಅವಳೂ ಈಗ ನಿಮ್ಮ ಮನೆಯಲ್ಲಿ ಬಂದು ಸೇರಿಕೊಂಡಿರುವವಳೂ ಸೇರಿ ನಿನ್ನ ಸಹೋದರಿಗೆ ವಿರೋಧವಾಗಿ ಏನೇನು ಮಾಡಿದಾರೆಂಬುದು ನಿನಗೆ ಗೊತ್ತಿಲ್ಲವೊ ?

ವಾರಣ—ತಿಲವೆಯು ಈ ಕೃತ್ಯದಲ್ಲಿ ಸೇರಿರುವಳೆಂಬುದನ್ನು ನೀನು ದೃಢ ಪಡಿಸಲಾರೆ.

ವಿಠಲ—ಅವಳು ನಿನ್ನ ತಂಗಿಯನ್ನು ಅಟಮರಿಸುವುದರಲ್ಲಿ ಭಾಗಿನಿಯಾಗಿ ಘುವಳೆಂಬುದನ್ನು ಮಾತ್ರವಲ್ಲದೆ ಅದಕ್ಕಿಂತ ದೊಡ್ಡದಾದ, ಮಾಡಬಾರದ ಇನ್ನೂ ಅನೇಕ ಕ್ರೂರಕೃತ್ಯಗಳನ್ನು ನಡೆಯಿಸಿರುವಳೆಂಬುದನ್ನು ನಾನು ರುಜುವಾತು ಮಾಡಬಲ್ಲೆ.

ವಾರಣ—ನಿನ್ನ ಕೈಲಾದರೆ ರುಜುವಾತು ಮಾಡು ನೋಡೋಣ. ಅದಿಲ್ಲ, ‘ ರುಜುವಾತು ಮಾಡಬಲ್ಲೆ. ಇನ್ನೂ ಏನೇನೋ ದೊಡ್ಡ ದೊಡ್ಡದನ್ನು ಮಾಡ ಬಲ್ಲೆ’ ಎಂದು ಹೇಳುತ್ತ ಎಲ್ಲವನ್ನೂ ಬಲ್ಲೆ ಬಲ್ಲೆ ಎನ್ನುವುದರಲ್ಲೇ ಪರ್ಯವಸಾನ ಮಾಡುತ್ತಿದ್ದೀಯೆ. ನಿನಗೆ ಅಷ್ಟು ವಿಷಯಗಳೇನಾದರೂ ಗೊತ್ತಿದ್ದರೆ ಪ್ರಫು ಲ್ಲೆಯನ್ನೇತಕ್ಕೆ ಪತ್ತೆ ಮಾಡಲಾರದಿದ್ದೀಯೆ ?

ವಿಠಲ—ವಾರಣ, ನಾನು ಪ್ರಫುಲ್ಲೆಯನ್ನು ಪತ್ತೆ ಮಾಡುವೆನು. ಮತ್ತು ಸಮಯಬಂದಾಗ ಕರೆಯಿಸಲೂ ಕರೆಯಿಸುವೆನು. ಈ ನೀಚ ಸ್ತ್ರೀಯನ್ನು ನೀನ್ನೈ ನಾದರೂ ಬಿಟ್ಟುಬಿಡದಿದ್ದರೆ ನೀನು ನಾಶವಾಗುವುದು ಖಂಡಿತ.

ವಾರಣ—ವಿಠಲ, ನಿನಗೆ ಗೊತ್ತಿಲ್ಲ. ಆ ಸುಂದರಿಯಲ್ಲಿ ನನಗೆ ಅಪಾರ ವಾದ ಪ್ರೇಮ.

ವಿಠಲ—ವಾರಣ, ನೀನು ಅವಳನ್ನು ಬಿಟ್ಟೇಬಿಡಬೇಕು.

ವಾರಣ—ನನ್ನಿಂದಾಗದು.

ವಾರಣನು ಮೂರ್ಖ. ಕಾರ್ಯಕಾರಣಗಳನ್ನು ಬಿಚ್ಚಿ ತೋರಿಸಿ ಎಷ್ಟು ವಿವೇಕ ಹೇಳಿದರೂ ಕೇಳಲಿಲ್ಲವಾಗಿ ಇನ್ನು ಮುಂದಕ್ಕೆ ಚರ್ಚೆ ಮಾಡದೆ ವಿಠಲನು ಸುಮ್ಮನಾದನು. ಇಬ್ಬರೂ ಹಿಂದಿರುಗಿ ಬಂದು ಒಂದು ಕೊಠಡಿಯೊಳಕ್ಕೆ ಹೋದರು. ಬೀದಿಯ ಕಡೆಯ ಕಿಟಕಿಯಲ್ಲಿ ಒಂದು ಕಾಗದವಿದ್ದಿತು. ಅದು ಪ್ರಾಯಶಃ ಆಗತಾನೆ ಬಂದಿರಬಹುದು. ಅದನ್ನು ಇನ್ನೂ ಯಾರೂ ನೋಡಿರಲಿಲ್ಲ. ವಿಠಲನು ಮೊದಲು ಅದನ್ನೋದಿನೋಡಿಕೊಂಡನು. ಅದು ಲಲಿತಪಟ್ಟಣದಿಂದ ಬಂದಿದ್ದಿತು. ತತ್‌ಕ್ಷಣ ವಿಸ್ಮಿತನಾಗಿ ಬೆರಳು ಕಡಿದುಕೊಂಡು 'ಆಹಾಹಾ!' ಎಂದನು.

ವಾರಣ—ಅದೇನು ಅಂತಹ ಆಶ್ಚರ್ಯ?

ವಿಠಲ—ಇಗೊ, ಲಲಿತಪಟ್ಟಣದಿಂದ ಕಾಗದ ಬಂದಿದೆ. ನಿನ್ನೆ ರಾತ್ರಿ ಚಾರುಚಂದ್ರನು ಹೃದಯರೋಗದಿಂದ ಸ್ವರ್ಗಸ್ಥನಾದನೆಂದು ತಿಳಿಸುತ್ತದೆ. ವಾರಣ, ಚಾರುಚಂದ್ರನು ಹೃದಯರೋಗದಿಂದ ಸತ್ತುದು ಸುಳ್ಳು. ಅವನನ್ನು ಕೊಲೆ ಮಾಡಿದಾರೆ. ಮತ್ತು ನಿನ್ನನ್ನು ಬಲೆಗೆ ಸಿಕ್ಕಿಸಿಕೊಂಡಿರುವ ತಿಲಮೆಯು ಆ ಹತ್ಯಾಕಾರಿಗಳಲ್ಲೊಬ್ಬಳು. ಪ್ರಾಯಶಃ ನಿನ್ನ ಹತ್ತು ಸಾವಿರ ರೂಪಾಯಿಗಳು ಆ ಕೊಲೆಗಾಗಿ ವಿನಿಯೋಗಿಸಲ್ಪಟ್ಟಿದೆ.

ವಾರಣ—ಇದಕ್ಕೆಲ್ಲ ನಿನಗೇನು ಆಧಾರವಿದೆ?

ವಿಠಲ—ಈಗ ಯಾವ ಆಧಾರವೂ ಇಲ್ಲ. ಆದರೆ ನನಗೊಂದು ವಿಷಯ ಗೊತ್ತುಂಟು. ತಿಲಮೆಯು ವನಜಚಂದ್ರನಿಗೆ ಹಣವನ್ನು ಕಳುಹಿಸಿದಳು. ಭರತ ಮಾಧವಿಯೆಂದು ರುಜು ಮಾಡಿರಲಿಲ್ಲ. ತಿಲೋತ್ತಮೆಯೆಂದು ರುಜು ಮಾಡಿದ್ದಳು. ನನಗೇನೋ ಇವಳು ಮಾಧವನ ಹೆಂಡತಿಯಾಗಿ ತೋರುವುದಿಲ್ಲ. ಇವಳು ವನಜಚಂದ್ರನ ನಾಯಿಕೆಯೇ ಆಗಿರಬೇಕು.

ವಾರಣ—ವಿಠಲ, ಇದು ನಿನಗೆ ದೃಢವೋ?

ವಿಠಲ_ಕಾಲಬರಲಿ. ನಾನು ರುಜುವಾತು ಮಾಡಿಕೊಡುವೆನು. ಈ ಪಾಪಿಗಳೆಲ್ಲ ಸೇರಿ ಒಂದಾನೊಂದು ಉದ್ದೇಶಕ್ಕೋಸ್ಕರ ಕಾಂತನಾಥನನ್ನು ಕೊಂದರು; ಚಾರುಚಂದ್ರನನ್ನು ಕೊಲ್ಲಿಸಿದರು. ನೋಡುವೆಯಂತೆ, ಇನ್ನು ಸ್ವಲ್ಪ ದಿನಗಳಲ್ಲೇ ಆ ವನಜಚಂದ್ರನೂ ಇಲ್ಲಿಗೆ ಬರುವನು.

ವಾರಣನ ಮನಸ್ಸು ಅಲ್ಲೋಲಕಲ್ಲೋಲವಾಯಿತು. ಅವನು ಎರಡು ಕೈಗಳನ್ನೂ ಹಿಂದಕ್ಕೆ ಜೋಡಿಸಿಕೊಂಡು ಶತಪಥ ತುಳಿಯುತ್ತಿದ್ದನು. ಗಾಬರಿ ಹೆಚ್ಚಿತು. ಈ ಪತ್ತೆದಾರನು ಇಷ್ಟು ದೃಢವಾಗಿ ಹೇಳುವುದಕ್ಕೆ ಏನೋ ಪ್ರಬಲ ಕಾರಣವಿರಬೇಕೆಂದುಕೊಂಡನು. ಆದರೂ ಅವನಿಗೆ ತಿಲಮೆಯಲ್ಲಿದ್ದ ಅನುರಾಗವು ಕಿಂಚಿತ್ತೂ ನ್ಯೂನವಾಗಲಿಲ್ಲ. ಇಷ್ಟೇ ಅಲ್ಲ, ತಿಲಮೆಯು ಇನ್ನೂ ಹನ್ನೆರಡು ಜನರನ್ನು ಕೈಯಾರ ಕೊಂದು ಅವಳ ಹಸ್ತವು ರಕ್ತಸಿಕ್ತವಾಗಿದ್ದರೂ ವಾರಣನು ಅವಳನ್ನು ಬಿಡಲಾರದೆ ಇದ್ದನು. ಅಯ್ಯೋ! ಮೋಹಪಾಶದ ಮಹಾ ಮಹಿಮೆಯೇ!

ವಾರಣ-ವಿಠಲ, ನೀನು ಈ ದಿನ ನನ್ನ ಸಂಗಡ ತಿಲಮೆಯ ಮನೆಗೆ ಬರುತ್ತೀಯಾ?

ವಿಠಲ_ನಾನು ಬಂದು ಮಾಡತಕ್ಕುದೇನು?

ವಾರಣ_ನೀನೇನೂ ಮಾಡಬೇಕಾದುದಿಲ್ಲ. ಅವಳ ಚಹರೆಗಳನ್ನೆಲ್ಲ ಚೆನ್ನಾಗಿ ಪರೀಕ್ಷಿಸಿ ತಿಳಿಯುವೆಯಂತೆ. ಅಲ್ಲದ ಏನೋ ಪ್ರಸ್ತಾವದಮೇಲೆ ಚಾರುಚಂದ್ರನ ಮರಣವಾರ್ತೆಯನ್ನು ಹೇಳಿದರೆ ಅವಳ ಮುಖಭಾವವು ಹೇಗಾಗುವುದೋ ಅಗತ್ಯವಾಗಿ ನೋಡತಕ್ಕುದು.

ವಿಠಲ_ನೀನು ಇನ್ನುಮೇಲಾದರೂ ಕಣ್ಣುಬಿಟ್ಟು ನೋಡಿ ವಿವೇಕ ತಂದುಕೊಂಡು ಅವಳನ್ನು ಬಿಟ್ಟುಬಿಡುವುದಾದರೆ ನಾನು ಬರುತ್ತೇನೆ.

ವಾರಣನೂ ವಿಠಲನೂ ಹೀಗೆ ಮಾತಾಡುತ್ತಿರುವಾಗ ಕದವು ಸದ್ದಾಯಿತು. ತೆರೆದು ನೋಡಲು ಸೌದಾಮಿನಿ! ಅವಳು ಕಾಫಿಯನ್ನೂ ರೊಟ್ಟಿಯನ್ನೂ ಸಿದ್ಧಪಡಿಸಿ ತೆಗೆಯಿಸಿಕೊಂಡು ಬಂದಿದ್ದಳು. ವಿಠಲನು ಆಪಾದಮಸ್ತ

ಕವೂ ಅವಳನ್ನು ನೋಡಿ_ಪ್ರಫುಲ್ಲೆ, ಅತ್ಯಾಶ್ಚರ್ಯಕರವಾದ ನಿನ್ನ ಮದುವೆಯ ಸಮಾಚಾರವನ್ನು ಈ ವಾರಣನು ನನಗೆ ಹೇಳಿದನು. ಅಲ್ಲದೆ ಈ ದಿನದ ವರ್ತಮಾನದಲ್ಲಿ ನಿಮ್ಮ ಮಾವನೂ ಕಾಲವಾದಂತೆ ತಿಳಿಯಬರುತ್ತದೆ.

ಸೌದಾಮಿನಿಯ ಮುಖವು ಬಾಡಿತು. ಅವಳೇನೂ ಮಾತಾಡದೆಯೇ ಥಟ್ಟನೆ ಹೋಗಿ ಒಂದು ಮೂಲೆಯಲ್ಲಿ ನಿಂತಳು. ವಿಠಲನನ್ನು ದೃಷ್ಟಿಸಿ ನೋಡಿದಳು,

ವಿಠಲ_ಅಮ್ಮಯ್ಯ, ಈ ಭಯಂಕರವಾದ ಸುದ್ದಿಯಿಂದ ನಾನು ಬಹು ವ್ಯಸನಪಡುತ್ತಿದ್ದೇನೆ. ಅಯ್ಯೋ ! ಪಾಪ ! ಆ ಚಾರುಚಂದ್ರನ ಮರಣವು ಏನೋ ಕೃತ್ರಿಮದಿಂದ ನಡೆದಂತೆ ನನಗೆ ತೋರುತ್ತಿದೆ. ಬಹುಶಃ ಆತನ ಹಿರೀ ಮಗನ ಮೂಲಕ ಈ ಪಾಪಕೃತ್ಯ ನಡೆದಿರಬಹುದು. ಆಹಾ ! ಈಗೇನಾದರೂ ಆ ಪ್ರಸಿದ್ಧ ಪತ್ತೆದಾರನಾದ ವಿಠಲಮೂರ್ತಿಯಿದ್ದಿದ್ದರೆ !

ಸೌದಾಮಿನಿ_ಅಯ್ಯೋ ! ಆ ವಿಠಲನು ಹಿಂದಿರುಗಿ ಬರುವಹಾಗಿಲ್ಲ ! ಎಂದು ಬಾಯಿತಪ್ಪಿ ಹೇಳಿಬಿಟ್ಟಳು.

ವಿಠಲ_ಹಾಗೆ ಹೇಳಬೇಡಮ್ಮ ! ಆ ರಾತ್ರಿ ನನ್ನ ಕೊಠಡಿಯಲ್ಲಿ ವಿಚಿತ್ರ ವಾಗಿ ಕಳುವಾಗಿದ್ದ ಸಾಮಾನುಗಳೆಲ್ಲ ಇನ್ನೂ ಅವನ ಬಳಿಯಲ್ಲೇ ಇವೆ. ಸದ್ಯಃ ಅವನು ಸಿಕ್ಕಿದರಾದೀತು !

ಸೌದಾಮಿನಿ_ಹಾಗಾದರೆ ನೀನಿನ್ನೂ ಆ ಸಾಮಾನನ್ನು ಹಿಂದಕ್ಕೆ ತೆಗೆದು ಕೊಳ್ಳಲೇ ಇಲ್ಲವೆ ?

ಸೌದಾಮಿನಿ_ಇದೇನು ! ನಮ್ಮ ಮಾವ ಚಾರುಚಂದ್ರನ ಮರಣವು ಏನೋ ಕೃತ್ರಿಮದಿಂದ ನಡೆದುದೆನ್ನುತ್ತೀಯೆ ? ಆತನಿಗೆ ಬಹು ದಿನಗಳಿಂದ ವ್ಯಾಧಿಯುಂಟಾಗಿತ್ತೆಂದು ಕೇಳಿದ್ದೆನಲ್ಲಾ !

ವಿಠಲ_ಅದೇನೋ ನನಗೆ ತಿಳಿಯದು. ನೀನು ಲಲಿತಪಟ್ಟಣಕ್ಕೆ ಯಾವಾಗ ಹೊರಡುವೆ ?

ಸೌದಾಮಿನಿ—ನಾನಿನ್ನೂ ಸದ್ಯಕ್ಕೆ ಹೊರಡುವ ಹಾಗಿಲ್ಲ. ನನ್ನ ಪತಿಯ ಅಣ್ಣನಾದ ವನಜಚಂದ್ರನು ಇನ್ನು ಕೆಲವು ದಿನಗಳಲ್ಲೇ ಈ ನವನಗರಿಗೆ ಬರುವುದಾಗಿ ಕಾಗದ ಬರೆದಿದಾನೆ. ಅದನ್ನು ನೋಡಿಕೊಂಡು ತರುವಾಯ ಹೊರಡಬೇಕು. ಈಗ ಆತನೇ ಮನೆಯ ಯಜಮಾನನಷ್ಟೆ!

ಉಪಹಾರವಾದನಂತರ ವಾರಣನೂ ವಿಠಲನೂ ತಿಲಮೆಯ ಮನೆಗೆ ಹೋದರು. ಅವಳು ಬಹು ಆದರಣೆಯಿಂದ ಇವರನ್ನು ಬರಮಾಡಿಕೊಂಡಳು. ಇವರೆಲ್ಲ ಮಾತಾಡುತ್ತ ಕುಳಿತಿದ್ದಾಗ ವಿಠಲನು ಚಾರುಚಂದ್ರನ ಮರಣವಾರ್ತೆಯನ್ನು ಹೇಳಿದನು. ಆದರೂ ತಿಲಮೆಯು ಯಾವುದೊಂದು ವಿಕಾರವನ್ನೂ ತೋರ್ಪಡಿಸಲಿಲ್ಲ.

ವಿಠ— ಅದು ಸಹಜವಾದ ಮರಣವಲ್ಲವೆಂದೂ—ಕೊಲೆಯಾಗಿದೆಯೆಂದೂ ಮಗನಾದ ವನಜಚಂದ್ರನೇ ಈ ದುಷ್ಕಾರ್ಯೋದ್ಯೋಗಿಯೆಂದೂ ಈಗ ಅವನನ್ನು ಸರ್ಕಾರದವರು ದಸ್ತಗಿರಿ ಮಾಡಿಧಾರೆಂದೂ ಪ್ರವಾದವಿದೆ.

ಈಗ ವಿಠಲನ ನಿರೀಕ್ಷಣೆಯು ಸಫಲವಾಯಿತು. ತಿಲಮೆಯು ಕಳೆಗುಂದಿದಳು. ಮುಖವು ಜೋಲುಬಿದ್ದಿತು. ತುಟಿಗಳೊಣಗಿದವು ಮೈಯಲ್ಲಿ ಬೆವರು ತೊಟ್ಟಿಡುತ ಬಂದಿತು. ಕಣ್ಣು ಕಳೆಗುಂದಿತು.

ತಿಲಮೆ—ವಾಗೀಶಮಾವಯ್ಯ, ಆ ನಮ್ಮ ವನಜಚಂದ್ರನನ್ನು ದಸ್ತಗಿರಿಮಾಡಿದಾರೆಂಬುದು ನಿನಗೆ ಚೆನ್ನಾಗಿ ಗೊತ್ತುಂಟೊ?

ವಿಠಲ—ಯಾವುದೋ ಒಂದು ವರ್ತಮಾನ ಪತ್ರಿಕೆಯಲ್ಲಿ ಓದಿದ ಜ್ಞಾಪಕ.

ತಿಲಮೆ—ಆ ಪತ್ರಿಕೆ ನಿನ್ನಲ್ಲಿದೆಯೆ?

ವಿಠಲ—ನನ್ನ ಹತ್ತಿರವಿಲ್ಲ, ಅದೇನು ನಿನಗೆ ಅಷ್ಟು ಕುತೂಹಲ?

ತಿಲಮೆ—ಉಂ, ಸ್ವಲ್ಪ ಉಂಟು. ನಾನು ಒಂದುಸಲ ಆತನನ್ನು ನೋಡಿದ್ದೆ.

ವಿಠಲ—ನಿನಗೂ ಆತನಿಗೂ ತುಂಬ ಆಪ್ತತೆಯುಂಟೆಂದು ತೋರುವುದು. ಆದುದರಿಂದಲೇ ನೀನು ಅವನಿಗೆ ಹಣವನ್ನು ಕಳುಹಿಸಿರುವೆ.

ತಿಲಮೆ_ಹುಬ್ಬುಗಂಟಿಕ್ಕಿ_ಏನು ! ಅದೇನು ಹಾಗೆಂದರೆ ?

ತಿಲಮೆಯು ವಾರಣನನ್ನು ಬಿರುಗಣ್ಣುಬಿಟ್ಟು ನೋಡಿದಳು. ಅವನೇನಾದರೂ ತನ್ನ ಸೋದರಮಾವನಿಗೆ ಈ ಹಣದ ಸಂಗತಿಯನ್ನು ಹೇಳಿರಬಹುದು ಎಂದು ಅವಳ ಅನುಮಾನ.

ವಿಠಲ_ನನಗಿನ್ನೇನೂ ತಿಳಿಯದು. ಆ ವನಜಚಂದ್ರನು ಬಾಲ್ಯದಿಂದ ದುಂದುಗಾರ. ಗುರುತುಪರಿಚಯಮಾತ್ರವಿದ್ದವರಲ್ಲಿ ಕೂಡ ಸಾಲಮಾಡುತ್ತಿರುವುದೇ ಅವನ ಸ್ವಭಾವ. ಅಲ್ಲದೆ ಕೊಟ್ಟವರೊಡವೆಯನ್ನು ಹಿಂದಕ್ಕೆ ಕೊಡುವುದೇ ಕಷ್ಟ. ಇನ್ನುಮೇಲೆ ಅಂತಹ ತೊಂದರೆಯೇನೂ ಇಲ್ಲ. ತಂದೆಯು ಕಾಲವಾಗಿರುವುದರಿಂದ ಮುಂದೆ ಜಹಗೀರಿ ಮುಂತಾದ ಪಿತ್ರಾರ್ಜಿತವಾದ ಸಮಸ್ತ ಆಸ್ತಿಯೂ ಅವನಿಗೇ ಸೇರುವುದು. ನಿನ್ನ ಹಣವನ್ನೂ ಬೇಗನೇ ತೀರಿಸಿಬಿಟ್ಟಾನು. ಏನೂ ಸಂಶಯಪಡಬೇಡ

ವಿಠಲನು ಇದನ್ನೆಲ್ಲ ಹೇಳುತ್ತಿದ್ದಾಗ ತಿಲಮೆಗೆ ಗುಂಡಿಗೆಯೊಡೆಯಿತು. ಮರಣಕಂಪವುಂಟಾಯಿತು. ಇವರಿಬ್ಬರೂ ಬೇಗ ಹೊರಕ್ಕೆ ಹೊರಟುಹೋದರಾದೀತಲ್ಲಾ ಎಂದು ಹಾರಯಿಸಿದಳು. ಅವಳ ಪುಣ್ಯಕ್ಕೆ ತಕ್ಕಂತೆ ವಿಠಲ ವಾರಣರೂ ಎದ್ದು ಹೊರಟರು. ಇವರು ಕಣ್ಮರೆಯಾಗುವುದನ್ನೇ ಕಾದಿದ್ದು ಒಂದು ಕ್ಷಣವೂ ತಡಮಾಡದೆ ತಿಲಮೆಯು ಟೆಲಿಗ್ರಾಫ್ ಆಫೀಸಿಗೆ ಹೋಗಿ ವನಜಚಂದ್ರನಿಗೆ ಮತ್ತೊಂದು ಟೆಲಿಗ್ರಾಫನ್ನು ಕಳುಹಿಸಿದಳು.

ವಿಠಲನು ವಾರಣನಿಗೆ ಕೆಲವು ಬುದ್ಧಿವಾದವನ್ನು ಬೋಧಿಸಿ ಮನೆಗೆ ಹೋಗ ಹೇಳಿ ತಾನೊಬ್ಬನೇ ಹೊರಟು ತಿಲಮೆಯನ್ನು ಹಿಂಬಾಲಿಸಿದನು. ಅವಳು ಆಫೀಸಿನಿಂದ ಹಿಂದಿರುಗಿದ ಒಂದೆರಡು ನಿಮಿಷಗಳಲ್ಲೇ ತಾನೂ ಒಳಕ್ಕೆ ಹೋಗಿ ಅವಳು ಬರೆದುಕೊಟ್ಟುದರ ನಕಲು (ಕಾಪಿ)ನ್ನು ಮ್ಯಾನೇಜರಿಂದ ತೆಗೆದುಕೊಂಡು ನೋಡುವಲ್ಲಿ ಅದು 'ಚಾರುಚಂದ್ರನ ಮರಣವು ನಿಜವೆ ?' ಎಂಬ ಬರೀ ಪ್ರಶ್ನೆಯಾಗಿದ್ದಿತು. ವಿಠಲನು ಆ ಮ್ಯಾನೇಜರ ಸಂಗಡ ಮಾತಾಡುತ್ತಿದ್ದಹಾಗೆಯೇ ಒಬ್ಬಾನೊಬ್ಬ ಅಸಿಸ್ಟೆಂಟ್ ಮ್ಯಾನೇಜರು ಬೇರೆ ಕೊಠಡಿಯೊಳಗಿನಿಂದ ಬಂದು ಮ್ಯಾನೇಜರ ಕೈಗೆ ಒಂದು ಟೆಲಿಗ್ರಾಫನ್ನು ತಂದುಕೊಟ್ಟನು. ಅದು ವನಜಚಂ

ದ್ರನಿಂದ ತಿಲಮೆಗೆ ಬಂದ ಉತ್ತರ. ಅದರಲ್ಲಿ—'ಕಾಂತೆ, ತಿಲಮೆ, ತಂದೆಯು ಸತ್ತನು. ಎಲ್ಲಾ ಅನುಕೂಲ. ಎಲ್ಲರಿಗೂ ದ್ರವ್ಯ ಹಂಚಲ್ಪಟ್ಟಿದೆ. ನಾಳೆ ಕರ್ಮಕ್ಕೆ ಪ್ರಾರಂಭ. ಯಾವ ತೊಂದರೆಯೂ ಇಲ್ಲ. ನಾಳೆ ಶನಿವಾರ ಅಲ್ಲಿಗೆ ಹೊರಡುವೆನು. ವನಜಚಂದ್ರನ ರುಜು' ಎಂದು ಇದ್ದಿತು. ವಿಠಲನು ಬಹು ಕುತೂಹಲದಿಂದ ಇದನ್ನು ಓದಿಕೊಂಡು ಅದುವರೆಗೆ ನಟೇಶನೇನಾದರೂ ವರ್ತಮಾನವನ್ನು ಸಂಗ್ರಹಿಸಿದಾನೇನೋ ನೋಡೋಣವೆಂದು ಗುಟ್ಟಾಗಿ ತನ್ನ ಆಫೀಸಿಗೆ ಹೋದನು. ಅಲ್ಲಿನ ಕಾಗದ ಪತ್ರಗಳನ್ನು ನೋಡುವಲ್ಲಿ ತಾನು ಲಲಿತ ಪಟ್ಟಣದಲ್ಲಿ ನೇಮಿಸಿಕೊಂಡಿದ್ದ ಆಪ್ತನಾದ ಪತ್ತೇದಾರನಿಂದ ಒಂದು ಕಾಗದ ಬಂದಿದ್ದಿತು. ಅದರಲ್ಲಿ ಆತನು ವಿಠಲನು ಕೇಳಿರುವ ಸಂಗತಿಗಳನ್ನೆಲ್ಲ ಬಹು ಕಷ್ಟಪಟ್ಟು ಪತ್ತೆ ಮಾಡುತ್ತಿರುವುದಾಗಿಯೂ ಕಾಣಿಸಿದ್ದನು. ಚಾರುಚಂದ್ರನು ಖೂನಿಯಾದನು. ಈ ಪಿತೂರಿಯು ಪ್ರಾಯಶಃ ವನಜಚಂದ್ರನಿಂದಲೇ ನಡೆದಿದೆ. ತಾನು ನಿಜವಾದ ಹಕ್ಕುದಾರನಲ್ಲವೆಂದೂ ತನ್ನ ತಂದೆಯು ಮರಣವಾಗುವಾಗ್ಗೆ ಕಾಂತನಾಥನು ಬದುಕಿದ್ದರೆ ಎಲ್ಲವೂ ಅವನಿಗೇ ಸಿಕ್ಕಿಹೋಗುವುದೆಂದೂ ಯೋಚಿಸಿ ಮೊದಲು ಕಾಂತನಾಥನನ್ನೂ ಬಳಿಕ ಚಾರುಚಂದ್ರನನ್ನೂ ಕೊಲ್ಲಿಸಿದಾನೆ. ಈ ಕೃತ್ಯಕ್ಕೆ ನವನಗರಿಯಲ್ಲೂ ಕೆಲವು ಜನ ಸಹಾಯ ಮಾಡಿರಬಹುದು. ಮತ್ತೆ ಪ್ರಫುಲ್ಲೆಯನ್ನು ಹಾರಿಸುವುದು ಮಾತ್ರವಲ್ಲದೆ ಸಾಧ್ಯವಾದ ಮಟ್ಟಿಗೂ ಅವಳ ಅಣ್ಣ ವಾರಣಲಾಲನ ಆಸ್ತಿಯನ್ನು ಅಪಹರಿಸಿ ಅವನಿಂದ ಎಂಟೂಕಾಲಾಣೆಯ ಯೋಗ್ಯತಾಪತ್ರ (ಪಾಪರ್ ಸರ್ಟಿಫಿಕೇಟ್) ಕ್ಕೆ ದರಖಾಸ್ತು ಕೊಡಿಸಿ ಚಿಕ್ಕನಾಯಕನಹಳ್ಳಿಯ ಪಾತ್ರೆಯನ್ನು ಅವನ ಕೈಗೆ ಕೊಡಿಸಿ ಸಪ್ತಾಕ್ಷರೀ ಮಂತ್ರ (ಭವತಿಭಿಕ್ಷಾಂದೇಹಿ) ವನ್ನು ಅವನಿಗೆ ಉಪದೇಶಮಾಡಬೇಕೆಂಬುದೇ ಈ ದುರುಳರ ಉದ್ದೇಶ. ಕುಶಾಗ್ರಬುದ್ಧಿಯಾದ ವಿಠಲನು ಇದುವರೆಗೆ ದೊರೆತ ಎಲ್ಲಾ ಆಧಾರಗಳ ಮೇಲೆ ಇಷ್ಟನ್ನು ಊಹಿಸಿಕೊಂಡನು.

ವಾರಣನು ವಿಠಲನನ್ನು ಬಿಟ್ಟುಹೋದ ಕೂಡಲೆ ಮಾಧವ ಭಾಸ್ಕರರನ್ನು ಕಂಡನು. ಬಳಿಕ ಅವರಿಬ್ಬರೂ ಇವನನ್ನು ಪ್ರೋತ್ಸಾಹಿಸಿ ಎಲ್ಲಿಗೋ ಕರೆದುಕೊಂಡು ಹೋಗುತ್ತಿದ್ದರು.

ಅವರು ವಾರಣನಿಗೆ ಸ್ವಲ್ಪ ಮಿಠಾಯಿಯನ್ನು ಕೊಟ್ಟುದಲ್ಲದೆ ಅವನ ಭಾಗದ ಸಾರ್ವಕಾಲಿಕ ಮೃತ್ಯುವಾದ ವಾರುಣಿಯನ್ನು ಯಥೇಷ್ಟವಾಗಿ ಕೊಟ್ಟರು.

ವಾರಣನಿಗೆ ಆ ಕ್ಷಣವೇ ಅದರ ಮಹಿಮೆಯು ತೋರಬಂದು ಯಾರು ಏನು ಹೇಳಿದರೂ ಎಲ್ಲಕ್ಕೂ ಸಮ್ಮತಿಸುವಂತಾಯ್ತು. ಆಗ ಎಲ್ಲರೂ ಎಲ್ಲಿಗಾದರೊಂದು ರಹಸ್ಯಸ್ಥಾನಕ್ಕೆ ಹೋಗಿ ಇಸ್ಪೇಟ್ ಆಡಬೇಕೆಂದು ನಿಶ್ಚಯಿಸಿಕೊಂಡು ಬೀದಿಯಲ್ಲಿ ಹೋಗುತ್ತಿದ್ದರು. ಆಕಸ್ಮಾತ್ತಾಗಿ ತಿಲಮೆಯು ಎದುರಿಗೆ ಸಿಕ್ಕಿದಳು ಅವಳು ವಾರುಣೀಮದವಿಹ್ವಲನಾದ ವಾರಣನನ್ನೂ ಮಾಧವ ಭಾಸ್ಕರರನ್ನೂ ನೋಡಿ 'ಎಲ್ಲಿಗೆ ಹೋಗುವಿರಿ ? ' ಎಂದಳು.

ಮಾಧವ—ನಾವು ಆಟವಾಡುವುದಕ್ಕೆ ಹೋಗುತ್ತಿದೇವೆ.

ತಿಲಮೆಯ ಸ್ವಭಾವವು ಈಗ ಎಷ್ಟೋ ಬದಲಾಯಿಸಿ ಹೋಗಿದ್ದಿತು. ಅವಳು ಬಹು ಅಂತಃಕರುಣದಿಂದ—ಮಾಧವ, ನಮ್ಮ ವಾರಣನು ಈಯವಸ್ಥೆಯಲ್ಲಿರುವಾಗ ನೀವು ಇವನನ್ನು ಸಿಕ್ಕಿದಕಡೆಗೆಲ್ಲ ಒಯ್ಯುವುದು ಯುಕ್ತವಲ್ಲ.

ಮಾಧವ—ತಿಲಮೆ, ನಿನಗೆ ಈ ಧರ್ಮಜಾಡ್ಯ ಪ್ರಾಪ್ತವಾಗಿ ಎಷ್ಟುದಿನವಾಯಿತು ?

ತಿಲಮೆ—ಅದನ್ನೆಲ್ಲ ಕೇಳುವ ಹಕ್ಕು ನಿನಗಿಲ್ಲ. ವಾರಣನು ನಿಮ್ಮ ಸಂಗಡ ಬರುವುದಿಲ್ಲ. ನಾನೂ ಅವನೂ ಮನೆಗೆ ಹೋಗುತ್ತೇವೆ.

ಮಾಧವ—ಅದೇಕೆ ? ಅವನು ನಮ್ಮೊಡನೆಯೇ ಬರುತ್ತಾನೆ. ಅಲ್ಲವೇನಯ್ಯ ವಾರಣ ?

ವಾರಣನು ತಿಲಮೆಯನ್ನು ಹಿಂದಕ್ಕೆ ತಳ್ಳಿ—ಓಹೋ ! ನಾನು ನಿಮ್ಮೊಡನೆಯೇ ಬರುತ್ತೇನೆ.

ಇದರಿಂದ ತಿಲಮೆಗೆ ಚಂಡಕೋಪವುಂಟಾಗಿ ಕಿಡಿಕಿಡಿಯಾದಳು. ಕಣ್ಣು ಕೆಂಪೇರಿತು. 'ಇರಲಿ ಇದಕ್ಕೆ ತಕ್ಕದ್ದನ್ನು ಮಾಡುವೆನು' ಎಂದು ದೃಢಸಂಕಲ್ಪ ಮಾಡಿರುವಳೋ ಎಂಬುದನ್ನು ಅವಳ ಮುಖಭಾವವು ಸೂಚಿಸುತ್ತಿದ್ದಿತು, ಅಂದರೆ ವಾರಣನನ್ನು ಸುಲಿಯುವುದಕ್ಕೆ ತಾನು ಅವಕಾಶ ಕೊಡಬಾರದೆಂಬುದೇ ಅವಳ ದೃಢಸಂಕಲ್ಪ. ಹೀಗೆ ನಿಶ್ಚಯಿಸಿಕೊಂಡು ಅವರೊಡನೆ ತಾನೂ ಜೂಜಿನ ಮನೆಗೆ ಹೋದಳು.

ವಾರಣನ ವಿಷಯದಲ್ಲಿ ಕೇವಲ ಅಭಿಮಾನ ಶಾಲಿಯಾದ ಮತ್ತಾವುದೋ ಒಂದು ವ್ಯಕ್ತಿಯು ಅವರೆಲ್ಲರೂ ಒಳಕ್ಕೆಹೋದ ಸ್ವಲ್ಪಹೊತ್ತಿನ ಮೇಲೆ ತಾನೂ ಒಳಕ್ಕೆ ಪ್ರವೇಶಿಸಿತು. ವಾರಣನನ್ನು ಇತರರು ಸೂರೆಮಾಡಗೊಡಬಾರದೆಂಬುದೇ ಈ ವ್ಯಕ್ತಿಯ ಪರಮೋದ್ದೇಶ. ವಿಠಲನೇ ಈ ವ್ಯಕ್ತಿ. ತಿಲಮೆಯು ಇಲ್ಲಿಗೆ ಪ್ರವೇಶಿಸಿದುದನ್ನು ಕಂಡು ಇದೇನೋ ನೋಡೋಣವೆಂದು ಈತನೂ ಒಳಕ್ಕೆ ಬಂದನು. ಯಾವುದೋ ವೇಷವನ್ನು ಧರಿಸಿದ್ದ ವಿಠಲನು ಆ ಜೂಜಿನ ಕೊಠಡಿಯ ಒಂದು ಕೊನೆಯಲ್ಲಿ ಕುಳಿತು ನೋಟವನ್ನು ನೋಡುತ್ತಿದ್ದನು. ಆ ಪೋಲೀಪಟಾಲಂನವರಲ್ಲಿ ಯಾರೂ ಇವನನ್ನು ಗುರ್ತಿಸಲಾರದಿದ್ದರು. ಇಷ್ಟರ ಮೇಲೆ ಸಂಜೆಗತ್ತಲೆ. ಆಟಕ್ಕೆ ಮೊದಲಾಯಿತು. ವಾರಣನು ಸ್ವೇಚ್ಛೆಯಾಗಿ ಹೆಚ್ಚು ಹೆಚ್ಚು ಹಣವನ್ನೇ ಪಂಥವೊಡ್ಡುತ ಬಂದನು. ತಿಲಮೆಯು ಪರದೆಯೊಳಗಿನಿಂದ ಇದೆಲ್ಲವನ್ನೂ ನೋಡುತಿದ್ದಳು. ಆಟವು ಸುಮಾರು ಅರ್ಧ ಘಂಟೆ ನಡೆಯಿತು. ವಾರಣನು ಇಟ್ಟುದನ್ನೆಲ್ಲ ಕಳೆದುಕೊಳ್ಳುತ ಬಂದನು. ಬಳಿಕ ಸತ್ತವನಂತೆ ಮುಖವನ್ನು ಜೋಲುಹಾಕಿಕೊಂಡು ಕಂಭಕ್ಕೊರಗಿಕೊಂಡು ಕಣ್ಣಲ್ಲಿ ನೀರು ಸುರಿಸುತ್ತ ಬಂದನು. ನೋಟುಗಳು ಸವರನ್ನುಗಳು ಎಲ್ಲವೂ ಹೋಗಿ ಜೇಬು ಬರಿದಾಯಿತು. ಇದನ್ನೆಲ್ಲ ನೋಡುತ್ತಿದ್ದ ತಿಲಮೆಯು—ಇನ್ನೇನು, ಎದ್ದು ಏನಾದರೂ ಮಾಡೋಣ—ಎಂದು ಯೋಚಿಸುತ್ತಿರುವಷ್ಟರಲ್ಲಿ ವೇಷಧಾರಿಯಾಗಿದ್ದ ವಿಠಲನು ನುಗ್ಗಿ, ವಾರಣನನ್ನು ರೆಟ್ಟೆ ಹಿಡಿದು ಈಚೆಗೆ ಸೆಳೆದು ಅಲ್ಲಿದ್ದ ಹಣದ ಚೀಲವನ್ನು ಎಡಗೈಯಲ್ಲೂ ಪಿಸ್ತೂಲನ್ನು ಬಲಗೈಯಲ್ಲೂ ಹಿಡಿದುಕೊಂಡು ಅಟ್ಟಹಾಸದಿಂದ ಗರ್ಜಿಸುತ್ತ—'ನೀವೆಲ್ಲರೂ ಕಳ್ಳರು. ಇದು ಮೋಸದ ಆಟ. ನೀವು ಈ ಅರಿಯದ ತರುಣನನ್ನು ದರೋಡೆಮಾಡುತಿದ್ದೀರಿ. ಈ ಹಣವು ನನ್ನ ವಶದಲ್ಲಿರಲಿ. ನೀವು ಹಿಂದಕ್ಕೆ ನಿಲ್ಲಿ' ಎಂದನು.

ಒರಟನಾದ ಒಬ್ಬ ಜೂಜುಕೋರನು ಬಂದು ವಿಠಲನನ್ನು ಮುಷ್ಟಿಯಿಂದ ಗುದ್ದಿದರೂ ಲಕ್ಷ್ಯಮಾಡದೆ ಅವನನ್ನು ಆತನು ತಳ್ಳಿಬಿಟ್ಟನು. ಆ ಮನೆಯಲ್ಲೆಲ್ಲ ಗದ್ದಲ ಹೆಚ್ಚಿ ಹಾಹಾಕಾರಕ್ಕೆ ಮೊದಲಾಯಿತು. ವಾರಣನು ದಿಗ್ಭ್ರಾಂತನಾಗಿ ಆ ದೊಂಬಿಯ ಮಧ್ಯೆ ನುಣುಚಿಕೊಂಡು ಮೆಲ್ಲನೆ ಬಾಗಿಲಕಡೆಗೆ ಬಂದನು. ತಿಲಮೆಯು ಅದನ್ನೇ ನೋಡಿಕೊಂಡಿದ್ದು ಉಪಾಯದಿಂದ ಅವನನ್ನು ಸಾಗಿಸಿ

ಕೊಂಡು ಹೋದಳು. ಸಹಾಯಮಾಡುವುದಕ್ಕೆಂದು ಬಂದ ಮನುಷ್ಯನ ಗತಿಯೇನಾಯಿತೆಂಬುದನ್ನು ಕೂಡ ನೋಡಲೆಳಸಲಿಲ್ಲ. ಹೊರಕ್ಕೆ ಹೋಗಿ ಒಂದು ಗಾಡಿಯನ್ನು ಬಾಡಿಗೆಗೆ ಮಾಡಿಕೊಂಡು ವಾರಣನನ್ನು ತನ್ನ ಮನೆಗೆ ಕರೆದು ಕೊಂಡು ಹೋದಳು.

ಈಗ ವಿಠಲನು ಬಹು ದುರವಸ್ಥೆಗೆ ಸಿಕ್ಕಿದನು. ಅಲ್ಲಿನವರೆಲ್ಲ ಜೂಜು ಕೋರರೂ ಕುಡುಕರೂ ಕಳ್ಳರೂ ವ್ಯಭಿಚಾರಿಗಳೂ ಆದ ತುಂಟರು. ಇವನು ಒಬ್ಬನೇ ಒಬ್ಬ. ಏನುಮಾಡುವುದಕ್ಕೂ ಸಾಗದು. ಆದರೆ ವಿಠಲನು ಬಹು ಚತುರನಾದ ಹಳೇ ಹುಲಿ. ಇವನು ಹಣದ ಚೀಲವನ್ನು ಜೇಬಿನಲ್ಲಿಟ್ಟುಕೊಂಡು ಹೊರಕ್ಕೆ ನುಗ್ಗಲು ಭಾಸ್ಕರನು ವಿಠಲನ ಮೇಲೆ ಬಿದ್ದು ಹೊಡೆಯಬೇಕೆಂದು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಮೇಲಿನಿಂದ ಕೈಯೆತ್ತಿದನು. ಆದರೆ ಗುರಿ ತಪ್ಪಿದುದರಿಂದ ಮುಗ್ಗರಿಸಿದನು. ಅದೇ ಸಮಯವೆಂದು ವಿಠಲನು ತನ್ನ ಪಿಸ್ತೂಲಿನ ಬುಡದಿಂದ ಅವನ ತಲೆಯಮೇಲೆ ಬಲವಾಗಿ ಬಡಿಯಲು ಭಾಸ್ಕರನು ಮೂರ್ಛೆಹೋದನು. ಇವನು ವಿಠಲನೆಂಬುದು ಯಾರಿಗೂ ಗೊತ್ತಾಗಲಿಲ್ಲ— ಇಷ್ಟು ಜನರನ್ನೆದುರಿಸಿ ಹೀಗೆ ಛಂದೋಭಂಗಮಾಡುವ ಈ ಧೈರ್ಯಶಾಲಿ ಯಾರಿರ ಬಹುದೆಂದು ಎಲ್ಲರೂ ಗೊಣಗುಟ್ಟುತ್ತಿದ್ದರು. ಆ ಮಧ್ಯೆ ಯಾರೋ ಒಬ್ಬನು ಕುರ್ಚಿಯನ್ನು ತಂದು ವಿಠಲನಮೇಲೆ ಕುಕ್ಕಿದನು. ಆಗ ವಿಠಲನು ಹುಲಿಯಂತೆ ರೌದ್ರಾವೇಶಗೊಂಡು ತನ್ನ ಪಿಸ್ತೂಲನ್ನು ಬಾರುಮಾಡಲು ಗುಂಪೆಲ್ಲ ಚದುರಲಾ ಯಿತು. ವಿಠಲನು ಸರ್ರನೆ ಬೀದಿಗೆ ಬಂದುಬಿಟ್ಟನು. ಹಾಗೆ ಈಚೆಗೆ ಬರುವಾಗ ಗಟ್ಟಿಯಾಗಿ ಪೋಲೀಸಿನವರನ್ನು ಕೂಗಿಕೊಂಡನು. ಇದರಿಂದ ಈ ಜೂಜುಗಾರ ರೆಲ್ಲ ನಡುಗಿದರು. ಅನೇಕರು ಹಿಂದಿನ ಬಾಗಿಲಿಂದ ಓಡಿಹೋದರು. ಆ ವೇಳೆಗೆ ಪೋಲೀಸಿನವರೂ ಬಂದರು. ಆದರೂ ಮೇಲೆ ತಿಳಿಸಿದಂತೆ ಗುಂಪೆಲ್ಲ ಚದುರಿಹೋಗಿದ್ದುದರಿಂದ ಯಾರೂ ಸಿಕ್ಕಲಿಲ್ಲ. ನಾನಾಬಗೆಯ ಇಸ್ಪೇಟುಗಳೂ ಕೆಲವು ಬ್ರಾಂದಿ ಬುಡ್ಡಿಗಳೂ ಹಲವು ನಸ್ಯದ ಪಟ್ಟೆಗಳೂ ಹೊರತಾಗಿ ಮತ್ತೇನೂ ಅಲ್ಲಿ ದೊರೆಯಲಿಲ್ಲ.

---

# ಹದಿನಾಲ್ಕನೆಯ ಪರಿಚ್ಛೇದ

ತಿಲಮೆಯು ವಾರಣನನ್ನು ಉಪಾಯವಾಗಿ ಮನೆಗೆ ಕರೆದೊಯ್ದುದು ನಮಗೆಲ್ಲ ಗೊತ್ತೇಯಿದೆ. ಅವಳ ಮನೆಯ ಒಂದು ಕೊಠಡಿಯಲ್ಲಿಬ್ಬರೂ ಕುಳಿತು ಕೊಂಡರು. ಅದುವರೆಗೆ ವಾರಣನಿಗೆ ಮತ್ತು ಸ್ವಲ್ಪ ಇಳಿದಿದ್ದಿತು. ತಿಲಮೆಯು ಇನ್ನಾವುದೋ ಪುಡಿಯನ್ನು ಬೆರೆಸಿ ಮತ್ತೊಂದು ವಿಧವಾದ ಪಾನಕವನ್ನು ಮಾಡಿ ಕುಡಿಸಿದಳು. ತರುವಾಯ ಗಾಢನಿದ್ರೆ ಬಂದಿತು.

ಆಗ್ಗೆ ಮಾಧವಭಾಸ್ಕರರೂ ಬರಲು ತಿಲಮೆಯು ಮಹಡಿಯಮೇಲಿನಿಂದ ಇಳಿದು ಬಂದಳು.

ಮಾಧವ_ತಿಲಮೆ, ಇದೇನು ನಿನ್ನ ಕೆಲಸ! ನಿನ್ನ ಉದ್ದೇಶವೇನು ?

ತಿಲಮೆ_ನನ್ನ ಉದ್ದೇಶವೇನೇ? ಇದು_ನೀವು ಇನ್ನುಮೇಲೆ ವಾರಣ ನನ್ನು ಕರೆದುಕೊಂಡು ಹೋಗಿ ಎಲ್ಲರ ಮುಂದೆಯೂ ಅವನನ್ನು ಸುಲಿದು ಕೊಂಡು ತಿನ್ನಕೂಡದು ಇದರಿಂದ ನಿಮಗೇ ಗಂಡ. ಇಗೋ ನೋಡಿ! ನೀವು ನಮ್ಮನ್ನು ಗೋಳಾಡಿಸಬಾರದು! ನನಗೆಲ್ಲಿಬೇಕೋ ಅಲ್ಲಿಗೆ ನಾನು ವಾರಣನನ್ನು ಒಯ್ಯಬೇಕು. ನಾನು ಅವನನ್ನು ವಶಪಡಿಸಿಕೊಳ್ಳಬಲ್ಲೆ. ಅಲ್ಲದೆ ನಿಮಗೆಷ್ಟು ಹಣ ಬೇಕಾದರೂ ಅವನಿಂದ ಉಪಾಯವಾಗಿ ಸಂಪಾದಿಸಿ ನಾನು ಕೊಡಬಲ್ಲೆ, ಹಾಗೆ ಮಾಡಿದರೆ ಅವನಿಗೂ ಏನೂ ಅನುಮಾನ ತೋರುವುದಿಲ್ಲ. ಹಾಗಿಲ್ಲದೆ ಈಗಿನಂತೆ ನೀವು ನಡೆದರೆ ಅವನು ಸಂಶಯ ಪಡುವುದು ಖಂಡಿತ.

ಮಾಧವ_ಓಹೋ! ಹೌದು, ಎಲ್ಲವನ್ನೂ ನೀನೆ ನುಂಗಬೇಕು. ಪಾಪ!

ತಿಲಮೆ_ನಾನೇನೂ ಹಾಗೆ ಮಾಡುವುದಿಲ್ಲ.

ಮಾಧವ_ನೀನು ಮಾಡತಕ್ಕವಳೇ.

ತಿಲಮೆ_ನೀನು ಸುಳ್ಳು ಬೊಗಳುತ್ತೀಯೆ.

ಮಾಧವ_ತಿಲಮೆ, ನನ್ನನ್ನು ಸುಳ್ಳುಗಾರನೆನ್ನಬೇಡ. ಇಗೋ! ನಿನ ಗೇನೋ ಗ್ರಹಚಾರ ವಕ್ರಿಸಿದೆ ನೋಡು!_ಎಂದು ಹೇಳುತ್ತ ನಾನಾ ದುರ್ಭಾಷೆ ಗಳಿಂದ ಬೈಯುತ್ತ ತಿಲಮೆಯ ಕುತ್ತಿಗೆಯನ್ನು ಬಲವಾಗಿ ಅಮುಕಿದನು.

ತಿಲಮೆಗೆ ಮಹಾ ಆಗ್ರಹವುಂಟಾಯಿತು. ಅವಳು ಕಾಳರಾತ್ರಿಯಂತೆ ಹೂಂಕರಿಸಿ ಘೋರವಾಗಿ ಗರ್ಜಿಸುತ್ತ ತನ್ನ ಜಾಕೆಟ್ಟಿನಲ್ಲಿದ್ದ ಸಣ್ಣ ಕಠಾರಿಯನ್ನು ತೆಗೆದು ಅವನನ್ನು ತಿವಿಯಲು ಯತ್ನಿಸಿದಳು. ಆದರೆ ದೈವವಶಾತ್ ಗುರಿತಪ್ಪಿದುದರಿಂದ ಆ ಪಾಪಿಯು ಉಳಿದುಕೊಂಡನು.

ಈ ಮಹಾಪಾಪಿಗಳ ಹೊಡೆದಾಟವಾಗುತ್ತಿದ್ದಾಗ ಬೀದಿಯ ಬಾಗಿಲ ಕದಕ್ಕೆ ಅಗುಳಿಯನ್ನು ಹಾಕಿದ್ದಿತು. ಈ ಮಧ್ಯೆ ಯಾರೋ ಕದವನ್ನು ತಟ್ಟಿದಂತೆ ಸದ್ದಾಯಿತು. ಈಗ ಈ ಹೊಡೆದಾಟವು ಸದ್ಯಕ್ಕೆ ಶಾಂತವಾಗಬೇಕಾಯಿತು.

ಭಾಸ್ಕರನು ಭಯದಿಂದ ನೆಗೆದುಬಿದ್ದು – ಅಯ್ಯೋ ! ಅದಾರೋ ಬಂದರಲ್ಲಾ !

ಮಾಧವನೂ ಭ್ರಾಂತನಾದನು. ತಿಲಮೆಯು ಕಠಾರಿಯನ್ನು ಹಿಂದಕ್ಕೆ ತೆಗೆದುಕೊಂಡು ಜಾಕೆಟ್ಟಿನೊಳಕ್ಕೆ ಸೇರಿಸುತ ಬೇಗನೆ ಹೋಗಿ ಕದವನ್ನು ತೆರೆದಳು. ಆಜಾನುಬಾಹುವಾದ ಒಂದಾನೊಂದು ವ್ಯಕ್ತಿಯನ್ನು ಕಂಡು 'ಅಯ್ಯೋ! ಅಪ್ಪಾ!' ಎಂದು ಚೀರುತ್ತ ಬಿದ್ದಳು.

ಆ ಮೂರ್ತಿಯು ಒಳಕ್ಕೆ ಬಂದಿತು. ಅದು ಸ್ಕಂಧವನಂತಹ ದೀರ್ಘದೇಹವುಳ್ಳ ದೊಡ್ಡ ಆಳು. ಒಳಕ್ಕೆ ಬರುವಾಗ ಬೀದಿಯ ಕದವನ್ನು ಭದ್ರಪಡಿಸದೆ ಸುಮ್ಮನೆ ಸಲದುಕೊಂಡು ಬಂದರು.

ಒಳಿಕ ಆತನು—ಏನೇ ಹುಡುಗಿ, ನಾನು ಈ ಸೀಮೆಗೆ ಬರುತ್ತೇನೆಂದು ನೀನು ತಿಳಿದಿರಲಿಲ್ಲವಲ್ಲವೆ ?

ಮಾಧವ ಭಾಸ್ಕರರು ಬಂದು ನೋಡಿದರು. ಮಾಧವನ ದೃಷ್ಟಿಯೆಲ್ಲಾ ಆ ಹೊಸ ವ್ಯಕ್ತಿಯ ಮೇಲೆಯೇ. ಅವನು ಗಡಗಡನೆ ನಡುಗುತ್ತ—ಅಯ್ಯೋ! ಅಯ್ಯೋ! ಪಲ್ಲವ ! ಶ್ರೀಮತಿಯ ಯಜಮಾನ !

ಪಲ್ಲವ—ಏನೋ ದ್ರೋಹಿಗಳಿರಾ, ನೀವು ಇಲ್ಲಿಗೂ ಬಂದಿದ್ದೀರಾ? "ಸರ್ವಸ್ಸಗಂಧೇಷು ಸ್ನಿಹ್ಯತಿ" ಒಂದೇ ಕಸಬಿನವರು ಒಂದೇ ಗುಂಪಾಗಿ ಸೇರುವುದು

ಸ್ವಾಭಾವಿಕವೇ. ನಿಮ್ಮಗಳ ಜತೆಗೆ ವನಜಚಂದ್ರ ಸೌದಾಮಿನಿ ಆ ಇಬ್ಬರೂ ಸೇರಿಬಿಟ್ಟರೆ ಪಂಚಮಹಾಪಾತಕಿಗಳೆಲ್ಲ ಸೇರಿದಂತೆಯೇ-ಎಂದನು.

ತಿಲವೆುಯು ಸ್ವಲ್ಪ ತೆಪ್ಪತ್ತುಕೊಂಡು—ಅಪ್ಪಾ, ಒಳಕ್ಕೆ ಬಾ.

ಪಲ್ಲವ—ಎಲೆ, ಕುಲಘಾತಿನಿ, ನೀನು ಈ ನವನಗರಿಗೇಕೆ ಬಂದಿದ್ದೀಯೆ? ಎಂದು ಸಿಡಿಲಿನಂತೆ ಗರ್ಜಿಸುತ್ತಲೂ ಹಲ್ಲು ಕಡಿಯುತ್ತಲೂ ಹುಬ್ಬು ಗಂಟಿಕ್ಕು ತ್ತಲೂ ಕೇಳಿದನು.

ಮಾಧವ-ಪಲ್ಲವ, ಅದನ್ನೆಲ್ಲ ನೀನೇನೂ ಕೇಳಬೇಕಾದ ಆವಶ್ಯಕತೆಯಿಲ್ಲ

ಪಲ್ಲವ-ಅಯ್ಯ, ನಾನು ನಿನ್ನನ್ನು ಕೇಳಲಿಲ್ಲ. (ತಿಲವೆುಯ ಕಡೆ ತಿರುಗಿ) ಏನೆ, ನೀಚಳೆ, ಹೇಳು-ಎಂದು ರೌದ್ರಾವೇಶದಿಂದ ಅವಳ ರೆಟ್ಟೆಯನ್ನು ಹಿಡಿ ದೆಳೆದು ಕುಕ್ಕಲು ಅವಳ ಕಾಲಿಗೆ ಅವಳೇ ಶರಣಾರ್ಥಿ ಮಾಡುವಂತಾಗಿ ಕೂಗಿ ದಳು. ತಿಲವೆುಯು ತನ್ನ ಜೀವಮಾನದಲ್ಲೆಂದೂ ಇಷ್ಟು ಹೆದರಿರಲಿಲ್ಲ.

ಪಲ್ಲವ-ನೀನು ಇದುವರೆಗೆ ನನ್ನ ಮಾನವನ್ನು ಕಳೆದುದೇ ಸಾಕು. ಇನ್ನು ಮುಂದಕ್ಕೆ ಬೇಡ. ಈ ನಿಮ್ಮ ಮೂವರನ್ನೂ ಗುಂಡಿನಿಂದ ಒಂದೇ ಏಟಿಗೆ ಹೊಡೆದು ಕೊಂದರೂ ನನಗೆ ಸ್ವಲ್ಪವೂ ವ್ಯಸನವಾಗದು. ನಿಮ್ಮೆಲ್ಲರನ್ನೂ ಪೋಲೀಸಿಗೆ ಕೊಡಬೇಕೆಂದಿದೇನೆ, ನೀವು ಈ ಲೋಕದಲ್ಲಿರುವುದಕ್ಕಿಂತ ಹಾಳಾ ದರೇ ಮೇಲು. ನೀನು ಒಬ್ಬ ಕುಡುಕನ ಸಂಗಡ ಜೂಜಿನ ಕಟ್ಟೆಯಿಂದ ಬರು ತ್ತಿರಲಿಲ್ಲವೇ? ಏನು, ಅವನನ್ನು ಸುಲಿದು ತಿಂದುಬಿಟ್ಟೆಯೋ?

ತಿಲವೆು-ಅಪ್ಪಾಜಿ, ನಾನು ಹೇಳುವುದನ್ನು ಲಾಲಿಸು.

ಪಲ್ಲವ-ಮುಂದಕ್ಕೆ ಮಾತಾಡಗೊಳಿಸದೆ-ಎಲೆ ಚಂಡಾಲೆ, ನನ್ನನ್ನು ಅಪ್ಪ ನೆಂದು ಕೂಗಬೇಡ. ನಾನು ನಿನ್ನ ತಂದೆಯಲ್ಲ. ನಿಮ್ಮ ತಾಯಿ ಗತಿಸುವಾಗ ಹಸುಗೂಸಾಗಿದ್ದ ನಿನ್ನನ್ನು ನನ್ನ ಮಡಲಿಗೆ ಹಾಕಿ ಹೋದಳು. ಆದ್ದರಿಂದ ಅಂದಿನಿಂದ ಎಷ್ಟೋ ಕಷ್ಟಪಟ್ಟು ನಿನ್ನನ್ನು ಪ್ರಾಣನಿರ್ವಿಶೇಷವಾಗಿ ಸಾಕಿದೆನು ನನ್ನ ಮುಪ್ಪಿನಲ್ಲಿ ಸ್ವಲ್ಪ ಗಂಜಿಯನ್ನಾದರೂ ಹಾಕಿ ಪೋಷಿಸುತ್ತಿಯೆಂದು ಭಾವಿಸಿ ನಿನಗೆ ಕಾಲಕಾಲಕ್ಕೆ ತಕ್ಕ ಉಪಚಾರಗಳನ್ನೆಲ್ಲ ನಡೆಯಿಸಿದೆನು. ನಾನು ಹೋ

ದಹೋದ ಸೀಮೆಗಳಿಗೆಲ್ಲ ನಿನ್ನನ್ನು ಕರೆದುಕೊಂಡುಹೋದೆನು. ಯೋಗ್ಯಮಾರ್ಗದಲ್ಲಿ ವಿದ್ಯಾಭ್ಯಾಸವನ್ನು ಮಾಡಿಸಿದ್ದೆನು. ಆದರೆ ನೀನು ನೀಚನಾದ ಆ ವನಜಚಂದ್ರನ ಬಲೆಗೆಬಿದ್ದು ಭ್ರಷ್ಟಳಾಗಿ ಓಡಿಹೋದೆ. ಅಂದಿನಿಂದಲೂ ಲಜ್ಜಾಸ್ಪದವಾಗಿ ಬಾಳುತ್ತ ಕುಲಗೇಡಿ ಹೆಂಗಸಾಗಿದ್ದೀಯೆ.

ಇದು ಪಲ್ಲವನ ಪೋಷಿತ ಪುತ್ರಿಯಾದ ಶಿಲಮೆಯ ನಿಜವಾದ ಜೀವನಚರಿತ್ರೆ. ಶಿಲಮೆಯು ಲಲಿತಪಟ್ಟಣದಲ್ಲಿ ವನಜಚಂದ್ರನ ಸಂಗಡ ಇದ್ದಾಗ ತನ್ನ ತವರುಮನೆಯ ವಿಷಯವಾಗಿ ಚಿತ್ರವಿಚಿತ್ರಗಳಾದ ಕುಲಗೋತ್ರಗಳನ್ನೂ ಅದ್ಭುತ ಮಹಿಮೆಗಳನ್ನೂ ಕಲ್ಪಿಸಿ ಹೇಳಿ ಎಲ್ಲರನ್ನೂ ಮರುಳು ಮಾಡುತ್ತಿದ್ದಳು.

ನಾವೆಯೊಡೆಯನಾದ ಪಲ್ಲವನು ಒಂದಾನೊಂದು ಸಲ ಹಿಂದೂಸಾಗರದಲ್ಲಿ ತನ್ನ ಶ್ರೀಮತಿ ಹಡಗನ್ನು ನಡೆಯಿಸುತ್ತಿದ್ದನು. ಒಂದು ಪಟ್ಟಣವೋ ಎಂಬಂತಿದ್ದ ಆ ನಾವೆಯಲ್ಲಿ ನಾನಾ ದೇಶದವರು ಪ್ರಯಾಣಮಾಡುತ್ತಿದ್ದರು. ಕೋಟೀಶ್ವರರಾದ ವರ್ತಕರೂ ಜಹಗೀರುದಾರರೂ ಮೊದಲನೆಯ ತರಗತಿಯಲ್ಲಿದ್ದರು. ಅವರಲ್ಲಿ ಲಲಿತಪಟ್ಟಣದವರೇ ಹೆಚ್ಚುಮಂದಿ. ಆಗ ಏನೋ ಪ್ರಸ್ತಾಪದ ಮೇಲೆ ಲಲಿತಪಟ್ಟಣದ ಚಾರುಚಂದ್ರನ ಗೃಹಕೃತ್ಯದ ವಿಷಯವಾಗಿ ಮಾತುಕಥೆ ನಡೆಯುವಲ್ಲಿ—ಚಾರುಚಂದ್ರನು ಒಬ್ಬ ವೇಶ್ಯೆಯನ್ನಿಟ್ಟುಕೊಂಡಿದ್ದನಂತೆ. ವನಜಚಂದ್ರನು ಚಾರುಚಂದ್ರನಿಗಿಂತ ಹಿಂದಿನ ವಿಟನಿಂದ ಅವಳಲ್ಲಿ ಹುಟ್ಟಿದವನಂತೆ. ಕೆಲವು ಕಾಲದ ಮೇಲೆ ಅವಳು ಆ ಮಗುವನ್ನು ಚಾರುಚಂದ್ರನಲ್ಲಿ ಬಿಟ್ಟುಬಿಟ್ಟು ಮತ್ತೊಬ್ಬನನ್ನು ಮೋಹಿಸಿ ಅವನ ಹಿಂದೆಯೇ ಹೊರಟುಹೋದವಳು ಪುನಃ ಚಾರುಚಂದ್ರನ ಬಳಿಗೆ ಹಿಂತಿರುಗಲಿಲ್ಲವಂತೆ. ಆಗ್ಗೆ ಚಾರುಚಂದ್ರನ ಧರ್ಮಪತ್ನಿಗೆ ಇನ್ನೂ ಮಕ್ಕಳಾಗಿರಲಿಲ್ಲವಾಗಿ ಸಾಧ್ವೀಮಣಿಯಾದ ಆಕೆಯು ಆ ಮಗುವನ್ನು ಔರಸಪುತ್ರನಿಗಿಂತ ಹೆಚ್ಚು ಮಮತೆಯಿಂದ ಸಾಕಿದಳಂತೆ. ಈ ದಂಪತಿಗಳಿಬ್ಬರೂ ಯಾರಿಗೂ ಈ ಬಿಬು ಕೊಡದಂತೆ ವನಜಚಂದ್ರನು ತಮ್ಮ ಔರಸಪುತ್ರನೇ ಎಂದು ಎಲ್ಲರಿಗೂ ಹೇಳುತ್ತಿದ್ದರಂತೆ. ಹಲವು ಕಾಲದ ಮೇಲೆ ಆ ಧರ್ಮಪತ್ನಿಯಲ್ಲಿ ಕಾಂತನಾಥನೆಂಬ ಪುತ್ರನು ಜನಿಸಿದನಂತೆ. ವನಜಚಂದ್ರನ ತಾಯಾದ ವಾರಾಂಗನೆಯು ದೇಶಾಂತರದಲ್ಲಿ ಕ್ಷಯರೋಗಪೀಡಿತಳಾಗಿದ್ದಾಗ ತನ್ನ ಮಗನನ್ನು ನೆನೆಸಿಕೊಂಡು ಕಣ್ಣೀರಿಡುತ್ತ

ಅವನ ಪೋಷಣೆಯ ವಿಷಯವಾಗಿ ಚಾರುಚಂದ್ರನಿಗೊಂದು ಕಾಗದವನ್ನು ಬರೆಯಿಸಿದಳಂತೆ.

ಕಾಗದ—

ಪೂರ್ವಪ್ರಿಯ, ನನ್ನನ್ನು ಕೃತಘ್ನಳೆನ್ನಬೇಡ. ನನ್ನ ಕುಲಕಸಬೇ ಇದು. ಆದರೆ ನಾನು ನಿನ್ನನ್ನಗಲಿ ಬಂದರೂ ನನ್ನ ನಿನ್ನ ಸಂಬಂಧವು ಕಿತ್ತು ಹೋಗಲಿಲ್ಲ. ಹೇಗೆಂದರೆ—ನಾನು ನನ್ನ ಪ್ರತಿಬಿಂಬವಾದ ವನಜನನ್ನು ನಿನ್ನ ಭಾಗ್ಯಕ್ಕೆ ಒಪ್ಪಿಸಿ ಬಂದಿದ್ದೇನೆ. ಜನ್ಮತಃ ಅಲ್ಲದಿದ್ದರೂ ಕರ್ಮತಃ ಅವನು ನಿನ್ನ ಸ್ವತ್ತು. ಆದುದರಿಂದ ನಿನ್ನಲ್ಲೇ ಇರುವನೆ. ಈಚೆಗೆ ನಿನ್ನ ಧರ್ಮಪತ್ನಿಯಲ್ಲಿ ಪುತ್ರೋತ್ಪತ್ತಿಯಾದಂತೆ ಪ್ರವಾದವನ್ನು ಕೇಳಿದ ನನ್ನನ್ನು ಹರ್ಷವಿಷಾದಗಳೆರಡೂ ಪೀಡಿಸುತ್ತಿವೆ. ಹೇಗೂ ವನಜನನ್ನು ಕೈಬಿಡಬೇಡ. ಇದೇ ನನ್ನ ಕಡೆಗಾಲದ ವಂದನೆ.

ಈ ಕಾಗದ ಬರುವಾಗ್ಗೆ ಚಾರುಚಂದ್ರನು ಮನೆಯಲ್ಲಿರಲಿಲ್ಲವಾಗಿ ವನಜನೇ ಅದನ್ನು ತೆಗೆದುಕೊಂಡನು. ವನಜನು ಆಗ್ಗೆ ವಯಸ್ಕ. ಅವನು ಜನ್ಮಾದಿಯಾಗಿ ದುರುಳನೇ ಆದುದರಿಂದ ತಂದೆಯಪ್ಪಣೆಯಿಲ್ಲದೆ ಆ ಕಾಗದವನ್ನೊಡೆದು ಓದಿಕೊಂಡನು. ಎದೆಯೊಡೆಯುವಂತಾಯಿತು. ಆದುವರೆಗೂ ತಾನೂ ಕಾಂತನಾಥನೂ ಒಬ್ಬ ತಾಯಿಮಕ್ಕಳೇ ಎಂದು ಭಾವಿಸಿದ್ದನು. ಈ ಕಾಗದದಿಂದ ತಾನು ವೇಶ್ಯಾಪುತ್ರನೆಂದು ಗೊತ್ತಾಗಲು ಇದರಿಂದ ಏನಾಗುವುದೋ ಎಂದು ಭೂಮಿಗಿಳಿದುಹೋದನಾದರೂ ಯಾವುದಕ್ಕೂ ಹೇಸದೆ ದುರಾಲೋಚನೆಗೆ ಪ್ರಾರಂಭಿಸಿದನು. ಕಡೆಗೂ ಆ ಕಾಗದವನ್ನು ತಂದೆಗೆ ತೋರಿಸಲಿಲ್ಲ. ಇನ್ನು ಮುಂದೆ ಚಾರುಚಂದ್ರನನ್ನು ನಂಬಲಾರದೇ ಹೋದನು. ದಾಯಾದನಾದ ಕಾಂತನಾಥನನ್ನು ಮೊದಲು ತೊಲಗಿಸಬೇಕೆಂದೂ ಬಳಿಕ ಮುದುಕನಾದ ಪಾಲಕಪಿತೃವನ್ನು ಮುರಿಯಬೇಕೆಂದೂ ಯೋಚಿಸಿ, ಅದಕ್ಕೆ ತಕ್ಕ ದುರಾತ್ಮರನ್ನೂ ಕಟ್ಟಿಕೊಂಡು ಕೆಲಸಮಾಡುತ ಬಂದನು.

ಈ ಕಥೆಯೆಲ್ಲಾ ತನ್ನ ಸ್ತ್ರೀಮತಿ ಜಹಜಿನಲ್ಲಿ ಪಲ್ಲವನಿಗೆ ಚೆನ್ನಾಗಿ ತಿಳಿಯಿತು. ವನಜಚಂದ್ರನು ತನ್ನ ಮಗಳನ್ನು ಹಾರಿಸಿಕೊಂಡು ಹೋದಂದಿನಿಂದ

ಹೃದಯದೊಳಗೇ ಹೊಗೆಯಾಡುತಿದ್ದ ಕೋಪಾಗ್ನಿಗೆ ಈಗ ಆಜ್ಯಾಹುತಿಯೂ ಬಿದ್ದಂ ತಾಯಿತು. ಆದರೂ ಪಲ್ಲವನು ವಿವೇಕಿಯಾದುದರಿಂದ ಕಾಲವನ್ನು ಕಾಯು ತ್ತಿದ್ದನು. ಒಂದಾನೊಂದು ಸಲ ಪಲ್ಲವನು ಲಲಿತಪಟ್ಟಣಕ್ಕೆ ಹೋದನು. ಇವನು ತನ್ನ ಕಡೆಯವರನ್ನು ಬಿಟ್ಟು ಈ ಹುಳುಕುಗಳೆಲ್ಲ ಯಥಾರ್ಥವೆಂಬುದನ್ನು ತಿಳಿದ ನಲ್ಲದೆ ಕಾಂತನಾಥನ ಕೊಲೆಗೆ ಯತ್ನಿಸಿದುದು, ಇನ್ನೂ ಮುಂದಕ್ಕೆ ನಡೆಯು ಬಹುದಾದ ಘೋರಕೃತ್ಯಗಳು, ಇವಕ್ಕೆಲ್ಲ ನವನಗರಿಯಲ್ಲಿ ಅನೇಕರು ಒತ್ತಾಸೆ ಯಾಗಿರುವುದು, ಪಚ್ಚೆಯ ಪೆಟ್ಟಿಗೆಯ ವಿಷಯ ಇವನ್ನೆಲ್ಲ ಅರಿತನು ನವನಗರಿ ಯಲ್ಲಿ ಪ್ರಸಿದ್ಧನಾದ ವಿಠಲಮೂರ್ತಿಯೆಂಬ ಪತ್ತೆದಾರನನ್ನು ನೇಮಿಸಬೇ ಕೆಂದು ಆಪ್ತರಾದವರು ಪಲ್ಲವನಿಗೆ ಹೇಳಿದ್ದರು. ಪಲ್ಲವನು ನವನಗರಿಗೆ ಬಂದಾಗ ಈ ಸಂಗತಿ ಜ್ಞಾಪಕವಾಯಿತು. ಆಗಲೇ ವಿಠಲಮೂರ್ತಿಯ ಆಫೀ ಸಿಗೆ ಹೋಗಿ ಆದಿನ ಅಷ್ಟುಹೊತ್ತು ಮಾತಾಡಿಕೊಂಡು ಬಂದನು. ಅಲ್ಲಿಂದೀ ಚೆಗೆ ಬಹುದಿನಗಳ ವರೆಗೂ ವಿಠಲನನ್ನು ಕಂಡಿರಲಿಲ್ಲ. ಯಾಕೆಂದರೆ— ಆ ವಿಠ ಲನು ಎಲ್ಲಿಗೆ ಹೋದನೆಂಬುದು ಕೂಡ ತಿಳಿಯಲಿಲ್ಲ. ಲಲಿತಪಟ್ಟಣದಿಂದ ತನಗೆ (ಪಲ್ಲವನಿಗೆ) ಬಂದ ಕಾಗದದಲ್ಲಿ ಚಾರುಚಂದ್ರನೂ ಕಾಲವಾದನೆಂದು ತಿಳಿಯಲು ಈ ಎರಡನೆಯ ಕೊಲೆಯೂ ವನಜನಿಂದಲೇ ನಡೆಯಿಸಲ್ಪಟ್ಟಿರಬಹುದೆಂದು ಪಲ್ಲ ವನು ಊಹಿಸಿದನು. ಪಲ್ಲವನು ನವನಗರಿಯ ಬೀದಿಯಲ್ಲಿ ವಾರಣನ ಸಂಗಡ ಬರು ತ್ತಿದ್ದ ತನ್ನಸಾಕುಮಗಳನ್ನು ನೋಡುವವರೆಗೂ ಅವಳು ನವನಗರಿಯಲ್ಲಿರುವುದೇ ಅವನಿಗೆ ಗೊತ್ತಿರಲಿಲ್ಲ. ಇದು ಪೂರ್ವಕಥೆ.

ತಿಲಮೆಗೆ ತನ್ನ ಪೋಷಕಪಿತೃವನ್ನು ಕಂಡಕೂಡಲೆ ಮರಣಕಂಪವುಂಟಾ ಯಿತು. ತನ್ನ ಮತ್ತು ಜತಗಾರರ ಯೋಗ್ಯತೆಯನ್ನು ಆತನು ಬಲ್ಲನೆಂದೂ ತಮ್ಮ ಏರ್ಪಾಡನ್ನೆಲ್ಲ ಬಹಿರಂಗಪಡಿಸಿ ಸರ್ವನಾಶವನ್ನುಂಟುಮಾಡುತ್ತಾನೆಂದೂ ಆಕೆಗೆ ಹೊಳೆಯಿತು. ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಸಂಕಟಪಟ್ಟಳು. ಆದರೆ ಮೊದಲೇ ಮಾಧವನಾಡಿದ ದುರುಕ್ತಿಯು ಪಲ್ಲವನ ಪ್ರಸನ್ನತೆಗವಕಾಶವನ್ನು ಕೊಡಲಿಲ್ಲ. ಮಾಧವನಿಗೆ ಮಹಾನಾವೆಯ ಅಧ್ಯಕ್ಷನಾದ ಪಲ್ಲವನ ಘನತೆಯು ಗೊತ್ತಿರಲಿಲ್ಲ. ಅವನು ಪುನಃ ದುಡುಕಿ_" ಪಲ್ಲವ, ಹೀಗೆ ವೃಥಾ ಗಲಾಟೆಮಾ ಡುವುದರಿಂದ ಏನೂ ಫಲವಿಲ್ಲ ನಾವೂ ಏನಾದರೂ ಕೊಟ್ಟು ನಿನ್ನ ಮನಸ್ಸಂ

ತೋಷಪಡಿಸಬೇಕಾದುವೇ. ನೀನು ನಮ್ಮನ್ನು ಸುಮ್ಮನೆ ಬಿಟ್ಟುಬಿಟ್ಟರೆ ಇಪ್ಪತ್ತುಸಾವಿರ ರೂಪಾಯಿಗಳನ್ನು ಗುಟ್ಟಾಗಿ ಕೊಡುವೆವು.

ಪಲ್ಲವ—ಥು, ಥು, ಚಿಃ ಚಿಃ—ಎಂದು ಅಸಹ್ಯಪಡುತ್ತ ಮತ್ತಷ್ಟು ರೇಗಿ—ಎಲಾನೀಚ, ಈ ಮಾತನ್ನೇ ಹೇಳುವುದು ? ಅದೂ ನನಗೆ ಈ ಮಾತನ್ನು ಹೇಳುವೆಯಾ ? ನಾನು ! ಶ್ರೀಮತಿಯ ಯಜಮಾನ ! ಶಿವಶಿವಾ ! ಎಲಾ, ನೀನು ಪರಮದ್ರೋಹಿ. ಇಲ್ಲ, ಅಯ್ಯ. ನೀನು ಲಂಚವನ್ನು ಕೊಟ್ಟು ನನ್ನನ್ನು ಕೊಂಡುಕೊಳ್ಳಲಾರೆ—ಎನ್ನುತ್ತ ಮಾಧವನನ್ನು ಪ್ರಹರಿಸುವುದಕ್ಕೆ ಹೋಗಲು—

ತಿಲಮೆಯು ಬಂದು ಪಲ್ಲವನ ಕಾಲಿಗೆಬಿದ್ದು ಆತನ ಮೊಣಕಾಲುಗಳನ್ನು ತಬ್ಬಿಕೊಂಡು ಕಣ್ಣೀರು ಸುರಿಸುತ್ತಾ—ತಂದೆ, ನಾನು ಹೇಳುವ ಕಾರಣವನ್ನು ಕೃಪೆಯಿಟ್ಟು ಲಾಲಿಸು.

ಪಲ್ಲವ—ಪುನಃ ನನ್ನನ್ನು ತಂದೆಯೆನ್ನಬೇಡ. ಇಗೋ, ನಾನು ಹೊರಟೆ.

ತಿಲಮೆ—ಬೇಡ, ಬೇಡ, ಅಪ್ಪಾಜಿ, ಹೋಗಬೇಡ

ನಾವಿಕೇಂದ್ರನು ಗಂಭೀರವಾಗಿ ನಿಂತುಕೊಂಡು ಕಾಲಮೇಲೆ ಬಿದ್ದಿದ್ದ ಪೋಷಿತಪುತ್ರಿಯನ್ನು ನೋಡುತ್ತ—ತಿಲಮೆ, ಕಾಂತನಾಥನ ಮರಣವನ್ನೂ ಅವನಿಗೂ ಪ್ರಫುಲ್ಲೆಗೂ ಮದುವೆಯಾದುದನ್ನೂ ನೀನು ಬಲ್ಲೆಯಾ?

ತಿಲಮೆಯೂ ಮಾಧವಭಾಸ್ಕರರೂ ಪರಸ್ಪರ ಮುಖಾವಲೋಕನ ಮಾಡಿಕೊಂಡರು.

ತಿಲಮೆ—ಇಲ್ಲ, ಅದೊಂದೂ ನನಗೆ ಗೊತ್ತಿಲ್ಲ.

ಪಲ್ಲವ—ಇಲ್ಲ, ನೀನು ಸುಳ್ಳುಬೊಂಕುತ್ತಿ. ನಿನಗೆಲ್ಲಾಗೊತ್ತಿದೆ. ಅಲ್ಲದೆ ಅವನ ಹತ್ಯೆಗೆ ನೀನೂ ಪ್ರವರ್ತಿಸಿದ್ದೆಯೆಂದು ನನ್ನ ನಂಬಿಕೆ.

ಪಲ್ಲವನಲ್ಲದ ಮತ್ತಾವನೊಬ್ಬನಾದರೂ ಇಂತಹ ಮಾತನ್ನಾಡಿದ್ದರೆ ಮಾಧವ ಭಾಸ್ಕರರು ಅವನನ್ನು ತೀರಿಸಿಬಿಡುತ್ತಿದ್ದರು. ಆದರೆ ಪಲ್ಲವನು ನಾವೆಯನ್ನೂ ಅದರ ಸೈನ್ಯವನ್ನೂ ಆಳಿದ ಅನುಭವಶಾಲಿಯಾದ ಸಿಂಹ. ಆದುದ

ರಿಂದ ಅವರ ಕೈ ಏನೂ ಸಾಗುವಂತಿರಲಿಲ್ಲ. ಅವರಿಬ್ಬರೂ ಪಂಚಾಕ್ಷರಿಯನ್ನು ಜಪಿಸುತ್ತ ಬಾಯಿಲ್ಲಕ್ಕಿಯು ಕಾಳನ್ನಿಟ್ಟುಕೊಂಡಿದ್ದರು. ಪಲ್ಲವನು ಮತ್ಸರವನ್ನು ಸಾಧಿಸುವ ಕಾಳಸರ್ಪದಂತೆ ಈ ಮೂವರನ್ನೂ ಕ್ರೂರದೃಷ್ಟಿಯಿಂದ ನೋಡು ತಿದ್ದನು.

ತಿಲಮೆಗೆ ಅಭೂತಪೂರ್ವವಾದ ಅತ್ಯಾಹಿತ. ಅವಳು ಮೆಲ್ಲಗೆ ತಂದೆ ಯ ಕಾಲುಗಳನ್ನು ಬಿಟ್ಟು ಮೇಲಕ್ಕೆದ್ದುನಿಂತುಕೊಂಡು ಕರುಣಾಕ್ರಂದನ ಪೂರ್ವ ಕವಾಗಿ ಆತನ ಮರುಕವನ್ನು ಪ್ರಾರ್ಥಿಸಿದಳು.

ಆದರೆ ದೃಢಚಿತ್ತನಾದ ಪಲ್ಲವನ ಹೃದಯವು ಕಲ್ಲಾಗಿದ್ದಿತು. ಆತನು ಇನ್ನು ಮುಂದಕ್ಕೆ ತಾನು ಮಾಡಬೇಕಾದುದೇನೆಂಬುದನ್ನು ಯೋಚಿಸುತ್ತ ಒಂದು ಕ್ಷಣದವುಟ್ಟಿಗೆ ತಿಲಮೆಯನ್ನು ನೋಡದೆ ನಾಸಾಗ್ರನ್ಯಸ್ತ ಲೋಚನನಾಗಿದ್ದನು.

ಈಗ ತಿಲಮೆಯ ಕಣ್ಣುಗಳಿಂದ ಪ್ರಳಯಕಾಲದ ತನಿಗೆಂಡಗಳು ಹೊರಟವು ಮೆಲ್ಲಗೆ ತನ್ನ ಬಲಗೈಯನ್ನು ಜಾಕೆಟ್ಟಿನೊಳಗೆ ತಂದು ಕಠಾರಿಯನ್ನು ಬಲವಾಗಿ ಹಿಡಿದುಕೊಂಡಳು. ಬಳಿಕ ಬುಸುಗುಟ್ಟುತ್ತ ಒಂದು ಹೆಜ್ಜೆ ಹಿಂದಕ್ಕೆ ಸರಿದು ನಿಂತುಕೊಂಡು ಆ ಆಯುಧವನ್ನು ತಲೆಯ ಮೇಲಕ್ಕೆತ್ತಿ ತನ್ನ ಸರ್ವ ಶಕ್ತಿಯನ್ನು ವಿನಿಯೋಗಿಸಿ ಆತನ ಎದೆಯಲ್ಲಿರಿದಳು.

ಹರಹರಾ ! ಇವಳೇ ಅಲ್ಲವೆ ಸುಪುತ್ರಿ! ಛಿಃ ! ಇವಳು ಆತನ ಔರಸ ಪುತ್ರಿ ಯಾಗಿದ್ದರೆ ಈ ಬುದ್ಧಿ ಹುಟ್ಟುತಿದ್ದಿತೆ ! ಯಾವ ಕ್ರೂರಾತ್ಮನ ಮಗಳೊ ! ಬಾಲ್ಯ ದಲ್ಲಿ ಅನಾಥಳಾದರೂ ಏನೋ ಪೂರ್ವಪುಣ್ಯದಿಂದ ಪಲ್ಲವನಿಗೆ ಪೋಷಿತ ಪುತ್ರಿ ಯಾಗಿದ್ದಳು. ಆದರೇನು ! ಮಹಾ ಕೃತಘ್ನಳಾದ ಪಾಪಸ್ತ್ರೀ. ಪಲ್ಲವನು ಆರ್ತ ಧ್ವನಿಯಿಂದ ಕೂಗುತ್ತ ಧೊಪ್ಪನೆ ನೆಲಕ್ಕೆ ಬಿದ್ದನು. ರಕ್ತಪ್ರವಾಹದಿಂದ ಅಲ್ಲಿನ ಜಂಖಾನೆಯೆಲ್ಲಾ ತೋಯ್ದು ಹೋಯಿತು. ತಿಲಮೆಯು ರಕ್ತವು ತೊಟ್ಟಿಡು ತ್ತಿದ್ದ ತನ್ನ ಕಠಾರಿಯನ್ನು ಪುನಃ ಪ್ರಯೋಗಿಸಬೇಕೆಂದು ಸನ್ನದ್ಧಳಾಗುವ ಹೊ ತ್ತಿಗೆ ಸರಿಯಾಗಿ ಅರ್ಧೋನ್ಮತ್ತನಾದ ವಾರಣನು ಮಹಡಿಯಿಂದಿಳಿದು ಬಂದು ತಿಲಮೆಯ ರೌದ್ರಾಕಾರವನ್ನೂ ಅವಳ ಕೈಯಲ್ಲಿದ್ದ ಶಸ್ತ್ರವನ್ನೂ ಮತ್ತು ಸಮೀಪ ದಲ್ಲಿದ್ದ ದೇಹವನ್ನೂ ನೋಡಿ ಭೀತನಾಗಿ ಮನಮರುಗಿ ನೋಡಲಾರದೆ ಕಣ್ಣು

ಮುಚ್ಚಿಕೊಂಡು_ರಾಮರಾಮ! ಇದಾಗಬಾರದು! ತಿಲಮೆ! ಖೂನಿಮಾಡು ವುದು! ಹರಿಹರೀ! ನನಗೇನು ಸ್ವಪ್ನವೊ! ನನ್ನ ಮೆದುಳು ಗಿರಗುಟ್ಟುತಿದೆ. ಏನು? ಇದರ ಅರ್ಥವೇನು!_ಹೀಗೆನ್ನುತ್ತ ತಿಲಮೆಗೂ ಪಲ್ಲವನ ದೇಹಕ್ಕೂ ನಡುವೆ ಬಿದ್ದುಬಿಟ್ಟನು. ಪುನಃ ಮತ್ತೇರಿತು.

ತಿಲಮೆ_ವಾರಣನನ್ನು ಈಚೆಗೆ ಸೆಳೆದುಕೊಂಡು_ಎಲ್ಲಿ! ಎಲ್ಲಿ! ಇನ್ನು ಜಾಗ್ರತೆಮಾಡಿ ಇವನನ್ನು ಮೇಲಕ್ಕೆತ್ತಿಕೊಂಡು ಹೋಗಿ ಮಲಗಿಸಿ ಇವನ ಬಟ್ಟೆಗಳನ್ನು ತೆಗೆದು ರಕ್ತದ ಕಲೆಯನ್ನು ತೊಳೆಯಿರಿ. ಇವನಿಗೆ ಇನ್ನೂ ಸ್ವಲ್ಪಹೊತ್ತು ಎಚ್ಚರವಾಗುವುದಿಲ್ಲ. ಎದ್ದಮೇಲೆ ಈ ಸಂಗತಿಯನ್ನೆಲ್ಲ ಕೇಳುವನು. ಆಗ್ಯೆ ಇದೆಲ್ಲ ಅವನಿಗೆ ಬಂದಿದ್ದ ಸ್ವಪ್ನವೆಂದು ತಿಳಿಸಿಬಿಡೋಣ.

ಮಾಧವ ಭಾಸ್ಕರರು ವಾರಣನನ್ನು ಮೇಲಕ್ಕೆತ್ತಿಕೊಂಡು ಹೋದರು. ಮಾಧವನು ಬೇಗ ಇಳಿದು ಬಂದನು. ಪಲ್ಲವನ ದೇಹವು ಶವವೆಂದು ಹೇಳಿಸಿಕೊಳ್ಳುವುದಕ್ಕೆ ಅರ್ಹವಾದ ಸ್ಥಿತಿಯಲ್ಲಿದ್ದಿತು.

ಮಾಧವ-ಈಗ ಈ ಶರೀರವನ್ನೇನು ಮಾಡೋಣ?

ತಿಲಮೆ_ಜುಗುಪ್ಸೆಯಿಂದ_ಎಲ್ಲಿಯಾದರೂ ತೊಲಗಿಸಿಬಿಡಿ_ಎಂದಳೇವಿನಾ ತನ್ನ ಪಾಲಕ ಪಿತೃವನ್ನು ತಾನೇ ಕೈಯಾರಕೊಂದುದಕ್ಕಾಗಿ ಸ್ವಲ್ಪವೂ ಪಶ್ಚಾತ್ತಾಪಪಡಲಿಲ್ಲ.

ಮಾಧವ_ಇದನ್ನು ಎಲ್ಲಿಗೆ ಒಯ್ಯೋಣ?

ತಿಲಮೆ-ಹಿಂದಿನ ಅನುಭವಗಳೆಲ್ಲ ಸತ್ತುಹೋದವೆ?

ಮಾಧವ_ಸರಿ, ಹಾಗೆಯೇಮಾಡೋಣ. ಈಗ್ಗಿಂತ ಅರ್ಧರಾತ್ರಿ ಸಮಯ ಅನುಕೂಲ. ಸದ್ಯಕ್ಕೆ ಇದನ್ನು ಈ ಕೊಠಡಿಯಲ್ಲಿಟ್ಟಿರೋಣ. ತಿಲಮೆಯು ಒಪ್ಪಿದಳು. ಇಬ್ಬರೂ ಆ ದೇಹವನ್ನು ಹಿಡಿದು ಒಂದು ಚಿಕ್ಕಮನೆಯಲ್ಲಿಟ್ಟು ಜಂಖಾನೆಯನ್ನು ಮೇಲಕ್ಕೆ ತೆಗೆದುಕೊಂಡುಹೋಗಿ ಅದನ್ನೂ ವಾರಣನಬಟ್ಟೆಗಳನ್ನೂ ತೊಳೆಯುವುದಕ್ಕೆ ಎಲ್ಲರೂ ಕುಳಿತುಕೊಂಡರು. ಆದರೆ ಗ್ರಹಚಾರವಶಾತ್ ಬೀದಿಯ ಕದವು ಭದ್ರಪಡಿಸಲ್ಪಟ್ಟಿದೆಯೇ ಎಂಬುದನ್ನು ಯಾರೂ ಪರೀಕ್ಷಿಸಲಿಲ್ಲ

ವಿಠಲನು ಜೂಜಿನಮನೆಯಿಂದ ಈಚೆಗೆ ಬರುವುದಕ್ಕೆ ಮೊದಲೇ ಮಾರ ಣನು ತಪ್ಪಿಸಿಕೊಂಡು ಹೊರಕ್ಕೆ ಬಂದುಬಿಟ್ಟಿದ್ದನಷ್ಟೆ. ಅವನು ಬಹುಶಃ ತಿಲ ಮೆಯ ಮನೆಯಲ್ಲಿರಬಹುದೆಂಬುದೇ ವಿಠಲನ ನಂಬಿಕೆ. ಆದುದರಿಂದ ಈದಿನ ಇಲ್ಲಿಗೆ ಬಂದನು. ಸುಮಾರು ಸಾಂಜೆಗತ್ತಲೆ. ಬಂದು ಕೈಸಾಲೆಯ ಜಗುಲಿ ಯನ್ನು ಹತ್ತಿ ಒಳಗೆ ಇಣಿಕಿನೋಡಿದನು. ಆಗ ತಿಲುಮೆಯೂ ಮಾಧವನೂ ಒಂದು ಮನುಷ್ಯದೇಹವನ್ನು ಕೊಠಡಿಯೊಳಕ್ಕೆತ್ತಿಕೊಂಡು ಹೋಗುತಿದ್ದುದು ಕಿಟಿ ಕಿಯಮೂಲಕ ಕಾಣಿಸಿತು. ಆದರೆ ಯಾರ ದೇಹವೆಂಬುದು ವಿಠಲನ ಸ್ಫೂರ್ತಿಗೆ ಬರಲಿಲ್ಲ. ಅಂಬಲಿಯಲ್ಲಿ ಬಿದ್ದ ನೊಣದಂತೆ ತುಂಬ ಪೇಚಾಡಿದನು. ಅವರೂ ಒಳಕ್ಕೆ ಹೋಗುವುದು ಹೇಗೆಂದು ಯೋಚಿಸುತ್ತಿದ್ದನು.

ಮಾಧವನೂ ತಿಲಮೆಯೂ ಅಲ್ಲಿಂದ ಮಹಡಿಯ ಮೇಲಕ್ಕೆ ಹೋದವರು ಎಷ್ಟು ಹೊತ್ತಾದರೂ ಕೆಳಕ್ಕೆ ಬರಲಿಲ್ಲ. ವಿಠಲನು ಅದೇ ಸಮಯದಲ್ಲಿ ಕದ ವನ್ನು ತಳ್ಳಿದನು. ಒಳಚಿಲಕವನ್ನು ಹಾಕಿರಲಿಲ್ಲವಾದುದರಿಂದ ಥಟ್ಟನೆ ಒಳಕ್ಕೆ ನುಗ್ಗಿ ಆ ಕಿರುಮನೆಗೆ ಹೋಗಿನೋಡಿದನು. ಆ ದೇಹವು ಯಾರದೆಂಬುದು ಗೊ ತ್ತಾಗಲಿಲ್ಲ. ಗಾಢಾಂಧಕಾರ. ಜೇಬಿನಲ್ಲಿದ್ದ ವಿದ್ಯುದ್ದೀಪವನ್ನು ಪ್ರಯೋಗಿಸಿ ನೋಡಲು ಪಲ್ಲವನೆಂದು ತಿಳಿಯಿತು. ವಿಠಲನು ಬೇಗ ಸಾಹಸಮಾಡಿ ಆ ಶರೀರ ವನ್ನು ಹೆಗಲಮೇಲೆ ಹೊತ್ತುಕೊಂಡು ನಿಶ್ಶಬ್ದವಾಗಿ ಈಚೆಗೆ ಬಂದುಬಿಟ್ಟನು. ಆ ಮನೆಯ ಮುಂದೆ ವಿಶಾಲವಾದೊಂದು ಮೈದಾನ. ಅಲ್ಲಿ ಪ್ರಯತ್ನ ಪೂರ್ವ ಕವಾಗಿ ಅನೇಕ ವೃಕ್ಷಗಳನ್ನು ಬೆಳೆಯಿಸಿದ್ದ ಒಂದು ಕೃತಕವನ. ವಿಠಲನು ಅಲ್ಲಿಗೆ ಬಂದು ಹೊರೆಯನ್ನಿಳಿಸಿ ಆ ದೇಹದ ಪ್ರತಿನಾಡಿಯನ್ನೂ ಪರೀಕ್ಷಿಸತೊಡಗಿದನು. ಎದೆಯ ಮೂಳೆಗೆ ಮಾತ್ರ ಬಲವಾದ ಏಟು ತಗಲಿದ್ದಿತೇ ವಿನಾ ಆ ಕಠಾರಿಯು ಎದೆಯೊಳಕ್ಕಿಳಿದಿರಲಿಲ್ಲ. ಮತ್ತು ಪೆಟ್ಟುತಗಲಿ ಬಹಳ ಹೊತ್ತಾಗಿದ್ದುದರಿಂದಲೂ ಆ ಸಂಧ್ಯಾಸಮೀರಣವು ಹಿತವಾಗಿ ಬೀಸುತ್ತಿದ್ದುದರಿಂದಲೂ ಪಲ್ಲವನ ದೇಹದಲ್ಲಿ ಪ್ರಾಣ ಪ್ರವಾಹವು ಮೆಲ್ಲಮೆಲ್ಲಗೆ ಆಗತಾನೆ ಹರಿಯಲಾರಂಭಿಸಿ ಏನೋ ಒಂದು ಭರವಸೆಯನ್ನುಂಟುಮಾಡುವಂತಿದ್ದಿತು. ಇದನ್ನರಿತು ವಿಠಲನು ಸ್ವಲ್ಪ ಹೊತ್ತು ಆ ದೇಹವನ್ನಲ್ಲೇ ಇಟ್ಟುಕೊಂಡಿದ್ದನು. ಇನ್ನು ಮೇಲಾದರೂ ತಕ್ಕ ಚಿಕಿತ್ಸೆ ಮಾಡಿಸಿದರೆ ಪಲ್ಲವನು ಬದುಕುವ ಸಂಭವವಿರುವುದೆಂಬ ನಂಬಿಕೆಯುಂಟಾಯಿತು.

ವಿಠಲನು ಪುನಃ ಆ ದೇಹವನ್ನೇ ಕೊಂಡುಹೋಗಿ ಬಂಡಿನೆಟ್ಟಿನಲ್ಲಿ ಒಂದು ಕುದುರೆಯ ಗಾಡಿಯನ್ನು ಗೊತ್ತುಮಾಡಿ ಅದರಲ್ಲಿಟ್ಟುಕೊಂಡು ಔಷಧೋಪಚಾರಶಾಲೆಗೆ ಸಾಗಿಸಿಕೊಂಡು ಹೋದನು. ಅಲ್ಲಿ ಸುಮಾರು ಒಂದು ಘಂಟೆಯಕಾಲ ಉಪಚಾರ ನಡೆಯಲು ಪಲ್ಲವನಿಗೆ ಪ್ರಜ್ಞೆ ಬಂದಿತು. ಹೀಗೆಯೇ ಕಾಲಕ್ರಮದಿಂದ ತಕ್ಕಮಟ್ಟಿಗೆ ಗುಣವಾಯಿತು.

ಆ ರಾತ್ರಿ ಹನ್ನೊಂದು ಘಂಟೆಗೆ ತಿಲಮೆಗೆ ಬುದ್ಧಿ ಚಾಂಚಲ್ಯ ಹತ್ತುತ ಬಂದಿತು. ಅವಳು ಮಾಧವ ಭಾಸ್ಕರರನ್ನು ಕುರಿತು–ಅಯ್ಯ, ಇನ್ನು ನೀವು ಹೊರಡಿ. ಹೋಗಿ ಆ ಶವವನ್ನು ತೀರ್ಮಾನವಮಾಡಿಬಿಡಿ. ನಾನು ಪುನಃ ಅದರ ಮುಖವನ್ನು ನೋಡಲಾರೆ. ನನ್ನ ಮನಸ್ಸು ಹೇಗೆ ಹೇಗೊ ಇದೆ.

ಮಾಧವಭಾಸ್ಕರರು ಕೆಳಕ್ಕಿಳಿದು ಬಂದು ನೋಡಿದರು. ಆ ಕೊಠಡಿಯಲ್ಲಿ ಶವವಿರಲಿಲ್ಲ. ಈ ಸಂಗತಿಯನ್ನು ತಿಲಮೆಗೆ ತಿಳಿಯಿಸಬೇಕೇ ಬೇಡವೇ ಎಂದು ಯೋಚಿಸಿ, ಕಡೆಗೆ ತಿಳಿಸಿದರೆ ಅದೊಂದು ದೊಡ್ಡ ರಗಳೆಯಾಗುವುದೆಂದು ಹೆದರಿದರಲ್ಲದೆ ಪುನಃ ಅವಳೇನಾದರೂ ಕೇಳಿದರೆ ಅವಳ ಅಪ್ಪಣೆಯಂತೆಯೇ ಅದನ್ನು ವಿನಿಯೋಗಿಸಿಬಿಟ್ಟಿರುವುದಾಗಿ ಹೇಳಬೇಕೆಂದು ನಿರ್ಧರಿಸಿಕೊಂಡು ಓಡಿಹೋದರು.

ಪಲ್ಲವನಿಗೆ ಗಾಯವು ಚೆನ್ನಾಗಿ ವಾಸಿಯಾದ ಮೇಲೆ ವಿಠಲನು ಅವನನ್ನು ಹೊಸಮಂಗಲಕ್ಕೆ ಕರೆದುಕೊಂಡು ಹೋದನಲ್ಲದೆ ಪರಿಣಾಮದಲ್ಲಿ ಅಂದರೆ ಈ ಕಪಟನಾಟಕದ ಕಡೆಯಂಕದಲ್ಲಿ ಅವನ (ಪಲ್ಲವನ) ಪಾತ್ರದ ಅವಶ್ಯಕತೆ ಬರುವವರೆಗೂ ಆತನು ಅಲ್ಲೇ ವಿಶ್ರಾಂತಿಸುಖವನ್ನು ಅನುಭವಿಸುತಿರಬಹುದೆಂದು ಹೇಳಿ ತುಂಬಾ ಆದರಿಸಿದನು. ಪಲ್ಲವನು ಆಗ ನಡೆದ ಸಂಗತಿಯನ್ನೆಲ್ಲಾ ಅಮೂಲಾಗ್ರವಾಗಿ ತಿಳಿಸಿದನಲ್ಲದೆ ತಿಲಮೆಯ ಚರಿತ್ರೆಯನ್ನೆಲ್ಲಾ ವಿಸ್ತರಿಸಿ ಹೇಳಿದನು.

ವಿಠಲನು ಪುನಃ ನವನಗರಿಗೆ ಹಿಂದಿರುಗಿ ಬಂದು ಈ ಕೇಸಿನ ಪ್ರಾಬಲ್ಯಕ್ಕೆ ಸಹಾಯಕವಾದ ಇನ್ನೂ ಅನೇಕ ವಿಷಯಗಳನ್ನು ತಿಳಿಯಲು ಯತ್ನಿಸುತ್ತ ಕೆಲವು ಕಾಲದ ಮೇಲೆ ಕ್ರಮವಾದ ಮಾರ್ಗದಲಿ ಅವರನ್ನೆಲ್ಲಾ ಅಪರಾಧಕ್ಕೆ ಗುರಿಮಾಡಬೇಕೆಂದು (ಛಾರ್ಜು ಮಾಡಬೇಕೆಂದು)ಯೋಚಿಸುತ್ತಿದ್ದನು. ಈಮಧ್ಯೆ ಆಗಾಗ್ಗೆ ತಾನು ಸೋದರಮಾವ ವಾಗೀಶನಾಗಿ ಹೋಗಿ ಸೌದಾಮಿನಿಯ ಮನೆಯಲ್ಲಿರುತ್ತ

ಲೂ ಕೆಲವುವೇಳೆ ತಾನು ಊರಲ್ಲಿರುವುದಿಲ್ಲವೆಂದು ಅವರಿಗೆ ಹೇಳಿ ಹೊರಗೆ ಬಂದು ರಹಸ್ಯವಾಗಿ ಇತರಸ್ಥಳಗಳಲ್ಲಿ ವಾಸಮಾಡುತ್ತಲೂ ಇದ್ದನು. ಆದರೂ ಪ್ರಾಯಶಃ ಸೌದಾಮಿನಿ ಮುಂತಾದವರೆದುರಿಗೆ ವಿಠಲನು ಹಗಲುಹೊತ್ತು ಕಾಣಿಸಿಕೊಳ್ಳುತಿದ್ದುದೇ ವಿರಳ.

---

## ಹದಿನೈದನೆಯ ಪರಿಚ್ಛೇದ

ವಿಠಲನು ನವನಗರಿಗೆ ಬಂದಮೇಲೆ ಒಂದು ವಾರದವರೆಗೂ ಯಾವುದೊಂದು ಹೊಸ ಅಂಶವೂ ಗೊತ್ತಾಗಲಿಲ್ಲ. ಸೌದಾಮಿನಿಯು ತನ್ನ ಕೃತಕ ಮಾತುಲನಾದ ಈ ಕಳಿಂಗನನ್ನು ಬಹು ಗೌರವದಿಂದ ಆದರಿಸುತ್ತಿದ್ದಳು.

ವಾರಣಲಾಲನನ್ನು ಜೂಜಿಗೆಳೆಯುವ ವಿಷಯದಲ್ಲಿ ತಿಲಮೆಗೂ ಮಾಧವ ಭಾಸ್ಕರರಿಗೂ ಉಂಟಾಗಿದ್ದ ಮನಸ್ತಾಪವು ಪಲ್ಲವನ ಮೇಲೆ ಘಾತುಕಕೃತ್ಯ ನಡೆದಂದಿನಿಂದೀಚೆಗೆ ಮಾಸಿಹೋಯಿತು. ವಾರಣನು ಈ ಕೃತಕಮಾತುಲನಾದ ವಿಠಲನಿಗೆ ಕಣ್ಣುಮರೆಯಾಗಿಯೇ ತಿರುಗುತ್ತ ಬಂದನು. ಒಂದುವೇಳೆ ಅಕಸ್ಮಾತ್ತಾಗಿ ನೋಡಿದರೂ ಬೆಚ್ಚಿಬಿದ್ದು ತಲೆಯನ್ನು ಬಗ್ಗಿಸಿಕೊಳ್ಳುತ್ತಿದ್ದನು. ಆ ರಾತ್ರಿ ಜೂಜಿನ ಮನೆಯಲ್ಲಿ ತನಗೋಸ್ಕರ ಹೊಡೆದಾಡಿ ತನ್ನ ಹಣವನ್ನು ತೆಗೆದುಕೊಂಡು ಹೋದವನು ಈ ವಿಠಲನೇ ಇರಬಹುದೆಂದು ವಾರಣನು ಯೋಚಿಸಿದನು. ಆದರೆ ಆ ವಿಷಯವಾಗಿ ವಿಠಲನ ಸಂಗಡ ಯಾವ ಮಾತನಾಡುವುದಕ್ಕಾಗಲಿ ಆ ಹಣವನ್ನು ಕೇಳುವುದಕ್ಕಾಗಲಿ ಅವನಿಗೆ ಧೈರ್ಯವಿರಲಿಲ್ಲ.

ಪಲ್ಲವನಿಗೆ ಆ ಸಾಯಂಕಾಲ ಆ ಘೋರಕೃತ್ಯ ನಡೆದ ಬಹಳ ಹೊತ್ತಿನ ಮೇಲೆ ವಾರಣನು ಎಚ್ಚತ್ತಾಗ ತಿಲಮೆಯು ಅವನ ಮಗ್ಗುಲಲ್ಲಿ ಕುಳಿತು ಬೀಸಣಿಗೆಯಿಂದ ಬೀಸುತ್ತ ಉಪಚರಿಸುತ್ತಿದ್ದಳು. ಆಗ ವಾರಣನು ತಾನು ಕೆಳಗಿನ ಹಾಲಿಗೆ ಇಳಿದುಬಂದಾಗ ತಿಲಮೆಯು ನಡೆಯಿಸುತ್ತಿದ್ದ ನರಹತ್ಯವು ಪುನಃ ನೆನಪಿಗೆ ಬಂದುದರಿಂದ ರೋಮಾಂಚವನ್ನು ಹೊಂದಿ ನಡುಗಿದನು. ಹೀಗಾಗುವು

ದಕ್ಕೆ ಕಾರಣವೇನೆಂದು ತಿಲಮೆಯು ಕೇಳಿದಳು. ವಾರಣನು ಆಗ ತಾನು ನೋಡಿದ ಸಂಗತಿಯನ್ನೆಲ್ಲಾ ತಿಳಿಸಿದನು. ಅದಕ್ಕೆ ತಿಲಮೆಯು ಆ ಮನೆಗೆ ಯಾರೂ ಬಂದೇ ಇರಲಿಲ್ಲವೆಂದೂ ತಾನು (ವಾರಣನು) ಹಾಸಗೆಯನ್ನು ಬಿಟ್ಟು ಎದ್ದೇ ಇರಲಿಲ್ಲವೆಂದೂ ಹೇಳಿದುದಲ್ಲದೆ ಅದೆಲ್ಲ ದುಸ್ವಪ್ನವಾಗಿರಬಹುದೆಂದು ನಂಬಿಸಿದಳು. ವಾರಣನನ್ನು ಕುರಿತು ತಿಲಮೆಯು ಆಗಾಗ್ಗೆ—ಆ ದಿನ ಜೂಜಿನ ಕಟ್ಟೆಯಲ್ಲಿ ಆ ಮನುಷ್ಯನು ತೆಗೆದುಕೊಂಡು ಹೋಗಿದ್ದ ಹಣವು ಹಿಂದಕ್ಕೆ ಬಂದಿತೇ ಎಂದು ಪ್ರಶ್ನೆ ಮಾಡುತ್ತಿದ್ದಳು. ಅದಕ್ಕವನು—ಹಣವು ಬರಲಿಲ್ಲವೆಂತಲೂ ಆ ಮನುಷ್ಯ ಯಾರೆಂಬುದು ಕೂಡ ತನಗೆ ಗೊತ್ತಿಲ್ಲವೆಂತಲೂ ಉತ್ತರ ಹೇಳು ತ್ತಿದ್ದನು.

ಸೌದಾಮಿನಿ ಮತ್ತು ಮಾಧವಭಾಸ್ಕರರು ವಾರಣನ ಗೊಡವೆಗೆ ಹೋಗು ವುದನ್ನು ಬಿಟ್ಟುಬಿಟ್ಟರು. ಅವನಿಗೂ ಇವರಿಗೂ ಬಳಕೆಯು ಕಡಿಮೆಯಾಗುತ್ತ ಬಂದಿತು. ವಾರಣನು ತಿಲಮೆಯನ್ನೇ ಬಲವಾಗಿ ನಂಬಿದನು. ಮುಂದೆ ತನ್ನ ಪರಿಣಾಮವೇನಾಗುವುದೆಂದು ಗೊತ್ತಿದ್ದರೂ ಅವನೇನೋ ತನ್ನ ದಾರಿ ಯನ್ನು ಬಿಡಲಿಲ್ಲ.

ತಿಲಮೆಯು ಅಕಸ್ಮಾತ್ತಾಗಿ ಬದಲಾಯಿಸಿಹೋದಳು. ಅದು ವಾರಣ ನಿಗೂ ಗೊತ್ತಾಗಿ ಹೀಗೆ ಅಸ್ವಸ್ಥತೆಗೆ ಕಾರಣವೇನೆಂದು ಅವನು ಎಷ್ಟೋ ವಿಧ ವಾಗಿ ಬೇಡಿ ಕೇಳಿಕೊಂಡರೂ ತಿಲಮೆಯು ಬಾಯಿಬಿಡಲಿಲ್ಲ. ಅವಳು ಮಂಕಾ ದಳು. ಅಂಜುಪುರುಕಿಯಾದಳು. ಗಾಳಿಯಿಂದ ತೆರಗೆಲೆಯಲುಗಿದರೂ ಕಿಟ್ಟನೆ ಕಿರುಚಿಕೊಳ್ಳುವವಳಾದಳು. ಅನೇಕ ಘಂಟೆಗಳಕಾಲ ಒಬ್ಬಳೇ ಕೊಠಡಿಯಲ್ಲಿ ಕುಳಿತು ಅಂಗೈಯಲ್ಲಿ ಗಲ್ಲವನ್ನಿಟ್ಟುಕೊಂಡು ಕಣ್ಣೀರು ಸುರಿಸುವಳು. ಅಕ ಸ್ಮಾತ್ತಾಗಿ ಕಿಟಿಕಿಯ ಕಡೆ ನೋಡಿದಾಗ ಮರದ ನೆರಳು ಪಡಸಾಲೆಯ ಜಗು ಲಿಯ ಮೇಲೆ ಬಿದ್ದುದನ್ನು ಕಂಡರೂ ಮನುಷ್ಯ ವ್ಯಕ್ತಿಯ ಛಾಯೆಯೆಂದು ಭ್ರಮಿಸಿ ನಡುಗುವಳು. ಪಲ್ಲವನು ದುಃಖಸೂಚಕವಾದ ಮುಖದಿಂದ ಸರ್ವದಾ ತನ್ನೆದು ರಿಗೆ ಬಂದು ನಿಂತಿದ್ದಂತೆ ಅವಳಿಗೆ ತೋರುತ್ತಿದ್ದಿತು. ಮನೆಯಲ್ಲೊಬ್ಬಳೇ ಇದ್ದಾಗ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ಸುತ್ತುತ್ತ ಕೈಕೈಹಿಸುಕಿಕೊಳ್ಳುತ್ತ ಹುಚ್ಚಿ ಯಂತೆ ದೀನಧ್ವನಿಯಿಂದ ಅರಚುತ್ತಿದ್ದಳು. ಇನ್ನೊಂದಾವೃತ್ತಿಯೇನಾದರೂ

ಪಲ್ಲವನು ಎದುರಿಗೆ ಬಂದು ನಿಂತಿದ್ದರೆ ತಿಲಪೆುಯು ನಿರ್ವಂಚನೆಯಾಗಿ ತನ್ನ ಅಪ ರಾಧಗಳನ್ನೆಲ್ಲಾ ಒಪ್ಪಿಕೊಂಡು ಆತನ ಕ್ಷಮೆಯನ್ನು ಬೇಡಿಕೊಳ್ಳುತ್ತಿದ್ದಳೆಂಬುದು ಖಂಡಿತ. ಇದನ್ನೆಲ್ಲಾ ನೋಡಿದರೆ ತಿಲಮೆಗೆ ಇನ್ನುಮೇಲಾದರೂ ಸನ್ಮಾರ್ಗ ಪ್ರವರ್ತನೆಯುಂಟಾದೀತೆಂದು ಯಾರಾದರೂ ಒಂದುವೇಳೆ ಭಾವಿಸಬಹುದು ; ಆದರೆ ಈ ರಾಕ್ಷಸಿಯು ಅದಕ್ಕೆ ಬದುಲಾಗಿ ತನ್ನ ಜತೆಗಾರರೊಡನೆ ಸೇರಿ ಕೊಂಡು ಇನ್ನೂ ಹೇಯವಾದ ಕೃತ್ಯಗಳನ್ನು ನಡೆಯಿಸುವುದಕ್ಕೆ ತಕ್ಕ ಪಿತೂರಿಗ ಳನ್ನು ಮಾಡುತ್ತಿದ್ದಳು.

ಹಾಗೂ ವಾರಣನ ವಿಷಯದಲ್ಲೇನೋ ಇವಳ ಸ್ವಭಾವವು ಬದಲಾಯಿ ಸಿತು. ಇಂತಹ ಸುಬುದ್ಧಿಯು ಇವಳ ಜನ್ಮಕಾಲದಿಂದ ಆದುವರೆಗೂ ಎಂದೂ ಇದ್ದುದಲ್ಲ. ಇನ್ನುಮೇಲಾದರೂ ವಾರಣನ ಯೋಗಕ್ಷೇಮವನ್ನು ಸರಿಯಾಗಿ ನೋಡಿಕೊಳ್ಳಬೇಕೆಂಬ ಅಭಿಮಾನ ಹುಟ್ಟಿತು. ಈಮಧ್ಯೆ ತಾನು ವನಜನ ಹಕ್ಕಿಗೆ ಸೇರಿದವಳಲ್ಲವೆ ಎಂದುಕೊಂಡಳು. ಪುನಃ-ಛಿಃ, ತನಗೂ ಅವನಿಗೂ ಶಾಸ್ತ್ರೋಕ್ತವಾದ ವಿವಾಹವಾಗಿರಲಿಲ್ಲವಾಗಿ ಅವನಿಗೇನೂ ತನ್ನಮೇಲೆ ಅಧಿ ಕಾರವಿಲ್ಲವೆಂದೂ ತಾನು ವಾರಣನ ಪತ್ನಿಯೇ ಸರಿಯೆಂದೂ ಅಂದುಕೊಂಡಳು. ಇದುವರೆಗಿನಂತೆ ಇನ್ನು ಮುಂದಕ್ಕೂ ಮಾದಕ ಪಾನಕಗಳನ್ನು ಕುಡಿಸಿ ಅವ ನನ್ನು ಕೆಡಿಸಿ ಅವನು ಉನ್ಮತ್ತಾವಸ್ಥೆಯಲ್ಲಿದ್ದಾಗ ಏನನ್ನೂ ಕಸು ಕೊಳ್ಳಕೂಡ ದೆಂದೂ, ವಿಷಪ್ರಯೋಗದಿಂದ ಕೊಲ್ಲಕೂಡದೆಂದೂ, ಸುಲಿಗೆಕಾರರಾದ ಜೂಜು ಗಾರರ ಕೈಗೆ ಅವನನ್ನು ಸಿಕ್ಕಿಸಬಾರದೆಂದೂ ಸಾಧ್ಯವಾದಮಟ್ಟಿಗೂ ಅವನಿಗೆ ಒಳ್ಳೆಯದನ್ನೇ ಮಾಡಬೇಕೆಂದೂ ಯೋಚಿಸಿದಳು.

ವಾರಣನು ತಿಲಮೆಯನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಅವನಿ ಗಿಂತ ಹೆಚ್ಚು ಅಕೃತ್ರಿಮಪ್ರೀತಿಯುಳ್ಳ ಆಪ್ತರನ್ನು ಅವಳು ಎಂದೂ ಕಂಡವಳೇ ಅಲ್ಲ. ನರಹತ್ಯಾಕಾರ್ಯದಲ್ಲಿ ಮುಳುಗಿದ ಸ್ವಭಾವವುಳ್ಳ ದುರುಳಸ್ತ್ರೀಯಾದ ತಿಲಮೆಗೆ ಕಡೆಗಾಲದಲ್ಲಿ ಈ ಬುದ್ಧಿಯುಂಟಾದುದು " ವಿನಾಶಕಾಲೇ ವಿಪರೀತ ಬುದ್ಧಿಃ " ಎಂಬ ಲೋಕೋಕ್ತಿಯನ್ನು ಸಾರ್ಥಕಪಡಿಸಿತು. ಅವಳ ಮನೋವೇ ದನೆಯಾದರೂ ಯಾವುದರಿಂದಲೂ ತಪ್ಪಲಿಲ್ಲ. ಮರುಗಿ ಕೊರಗಿ, ಬೆಂದು ಬೆಂಡಾಗಿ ಬಸವಳಿಯುತ್ತಿದ್ದಳು.

ಒಂದು ದಿನ ರಾತ್ರಿ ಸೌದಾಮಿನಿ, ಮಾಧವ, ಭಾಸ್ಕರ, ತಿಲಮೆ ಇವರೆಲ್ಲ ಒಟ್ಟಾಗಿ ಸೇರಿ ಮುಂದೆ ಏನೇನು ಮಾಡಬೇಕೆಂದು ಯೋಚಿಸುತ್ತ ಕುಳಿತಿದ್ದರು ವನಜಚಂದ್ರನು ಲಲಿತಪಟ್ಟಣದಿಂದ ಒಂದೆರಡು ದಿನಗಳಲ್ಲೇ ಬರುವ ನಿರೀಕ್ಷಣೆಯೂ ಇದ್ದಿತು.

ಭಾಸ್ಕರನಿಗೆ ಆ ಸೋದರಮಾವ ವಾಗೀಶನ ಹೆಸರು ಹೇಳಿದರೆ ಆಗದು. ಏನಾದರೂ ಮಾಡಿ ಅವನನ್ನೂ ವಾರಣನನ್ನೂ ನಿರ್ಮೂಲಮಾಡಿ ಬಿಡುವುದುತ್ತಮ ವೆಂದು ಎಲ್ಲರಿಗೂ ಸಲಹೆ ಹೇಳಿದನು. ಮಾಧವ_ಓಹೋ! ಹೌದು; ದಿಟ. ಅವನನ್ನು ಮುಕ್ತಮಾಡಬೇಕಾದುದೇ. ಆ ಕಳಿಂಗನು ಎಲ್ಲಕ್ಕೂ ತಲೆಹಾಕಿ ಕೊಂಡು ಬರುತ್ತಾನೆ. ಬರಬಾರದ ವೇಳೆಗಳಲ್ಲೆಲ್ಲ ಬಂದು ತೊಂದರೆ ಕೊಡು ತ್ತಾನೆ. ಅವನಿಗೆ ನಮ್ಮಗಳಮೇಲೆ ಏನೋ ಸಂಶಯವಿರುವಹಾಗೂ ನನಗೆ ತೋರುತ್ತದೆ.

ಸೌದಾಮಿನಿ_ಅವನನ್ನು ತೊಲಗಿಸುವುದಕ್ಕೇನುಪಾಯ ಮಾಡಬೇಕೆನ್ನು ತ್ತೀರಿ?

ಮಾಧವ_ತಿಲಮೆಯು ಕಾಲಾಂತಕ ರಸವನ್ನು ಸ್ವಲ್ಪ ಕೊಡುತ್ತಾಳೆ. ನೀನು ಒಂದೆರಡು ತೊಟ್ಟುಗಳನ್ನು ಕಿವಿಯಲ್ಲಿ ಹಾಕಿಬಿಟ್ಟರೆ ಬೇಗ ಪ್ರಾಣ ಬಿಡುವನು.

ತಿಲಮೆಯು ಮಾಧವನನ್ನು ದುರುಗುಟ್ಟಿಕೊಂಡು ನೋಡಿದಳು. ಇನ್ನು ಮುಂದಕ್ಕೇನೋ ಇವರಿವರಿಗೆ ದೊಡ್ಡ ಕಲಹವಾದೀತೆಂದು ಯೋಚಿಸಿ ಸೌದಾಮಿ ನಿಯು ಅಷ್ಟರಲ್ಲೇ ಎಚ್ಚೆತ್ತು ವಿಷಯವನ್ನು ಬದಲಾಯಿಸಿ_ಆ ನಾಗೇಶನ ಗತಿ ಯೇನಾಯಿತೋ ತಿಳಿಯಲೇ ಇಲ್ಲವಲ್ಲಾ! ಎಂದಳು.

ಭಾಸ್ಕರ_ಅದು ಹೇಳುವುದಕ್ಕೆ ಸಾಧ್ಯವಿಲ್ಲ. ಅವನು ಬಹಳ ದಿನಗಳಿಂ ದಲೂ ಎಲ್ಲೂ ಕಾಣಲಿಲ್ಲ. ಬಹುಶಃ ಹೆದರಿಕೊಂಡು ಎಲ್ಲಿಗಾದರೂ ಓಡಿಹೋ ದನೋ ಏನೊ! ನಮ್ಮಂತಹವರಿಂದ ಅವನಿಗೇನೂ ಪ್ರಯೋಜನವಿಲ್ಲ, ಅವನು ಪುನಃ ಇಲ್ಲಿಗೆ ಬಾರದಿದ್ದರೆ ಕ್ಷೇಮವೇ ಆಯಿತು.

ಎಲ್ಲರೂ ಬಹಳವಾಗಿ ಪ್ರೋತ್ಸಾಹಿಸಿದ ಬಳಿಕ ಕಡೆಗೆ ಶಿಲವೆಯು ಕಾಲಾಂತಕ ರಸವನ್ನು ಸೌದಾಮಿನಿಯ ಕೈಗೆ ಕೊಟ್ಟಳು. ಆ ರಾತ್ರಿ ವಿಠಲನು ಆ ಮನೆಗೆ ಬರಲಿಲ್ಲವಾಗಿ ಅವನನ್ನು ಕೊಲ್ಲುವುದಕ್ಕೆ ಅವಕಾಶ ಸಿಕ್ಕಲಿಲ್ಲ.

ನೆಲಮಾಳಿಗೆಯಲ್ಲಿ ಹಣವನ್ನು ಬಾನಿಯಲ್ಲೆಸೆದಿದ್ದ ಆ ಮನೆಗೆ ವಿಠಲನು ಹೋಗಿ ಕೆಲವು ವಿಷಯಗಳನ್ನು ತಿಳಿದುಕೊಂಡು ಬಂದನಂತರ ನಟೇಶನಿಗೆ ಟೆಲಿಗ್ರಾಫ್ ಕೊಟ್ಟು-ನಾಗೇಶನನ್ನು ದಸ್ತಗಿರಿ ಮಾಡಿ ಹಿಡಿಯಬೇಕೆಂದೂ ಯಾವ ವಿಧದಲ್ಲೂ ಅವನು ತಪ್ಪಿಸಿಕೊಂಡು ಓಡಿಹೋಗದಂತೆಯೂ ಮತ್ತೆ ಯಾರೊಡನೆಯೂ ಮಾತುಕಥೆಗಳನ್ನಾಡದಂತೆಯೂ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದೂ ತಿಳಿಸಿದನು ಇದಕ್ಕುತ್ತರವಾಗಿ ನಟೇಶನಿಂದ ಒಂದು ತಂತೀಸಮಾಚಾರ ಬಂದಿತು.-ಅದರಲ್ಲಿ ನಾಗೇಶನನ್ನು ದಸ್ತಗಿರಿ ಮಾಡಿದ್ದಾಯಿತೆಂದು ತಿಳಿಸಿ ಮುಂದಕ್ಕೇನು ಮಾಡಬೇಕೆಂದೂ ಕೇಳಿದ್ದಿತು. ಮಾರನೆಯದಿನ ಬೆಳಗಾಗುವಾಗ್ಗೆ ತಾನೂ ಬರುವುದಾಗಿ ವಿಠಲನೂ ಟೆಲಿಗ್ರಾಫ್ ಕೊಟ್ಟು ಆ ರಾತ್ರಿಯ ರೈಲಿನಲ್ಲೇ ಓದಾಣಿಗೆ ಹೊರಟು ಹೋದನು. ಬೆಳಿಗ್ಗೆ, ಎಲ್ಲರೂ ಅಲ್ಲಿ ಸೇರುತ್ತಲೆ ವಿಠಲನೂ ನಟೇಶನೂ ಸ್ನಾನಪಾನಾದಿಗಳನ್ನು ತೀರಿಸಿಕೊಂಡು ನಾಗೇಶನನ್ನು ಸೆರೆಯಲ್ಲಿಟ್ಟಿದ್ದ ಪೋಲೀಸ್ ಸ್ಟೇಷನ್ನಿಗೆ ಹೋದರು.

ನಾಗೇಶನು ವಿಠಲನ ಮುಖವನ್ನು ಕಾಣುತ್ತಲೇ ಎದೆಎದೆ ಬಡಿದುಕೊಂಡು ಗೋಳೋ ಎಂದು ಅಳುತ್ತಲೂ ಹುಚ್ಚು ಹುಚ್ಚಾಗಿ ಆಡುತ್ತಲೂ ಅತಿಯಾಗಿ ಗದ್ದಲಮಾಡಿದನು. ಇದನ್ನು ತಪ್ಪಿಸಲು ಅವನನ್ನು ಕೈಕಾಲು ಕಟ್ಟಿಸಿ ಉರುಳಿಸಬೇಕಾಯಿತು.

ನಾಗೇಶ-ಅಯ್ಯೋ! ನನ್ನನ್ನೇನೂ ಮಾಡಬೇಡಿ. ನನ್ನ ಆಸ್ತಿಯನ್ನೆಲ್ಲ ಕೊಡುತ್ತೇನೆ, ಸುಮ್ಮನೆ ಬಿಟ್ಟುಬಿಡಿ.

ವಿಠಲ-ಎಂದಿಗೂ ಆಗುವುದಿಲ್ಲ. ನೀನು ಕೊಲೆಪಾತಕ, ಕಳ್ಳ, ಪರಮ ನೀಚ, ನೀನು ಅನೇಕ ಪುರುಷರನ್ನೂ ಪ್ರಫುಲ್ಲೆಯೆಂಬ ಸ್ತ್ರೀಯನ್ನೂ ಖೂನಿಮಾಡಿರುವುದನ್ನು ನಾನು ರುಜುವಾತು ಮಾಡುವೆನು.

ನಾಗೇಶ-ಇಲ್ಲ, ಇಲ್ಲ. ನಾನು ಪ್ರಮಾಣಮಾಡಿ ಹೇಳುತ್ತೇನೆ. ನಾನು ಪ್ರಫುಲ್ಲೆಯನ್ನು ಕೊಲ್ಲಲಿಲ್ಲ. ಅವಳು ನನ್ನ ಮನೆಯಿಂದ ತಪ್ಪಿಸಿಕೊಂಡು ಓಡಿ ಹೋದಳು.

ವಿಠಲ-ಓಹೊ! ಹಾಗಾದರೆ ನೀನು ಅವಳನ್ನು ನಿನ್ನ ಮನೆಯಲ್ಲಿ ಸೆರೆಯಿಟ್ಟಿದ್ದೆಯೊ ?

ನಾಗೇಶ-ಹೌದು, ನಾನು ಹಾಗೆ ಮಾಡಿದುದುಂಟು.

ವಿಠಲ-ನೀನು ಒಬ್ಬ ತರುಣನನ್ನು ಕೊಂದು ಆ ಶವವನ್ನು ನೆಲಮಾಳಿಗೆಯಲ್ಲಿಟ್ಟಿರಲಿಲ್ಲವೆ ?

ಈಗ ನಾಗೇಶನಿಗೆ ಮಾತು ನಿಂತುಹೋಯಿತು. ಎದೆಗುಂದಿ ವಿಸ್ಮಿತನಾಗಿ ನಿಂತನು. ನಾಗೇಶನು ಮೊದಲು ಮೊದಲು ತಾನೇನೂ ಅರಿಯದ ಸಾಧುವೆಂದು ಬಹಳವಾಗಿ ವಾದಿಸಿದನು. ಆದರೆ ವಿಠಲನು ತಾನು ಅವನ (ನಾಗೇಶನ) ವಿಷಯದಲ್ಲಿ ಎಳ್ಳಷ್ಟೂ ಕನಿಕರತೋರಿಸುವುದಿಲ್ಲವೆಂದೂ ಈ ಮೊಕದ್ದಮೆಯ ಆದ್ಯಂತವನ್ನೂ ಬಿಚ್ಚಿ ಒದರಿ ಪುಂಡುಗಾರರ ಒಂಡಾಯವನ್ನಡಗಿಸುವುದು ಖಂಡಿತವೆಂದೂ ದೃಢ ಪ್ರತಿಜ್ಞೆಯಿಂದ ಹೇಳಲು, ಆಗ ನಾಗೇಶನು—ತಾನು ಮಾಡಿದುದನ್ನೆಲ್ಲ ಯಥಾರ್ಥವಾಗಿ ಹೇಳಿದರೆ ವಿಠಲನಿಗೇನಾದರೂ ಮರುಕಹುಟ್ಟಿ ತನ್ನನ್ನು ಗಲ್ಲಿಗೆ ಹಾಕಿಸುವುದಕ್ಕೆ ಬದಲಾಗಿ ಯಾವಜ್ಜೀವ ಕಾರಾಗೃಹವಾಸರೂಪವಾದ ಕಡಿಮೆಯ ಶಿಕ್ಷೆಯನ್ನಾದರೂ ಮಾಡಿಸಿ ಪ್ರಾಣವುಳಿಸುವನೋ ಏನೋ ಎಂಬ ಭರವಸೆ ತೋರಿದುದರಿಂದ ನಾಗೇಶನು ಕಡೆಗೆ ಹೀಗೆ ಬಾಯಿಬಿಟ್ಟು ಹೇಳುತ್ತ ಬಂದನು

ನಾಗೇಶ-ನಾನು ಸತ್ಯವನ್ನೇ ಹೇಳಿದರೆ ನೀನು ನನ್ನನ್ನು ಗಲ್ಲಿಗೆ ಹಾಕಿಸುವುದಿಲ್ಲವೊ ?

ವಿಠಲ-ನಿನಗೇನು ಮಾಡಬೇಕೋ ಅದೆಲ್ಲ ನನಗೆ ಗೊತ್ತಿದೆ.

ನಾಗೇಶನು ವಿಠಲನ ಈ ಮಾತನ್ನು ತನಗೆ ಕೊಟ್ಟ ಅಭಯವೆಂದು ತಿಳಿದುಕೊಂಡು-ಹಾಗಾದರೆ ಎಲ್ಲವನ್ನೂ ಹೇಳುತ್ತೇನೆ ಕೇಳು, ಎಂದನು.

———

# ಹದಿನಾರನೆಯ ಪರಿಚ್ಛೇದ

ವಿಠಲ_ನೀನು ಹುಟ್ಟಿದಂದಿನಿಂದ ಮಾಡಿದ ಅಪರಾಧಗಳನ್ನೆಲ್ಲ ಈಗ ಹೇಳಬೇಕಾದುದಿಲ್ಲ. ನಾನು ಕೇಳುವ ವಿಷಯಕ್ಕೆ ಸಂಬಂಧಪಟ್ಟುದನ್ನು ಮಾತ್ರ ಹೇಳು.

ನಾಗೇಶ_ಆಗಲಿ, ಅಪ್ಪಣೆಯಂತೆ.

ವಿಠಲ_ಮಾಧವನಿಗೂ ನಿನಗೂ ಪರಿಚಯವಾದುದು ಯಾವಾಗ ?

ನಾಗೇಶ_ಅವನನ್ನು ನಾನು ಲಲಿತಪಟ್ಟಣದಲ್ಲಿ ಬಲ್ಲೆನು. ಅವನು ಸ್ಪಷ್ಟನೆಯ ಕಾಗದಪತ್ರಗಳನ್ನು ತಯಾರ್ಮಾಡುವುದರಲ್ಲಿ ಪ್ರಸಿದ್ಧ. ಭಾಸ್ಕರನು ಇದರ ಹತ್ತಿರದ ದೇಶದವನು. ಕನ್ನಾ ಚೋರಿಯ ಮೊಕದ್ದಮೆಗಳಲ್ಲಿ ಮಾಧವನಿಗೆ ಕೆಲವು ಸಲ ಸಜಾ ಆಗಿದ್ದಿತು.

ವಿಠಲ_ನೀನು ನವನಗರಿಯಲ್ಲಿ ಅವನನ್ನು ಕಂಡುದು ಯಾವಾಗ ?

ನಾಗೇಶ_ಈಗ್ಗೆ ಎರಡು ತಿಂಗಳ ಮೊದಲು.

ವಿಠಲ_ಅವನು ನಿನಗೇನನ್ನು ಹೇಳಿದನು ?

ನಾಗೇಶ_ಹೆಚ್ಚಾಗಿ ಹಣ ಸಿಕ್ಕುವಂತಹ ಒಂದು ಕೆಲಸವಿದೆಯೆಂದೂ ಅದಕ್ಕೆ ನಾನು ಸಹಾಯ ಮಾಡಬೇಕೆಂದೂ ಹೇಳಿದನು.

ವಿಠಲ_ಆಹಾ ! ನೀನೇನು, ಅಗತ್ಯವಾಗಿ ಒಪ್ಪಿಕೊಂಡಿರಬಹುದಲ್ಲವೆ ?

ನಾಗೇಶ_ಹೌದು, ಒಪ್ಪಿಕೊಂಡೆನು.

ವಿಠಲ_ನೀನೇನು ಸಹಾಯಮಾಡಬೇಕೆಂದು ಕೇಳಿದನು ?

ನಾಗೇಶ_ತನಗೆ ಯಾವನೋ ಒಬ್ಬ ಮಿತ್ರನಿರುವನೆಂದೂ ಅವನು ವೇಶ್ಯೆಯ ಹೊಟ್ಟೆಯಲ್ಲಿ ಹುಟ್ಟಿದವನಾದುದರಿಂದ ತಂದೆಯ ಆಸ್ತಿಗೆ ಹಕ್ಕುದಾರನಲ್ಲವೆಂತಲೂ ಅಂತಹ ಹಕ್ಕನ್ನು ಪಡೆಯಬೇಕಾದರೆ ನ್ಯಾಯವಾಗಿ ಹಕ್ಕುದಾರನಾದ ತಮ್ಮನನ್ನೂ ತಂದೆಯನ್ನೂ ಸಹ ನಿರ್ಮೂಲ ಮಾಡಬೇಕೆಂದೂ ಈ ವಾಹ

ತ್ಕಾರ್ಯಕ್ಕೆ ಪ್ರವರ್ತಿಸಿದರೆ ಲಕ್ಷಾಂತರ ರೂಪಾಯಿಗಳ ಸಂಪಾದನೆಯುಂಟೆಂದೂ ತಿಳಿಸಿದನು.

ವಿಠಲ–ಇದನ್ನು ಹೇಗೆ ನಡೆಸಬೇಕೆಂಬುದನ್ನೂ ಹೇಳಿದನೊ ?

ನಾಗೇಶ–ಹೌದು, ಹೇಳಿದನು. ವಿಷಪ್ರಯೋಗದಿಂದ.

ವಿಠಲ– ಅವರ ಹೆಸರನ್ನಾದರೂ ಹೇಳಿದನೊ ?

ನಾಗೇಶ–ಇಲ್ಲ. "ಆ ತಮ್ಮನು ತನ್ನ ಸಂಗಡಲೇ ಇರುವನು. ಅವನು ಸಾಯುವಂತಿದಾನೆ. ಅವನು ನವನಗರಿಯಲ್ಲಿ ಒಬ್ಬ ಕೋಟೀಶ್ವರನ ಮಗಳನ್ನು ಮೋಹಿಸಿದಾನೆ. ಅವಳು ಭಾಸ್ಕರನ ಹೆಂಡತಿಯಂತೆಯೇ ಇದಾಳೆ. ಯಾವ ವಿಷಯದಲ್ಲೂ ಭೇದವೇ ತೋರುವುದಿಲ್ಲ. ಆ ತರುಣನಾದ ತಮ್ಮನು ಸಾಯುವುದಕ್ಕೆ ಮುಂಚೆ ಆ ಕನ್ಯೆಯನ್ನು ಮದುವೆಯಾದರೂ ಮಾಡಿಕೊಂಡು ಮನಸ್ಸಂತೋಷಪಡಬೇಕೆಂದಿದಾನೆ." ಎಂತಲೂ ಅವನ ಇಷ್ಟಕ್ಕೆ ತಕ್ಕಂತೆ ಮದುವೆಯ ಶಾಸ್ತ್ರವನ್ನು ಮಾಡಿಸಿಬಿಟ್ಟು ಬಳಿಕ ಆ ಹುಡುಗಿಯನ್ನು ಹಾರಿಸಿಬಿಟ್ಟು ಅವಳಿಗೆ ಬದಲಾಗಿ ಭಾಸ್ಕರನ ಹೆಂಡತಿಯನ್ನೇ ಅವಳೆಂದು ನಟನೆಮಾಡಿಸಿ ತರುವಾಯ ಲಲಿತಪಟ್ಟಣಕ್ಕೆ ಕರೆದುಕೊಂಡು ಹೋಗಬೇಕೆಂತಲೂ ಯೋಚಿಸಿರುವುದಾಗಿ ಹೇಳಿದನು.

ವಿಠಲ–ಅವರ ಯೋಚನೆಯನ್ನೆಲ್ಲ ನೆರವೇರಿಸಿಕೊಂಡರೇನೋ, ಅಲ್ಲವೆ ?

ನಾಗೇಶ–ಹೌದು. ಅವರು ಕಾಂತನಾಥನಿಗೆ–ಇಲ್ಲ, ಈಚೆಗೆ ನನಗೆ ಆ ಹೆಸರು ತಿಳಿಯಿತು. ಕ್ಷಮಿಸು.–ವಿಷಪ್ರಯೋಗಮಾಡಿ ಕೊಂದರು. ಅವನ ಶವವನ್ನು ಇಂತಹಕಡೆ ಇಂತಹ ಮನೆಯಹಿಂದೆ ಹರಿಯುವ ಕಾಲುವೆಯಲ್ಲಿ ಹಾಕಿದರು. ಅನಂತರ ಅಪ್ರಪುಲ್ಲೆಯೆಂಬ ಹುಡುಗಿಯನ್ನು ಹಾರಿಸಲು ನಾನು ಸಹಾಯ ಮಾಡಿದೆನು. ಬಳಿಕ ಮಾಧವನು ನಿನ್ನನ್ನೂ (ವಿಠಲನನ್ನೂ) ಆ ಹುಡುಗಿಯನ್ನೂ ಕೊಲ್ಲುವಂತೆ ನನಗೆ ಹೇಳಿದನು. ನಾನೂ ಆಗಲೆಂದು ಮಾತು ಕೊಟ್ಟೆನು. ನಾನು ಅವಳನ್ನು ಒಂದು ಮನೆಯಲ್ಲಿಟ್ಟು ಬೀಗ ಹಾಕಿದ್ದೆನು. ಅವಳ ಮುಖವನ್ನು ನೋಡಿದಾಗ ನನಗೆ ಅವಳನ್ನು ಕೊಲ್ಲಲು ಮನಸ್ಸು ಬರಲಿಲ್ಲ. ನನಗೆ ಅವ

ಳಲ್ಲಿ ಅಷ್ಟು ಪ್ರೀತಿ. ಮತ್ತೊಂದು ದಿನ ಅಲ್ಲಿಗೆ ಹೋಗಿ ನೋಡುವಲ್ಲಿ ಅವಳೇ ಇರಲಿಲ್ಲ.

ವಿಠಲ-ಆಗ ನಿನಗೆ ಬಹು ಗಾಬರಿಯಾಯಿತೋ ?

ನಾಗೇಶ-ಹೌದು, ನನ್ನ ಎದೆಯೇ ಸೀಳಿಹೋಯಿತು. ಅವಳು ತನ್ನ ಮನೆಗೆ ಹೋಗಿಬರಬಹುದೆಂದೂ ನಾನವಳನ್ನು ಕೊಲ್ಲದಿರುವ ವಿಷಯವು ಮಾಧವನಿಗೆ ಗೊತ್ತಾಗುವುದಲ್ಲಾ ಇನ್ನೇನುಗತಿಯೆಂದೂ ತುಂಬ ಹೆದರಿದೆನು. ನೆಲಮಾಳಿಗೆಯ ಬಾವಿಯಲ್ಲಿ ಹಾಕಿದ್ದ ಶವವು ಜಾಯಿಕಾಯಿ ಮರದ ಪೆಟ್ಟಿಗೆಯಲ್ಲಿದ್ದುದನ್ನು ನೋಡಿದಾಗ ಈ ಎರಡು ಕೆಲಸಗಳನ್ನೂ ನೀನೇ ನಡೆಯಿಸಿರಬೇಕೆಂದು ಅಂದುಕೊಂಡೆನು.

ವಿಠಲ-ಆ ನೆಲಮಾಳಿಗೆಯೊಳಗಿದ್ದುದು ಯಾರ ಹೆಣ ?

ನಾಗೇಶ-ಅದು ಕಾಂತನಾಥನ ಸೇವಕನಾದ ಹನುಮಂತನ ಶವ. ಅವನು ಬೀದಿಯಲ್ಲಿ ಹೋಗುತ್ತಿದ್ದಾಗ ಮಾಧವ ಭಾಸ್ಕರರು ಅವನನ್ನು ಪ್ರೋತ್ಸಾಹಿಸಿ ಅಲ್ಲಿಗೆ ಕರೆತಂದರು.

ವಿಠಲ-ಅವರು ಅವನನ್ನು ಕರೆತಂದಾಗ ನೀನೂ ಅಲ್ಲಿದ್ದೆಯೊ ?

ನಾಗೇಶ-ಇದ್ದೆ. ಭಾಸ್ಕರನು ಆ ಹುಡುಗನ ಕೊರಳನ್ನು ಚಾಕುವಿನಿಂದ ಕೊಯ್ದನು. ಮಾಧವನು ಅವನ ತಲೆಗೆ ತುಪಾಕಿ ಹಾರಿಸಿದನು. ಅವನು ಸತ್ತಮೇಲೆ ಆ ಶವವನ್ನು ಅಲ್ಲಿ ಹಾಕಿದರು.

ವಿಠಲ-ನೀನೂ ಅದಕ್ಕೆ ಸಹಾಯವಾಗಿದ್ದೆಯೋ ?

ನಾಗೇಶ-ಇಲ್ಲ, ಸುಮ್ಮನೆ ನೋಡುತಿದ್ದೆ.

ವಿಠಲ-ನೀನು ತಿಳಿದಿರುವುದೆಲ್ಲ ಇಷ್ಟೇನೊ ?

ನಾಗೇಶ-ಇನ್ನೂ ಸ್ವಲ್ಪವುಂಟು, ತಿಲಮೆಯು ವಿಷಕನ್ಯಕೆ. ಅವಳಿಗೆ ಎಲ್ಲಾ ವಿಷಯಗಳೂ ಗೊತ್ತುಂಟು. ಅವಳು ಏನನ್ನೋ ಕುಡಿಸಿ ನನ್ನನ್ನು ಕೊಲ್ಲಬೇಕೆಂದಿದ್ದಳು.

ನಾಗೇಶನು ತಿಳಿದುದೆಲ್ಲ ಇಷ್ಟೆ. ಇದನ್ನೆಲ್ಲ ಬರೆದುಕೊಂಡುದಾಯಿತು. ನಾಗೇಶನು ತಾನು ಹೇಳಿದುದೆಲ್ಲ ಸತ್ಯವೆಂದು ಪ್ರಮಾಣ ಮಾಡಿ ರುಜು ಹಾಕಿದನು. ನಟೇಶನೂ ವಿಠಲನೂ ಅಲ್ಲಿದ್ದ ಅಂತರಂಗದ ಪೋಲೀಸ್ ಅಫೀಸರು ಗಳೂ ಸಾಕ್ಷಿ ಹಾಕಿದರು. ವಿಠಲನು ಇನ್ನು ಮುಂದೆಯೂ ಬಹಳ ಹೊತ್ತು ನಾಗೇಶನ ಸಂಗಡ ಮಾತನಾಡಿದನು. ಆದರೂ ಬೆಲೆಯಾದ ಯಾವ ಹೆಚ್ಚು ಸಂಗತಿಗಳೂ ತಿಳಿಯದಿದ್ದುದರಿಂದ ಅವನೂ ನಟೇಶನೂ ಅಲ್ಲಿಂದ ಹೊರಟರು. ವಿಠಲನು ಊರಿಗೆ ಬಂದನಂತರ ಕೆಲವು ವೇಳೆ ಮಾತ್ರ ರಾತ್ರಿಯಲ್ಲಿ ಸೋದರ ಮಾವನಾಗಿ ಸೌದಾಮಿನಿಯ ಮನೆಗೆ ಹೋಗುತ್ತಲೂ ಉಳಿದ ವೇಳೆಗಳಲ್ಲಿ ತನ್ನ ರಹಸ್ಯಸ್ಥಾನಗಳಲ್ಲಿ ವಾಸಮಾಡುತ್ತಲೂ ಇದ್ದನು ಅತ್ತಲಾಗಿ ತಿಲಮೆಯು ಒಂದು ದಿನ ವಾರಣನನ್ನು ಎರಡು ತೋಳುಗಳಿಂದಲೂ ಬಾಚಿ ತಬ್ಬಿಕೊಂಡು_ವಾರಣ, ನಾನು ನಿನ್ನ ಸಹವಾಸದಿಂದ ಎಷ್ಟು ಸುಖವಾಗಿದೇನೆ ! ಒಂದು ವೇಳೆ ನಾನು ನಿನ್ನನ್ನಗಲುವುದಾದರೆ ಗತಿಯೇನು ! ನೀನು ನನ್ನ ವಿಷಯವನ್ನೆಲ್ಲ ಕೇಳಿದರೆ ನನ್ನನ್ನು ಉಗುಳಿ, ಒದೆದು ಓಡಿಸುವೆ_ ಎಂದಳು

'ಪಿತೃಹತ್ಯೆಯನ್ನು ಮಾಡಿದ ಪಾಪಸ್ತ್ರೀಯನ್ನು ನೀನು ಮದುವೆಯಾಗುವೆಯಾ ?' ಎಂದು ಹೊರಗೆ ಸದ್ದಾಯಿತು; ಅದು ಬಲು ಗಂಭೀರವಾಗಿ ಪಲ್ಲವನ ಧ್ವನಿಯಂತೆಯೇ ಇದ್ದಿತು. ಆ ಗರ್ಜನೆಯು ತಿಲಮೆಯ ಕಿವಿಗೆ ಬೀಳುತ್ತಲೆ ಅವಳು ಭಯಂಕರವಾಗಿ ಕೂಗಿಕೊಂಡು ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಗೋಳಾಡತೊಡಗಿದಳು. ವಾರಣನ ಕಾಲಮೇಲೆ ಬಿದ್ದು_ 'ಎಲೈ ನನ್ನ ಕೈಬಿಡಬೇಡ.' ಎಂದು ಸೆರಗೊಡ್ಡಿ ಬೇಡಿಕೊಂಡಳು.

ವಾರಣ_ನಾನು ನಿನ್ನನ್ನು ಕೈಬಿಡುವುದಿಲ್ಲ.

ತಿಲಮೆ_ಅಯ್ಯೋ ! ಇಲ್ಲಿಗೆ ಯಾರೂ ಬಂದಿಲ್ಲ. ಇದು ಅಮಾನುಷವಾದ ಉತ್ಪಾತವೇ,-ಎಂದಳು.

ಈಗ ಪುನಃ ಮತ್ತೊಂದು ಕಡೆಯಿಂದ–' ನೀನು ಅಕೃತ್ಯಮಾಡಿದ್ದುಂಟೆಂದು ಒಪ್ಪಿಕೊ ಹಾಗಾದರೆ, ' ಎಂದು ಕೇಳಿಸಿತು.

ತಿಲಮೆಯು ಯೋಚಿಸಿ ನೋಡಿದುದರಲ್ಲಿ ಅದು ಅವಳ ತಂದೆಯ ಧ್ವನಿಯೇ ಎಂದು ನಿಸ್ಸಂಶಯವಾಗಿ ಗೊತ್ತಾದುದರಿಂದ ಜ್ಞಾನ ತಪ್ಪಿತು. ಈ ಸಲದ ಗರ್ಜನೆಯು ಬಹು ಪ್ರಬಲವಾಗಿಯೂ ಉಗ್ರವಾಗಿಯೂ ಇದ್ದಿತು.

ತಿಲಮೆ–ನಾನು ಮಹಾಪಾಪವನ್ನು ಮಾಡಿದುದುಂಟು. ನಾನು ಪರಮ ನೀಚಳು–ಎಂದು ಒಪ್ಪಿಕೊಂಡಳು.

ವಾರಣ–ತಿಲಮೆ, ನೀನು ಅಂತಹ ಅಪರಾಧಗಳನ್ನೇನೂ ಒಪ್ಪಿಕೊಳ್ಳಬೇಕಾದ ನಿಮಿತ್ತವಿಲ್ಲ–ಎಂದು ಸಮಾಧಾನ ಹೇಳುತ್ತ ಅವಳನ್ನು ಎತ್ತಿ ಸೋಫಾದ ಮೇಲೆ ಕುಳ್ಳಿರಿಸಿ ಆ ಧ್ವನಿಯು ಎಲ್ಲಿಂದ ಬರುವುದೋ ತಾನು ನೋಡಿಕೊಂಡು ಬರುವುದಾಗಿಯೂ, ಅವಳು ಧೈರ್ಯವನ್ನವಲಂಬಿಸಬೇಕೆಂದೂ ಹೇಳಿ ಹೊರಕ್ಕೆ ಹೋಗಿ ಅಲ್ಲೆಲ್ಲ ಹುಡುಕಿದನು. ಯಾರೂ ಇರಲಿಲ್ಲ. ಒಳಗೆ ಪ್ರತಿ ಕೊಠಡಿಯಲ್ಲೂ ಸಂದುಗೊಂದುಗಳಲ್ಲೂ ಕಡೆಗೆ ಮಂಚ ಬೆಂಚು ಮುಂತಾದುವುಗಳ ಅಡಿಯಲ್ಲಿಯೂ ಹುಡುಕಿದನು. ಆದರೂ ಸಿಕ್ಕಲಿಲ್ಲ.

ವಾರಣನು ತಿಲಮೆಯನ್ನೆತ್ತಿ ಸೋಫಾದಮೇಲೆ ಕುಳ್ಳಿರಿಸುತ್ತಿದ್ದಾಗ, ಯಾವುದೋ ಒಂದು ವ್ಯಕ್ತಿಯು ಮನೆಯ ಹಿತ್ತಲ ಕಡೆಯ ಹಾಲಿನಿಂದ ಹೊರಟು ಕಿಟಿಕಿಯನ್ನು ಧುಮುಕಿ ಕಾಂಪೌಂಡನ್ನು ಸೇರಿ ಬಳಿಕ ಬೇಲಿಯನ್ನು ನೆಗೆದು ಕನ್ಸರ್ವೆನ್ಸಿಗಲ್ಲಿಗೆ ಬಿದ್ದು ಓಡಿಹೋಯಿತು. ಆ ವ್ಯಕ್ತಿಯು ಮತ್ತಾರೂ ಅಲ್ಲ, ವಿಠಲಮೂರ್ತಿಯೇ. ಆತನಿಗೆ ಇತರರಂತೆ ವೇಷವನ್ನು ಧರಿಸಿರುವ ಚಾತುರ್ಯ ಮಾತ್ರವಲ್ಲದೆ ಯಾರಂತೆ ಬೇಕಾದರೂ ಮಾತಾಡಬಲ್ಲ ಅಸಾಧಾರಣವಾದ ಶಕ್ತಿಯೂ ಇದ್ದಿತು. ಈಗ ತಿಲಮೆಯನ್ನು ಕಿರುಗುಟ್ಟಿಸುವುದಕ್ಕೋಸ್ಕರ ಹೀಗೆ ಮಾಡಿದನು.

ವಾರಣನು ಮನೆಯ ಒಳಗೂ ಹೊರಗೂ ಹುಡುಕಿ ಯಾರನ್ನೂ ಕಾಣದೆ ಹಿಂದಿರುಗಿ ಬರಲು ತಿಲಮೆಯು–ವಾರಣ, ಯಾರಾದರೂ ಸಿಕ್ಕಿದರೇನು ?

ವಾರಣ—ಇಲ್ಲ, ಯಾರೂ ಇಲ್ಲ. ನೀನು ಪುನಃಪುನಃ ಆ ವಿಷಯುವನ್ನು ಯೋಚಿಸಬೇಡ. ಸುಖವಾಗಿರು.

ತಿಲಮೆ—ಇನ್ನು ನನಗೆ ಸುಖವೆಲ್ಲಿ ಬಂದೀತು! ಉಂ. ಎಲ್ಲ ಆಗಿಹೋ ಯಿತು. 'ಸುಖಂಸ್ವಪ್ನೇಪಿ ದುರ್ಲಭಂ' ಅಯ್ಯೋ! ಈ ರಾತ್ರಿ ನಾನು ಈ ಮನೆ ಯಲ್ಲಿರಲಾರ!

ವಾರಣ—ಹಾಗಾದರೆ ನಮ್ಮ ಮನೆಗೆ ನಡೆ. ನನ್ನ ತಂಗಿಯ ಜತೆಯಲ್ಲಿ ರುವೆಯಂತೆ.

ತಿಲಮೆಯು ಒಪ್ಪಿಕೊಂಡಳು. ಅವಳು ಸದ್ದುಮಾಡದೆ ವಾರಣನ ಪಕ್ಕ ದಲ್ಲೇ ನಡೆಯುತ್ತ ಹೊರಟಳು. ಬಳಿಕ ವಾರಣನ ಮುಖವನ್ನು ಚೆನ್ನಾಗಿ ದೃಷ್ಟಿಸಿ—ವಾರಣ, ನಾನು ನನ್ನ ತಂದೆಯನ್ನು ಕೊಲೆಮಾಡಿದವಳೆಂದು ತಿಳಿದ ಮೇಲೂ ನೀನು ನನ್ನನ್ನು ಪ್ರೀತಿಸುತ್ತೀಯಾ?

ವಾರಣ—ನೀನು ಏನಾದರೂ ಮಾಡಿರು, ನಾನು ನಿನ್ನನ್ನು ಪ್ರೀತಿಸುವುದೇ ಖಂಡಿತ. ಆದರೆ ನೀನು ನಿಮ್ಮ ತಂದೆಯನ್ನು ಕೊಲ್ಲಲಿಲ್ಲವೆಂಬುದನ್ನು ನಾನು ಬಲ್ಲೆ.

ತಿಲಮೆ—ವಾರಣ, ಇನ್ನು ಕೆಲವು ದಿನಗಳು ಕಳೆಯಲಿ. ನಾನು ನನ್ನ ಕಥೆಯನ್ನೆಲ್ಲ ನಿನಗೆ ತಿಳಿಯಿಸುವೆನು.

ತಿಲಮೆಯೂ ವಾರಣನೂ ಅಂತಹ ಅವೇಳೆಯಲ್ಲಿ ಬಂದುದನ್ನು ಕಂಡು ಸೌದಾಮಿನಿಯು ಚಮಕಿತಳಾದಳು. ತಿಲಮೆಯು ಆ ರಾತ್ರಿ ಮಾತ್ರ ಅಲ್ಲಿರುವ ಳೆಂದು ಸುಮ್ಮನೆ ಗೂಢವಾಗಿ ವಾರಣನು ಸೌದಾಮಿನಿಗೆ ಹೇಳಿದನು. ಅವಳು ಮತ್ತೇನನ್ನೂ ಕೇಳದೆ ಸುಮ್ಮನಿದ್ದಳು. ತಿಲಮೆಯು ಯಾವ ಮಾತನ್ನೂ ಆಡದೆ ನೇರವಾಗಿ ಸೌದಾಮಿನಿಯ ಕಿರುಮನೆಗೆ ಹೋಗಿ ಒಳಗಿನಿಂದ ಕದವನ್ನು ಭದ್ರ ಪಡಿಸಿಕೊಂಡಳು. ತರುವಾಯ ಥಟ್ಟನೆದ್ದು ಸುಮ್ಮನೆ ಓಡಾಡುತ್ತಲೂ ಕೈಕೈ ಹಿಸುಕಿಕೊಳ್ಳುತ್ತಲೂ ಗೋಳಾಡ ಹತ್ತಿದಳು—ಓಹೋ! ನನಗೆ ಕಡೆಗಾಲ ಹತ್ತಿ ರಿಸಿತು. ಈ ಲೋಕದಲ್ಲಿ ವಾರಣನೊಬ್ಬನು ಹೊರತು—' ಅಯ್ಯೋ ಪಾಪ '

ಎಂದು ಮರುಗತಕ್ಕವರು ಕೂಡ ನನಗೆ ಮತ್ತಾರೂ ಇಲ್ಲ. ಉಳಿದವರೆಲ್ಲ ಕಪಟಿಗಳು. ಬೇಕಾದರೆ ಪ್ರಮಾಣಮಾಡಿ ಹೇಳಬಲ್ಲೆ. ಅದುದರಿಂದ ನಾನು ಸಾಯುವುದಕ್ಕಿಂತ ಮೊದಲು ಈ ನೀಚರನ್ನೆಲ್ಲ ಬಯಲಿಗೆ ತಂದು ನಿಶ್ಚಿಂತೆಯಾಗಿ ಪ್ರಾಣಬಿಡುವೆನು, ಎಂದು ಕೊಂಡಳು.

ಸೌದಾಮಿನಿಯು ಬಂದು ಕೂಗಲು ತಿಲಮೆಯು ಬಾಗಿಲನ್ನು ತೆರೆದಳು. ಬಳಿಕ ಸ್ವಲ್ಪ ಸಂಭಾಷಣೆ ನಡೆಯುವಾಗ ತಿಲಮೆಯು ಪ್ರಶ್ನೆಮಾಡಿ ವಾರಣನು ಅವನ ಸ್ವಂತ ಕೊಠಡಿಯಲ್ಲಿರುವನೆಂಬುದನ್ನು ತಿಳಿದಳು. ತಿಲಮೆಯು ಸರ್ರನೆ ಅವನ ಕಿರುಮನೆಗೆ ಹೋಗಲು ಅವನು ವಿಸ್ಮಿತನಾದನು. ತಿಲಮೆಯು ಬಿಕ್ಕಿಬಿಕ್ಕಿ ಅಳುತ್ತ—ವಾರಣ, ಈ ರಾತ್ರಿ ನಿನಗೊಂದು ಅಮೂಲ್ಯವಾದ ಗೂಢಪತ್ರ (confidential letter) ವನ್ನು ಕೊಟ್ಟು ನಿನ್ನನ್ನು ಕಂಡು ಹೋಗಬೇಕೆಂದೇ ಪುನಃ ಇಲ್ಲಿಗೆ ಬಂದಿದೇನೆ. ನೀನು ಇದನ್ನು ಕಳೆದುಬಿಡಬಾರದು. ಮತ್ತು ನಾನು ನೀನು ಪರಸ್ಪರ ಅಗಲಿ ಹೋಗುವವರೆಗೂ ಇದನ್ನು ಒಡೆದು ನೋಡಲೂ ಕೂಡದು.

ವಾರಣ—ನೀನು ಆ ಆಲೋಚನೆಯನ್ನು ಬಿಟ್ಟುಬಿಡು.

ತಿಲಮೆ—ಅದನ್ನು ಬಿಡಲು ಯತ್ನಿಸುತ್ತೇನೆ. ಅದರೆ ನಾನು ಈಗ ಹೇಳಿದುದನ್ನು ನಡೆಯಿಸಿ ಕೊಡುವುದಾಗಿ ವಾಗ್ದಾನಮಾಡು. ಮತ್ತು ನೀನು ನನ್ನ ಕಾಗದವನ್ನು ಓದಿದಮೇಲೆ ಅದರಲ್ಲಿ ಹೇಳಿರುವಂತೆ ನಡೆಯಲೂ ಬೇಕು.

ವಾರಣ—ಇಗೋ ! ಭಾಷೆಕೊಟ್ಟೆ.

ತಿಲಮೆ—ಇಗೋ ! ಕಡೆಯವಂದನೆ.

• ವಾರಣ—ಇದೇಕೆ, ಹೀಗೆನ್ನುವೆ ?

ತಿಲಮೆ—ಇಲ್ಲ, ಹಾಗಾದರೆ ಬರೀವಂದನೆ.

ಈಗ ತಿಲಮೆಯ ನೇತ್ರಾಂಬುಜಗಳಿಂದ ಅಶ್ರುಧಾರೆಯು ಅವಿಚ್ಛಿನ್ನವಾಗಿ ಹರಿಯುತ್ತಬಂದಿತು. ಅವಳು ವಾರಣನನ್ನು ಬಲವಾಗಿ ಹಿಡಿದೆಳೆದು ಮನದಣಿಯುವಂತೆ ಕಚ್ಚಿಮುದ್ದಾಡಿ ಬೇಗ ಈಚೆಗೆ ಹೊರಟುಬಂದಳು. ವಾರಣನು ಅವಳ

ಲಕ್ಕೋಟೆಯನ್ನು ಮೇಜಿನಮೇಲಿಟ್ಟುಕೊಂಡು_ಇದೇನಾಶ್ಚರ್ಯ! ನಾನು ನನ್ನ ಚರಿತ್ರೆಯನ್ನೆಲ್ಲ ಬರೆದಿಡುತ್ತಿರುವಾಗಲೇ ಅವಳೂ ಏನನ್ನೋ ಬರೆದುತಂದು ಕೊಟ್ಟಿರುವಳಲ್ಲಾ! ಈಗ ಇವೆರಡನ್ನೂ ಒಟ್ಟಿಗಿಟ್ಟು ಮೊಹರುಮಾಡಿರುತ್ತೇನೆ. ಅವಳು ಬರೆದುದನ್ನು ನಾನು ನೋಡಬಾರದು, ಅಥವಾ ಈಗ ಇವೆರಡನ್ನೂ ಸುಟ್ಟುಬಿಡಲೆ? ಛೀ ಹಾಗೆ ಮಾಡಬಾರದು. ಮೊಹರುಮಾಡಿಡುವುದೇ ಯುಕ್ತ. ಇಂತಹ ಸಂಗತಿಗಳನ್ನೆಲ್ಲಾ ವಿಠಲನಿಗೆ ತಿಳಿಸಿರುವುದು ಮೇಲು. ತಿಲಮೆಯೇನಾದರೂ ಸಾಯುವುದಾದರೆ ನಾನು ಅವಳನ್ನು ಹಿಂಬಾಲಿಸುವುದಕ್ಕೆ ಹಿಂದೆಗೆಯುವುದಿಲ್ಲ, ಉಂ. ಆಗಲಿ, ಇದನ್ನು ವಿಠಲನಿಗೆ ತಿಳಿಸುವೆನು.

ವಾರಣನು ಆ ನಿಶಿರಾತ್ರಿಯಲ್ಲಿ ಏದುತ್ತ ವಿಠಲನ ಆಫೀಸಿಗೆ ಓಡಿದನು. ಆದರೆ ವಿಠಲನಿರಲಿಲ್ಲ. ನಟೇಶನನ್ನು ಕಂಡು ಈ ಕಾಗದಗಳ ಲಕ್ಕೋಟೆಯನ್ನು ಕೊಟ್ಟು_ಅಯ್ಯ, ದಯವಿಟ್ಟು ನನಗೋಸ್ಕರ ಇದನ್ನು ಭದ್ರವಾದ ಸ್ಥಳದಲ್ಲಿಟ್ಟಿದ್ದು ವಿಠಲಮೂರ್ತಿ ಬಂದಮೇಲೆ ಆತನಿಗೆ ಕೊಡಬೇಕು. ಎಂದು ಕೇಳಿಕೊಂಡನು.

ನಟೇಶನು ಭರವಸೆ ಹೇಳಿತೆಗೆದುಕೊಂಡನು. ವಾರಣನು ಮನೆಗೆ ಹಿಂದಿರುಗಿ ಬರುವಾಗ್ಗೆ ರಾತ್ರಿ ಮೂರುಗಂಟೆ. ಬಂದಕೂಡಲೆ ಸರ್ರನೆ ತಿಲಮೆಯು ಇದ್ದ ಕೊಠಡಿಗೆ ಹೋದನು. ಅಲ್ಲಿ ನೋಡಲು ವಾರಣನ ಹೃದಯವು ಬಡಿಯುವುದು ನಿಲ್ಲುವಂತಾಯಿತು. ತಿಲಮೆಯು ಮರಣವೇದನೆಯಿಂದ ಬಹು ದೀರ್ಘವಾಗಿ ನಿಶ್ವಾಸವಿಕ್ಕುತ್ತ ನೆಲದಮೇಲೆ ಬಿದ್ದಿದ್ದಳು.

— —

## ಹದಿನೇಳನೆಯ ಪರಿಚ್ಛೇದ.

ವಾರಣನು ಮೆಲ್ಲಗೆ ತಿಲಮೆಯನ್ನು ಎತ್ತಿ ತೊಳಿನಮೇಲಿಟ್ಟುಕೊಂಡು_ಪ್ರಾಣಪ್ರಿಯೆ, ತಿಲಮೆ, ಒಂದು ಮಾತನ್ನಾಡು_ಎಂದು ಬೇಡಿಕೊಂಡನು.

ತಿಲಮೆಯು ನಿಧಾನವಾಗಿ ಕಣ್ತೆರೆದು ತನ್ನ ಕಾಂತನನ್ನು ನೋಡುತ್ತ ಬಂದಳು. ಮಾತನಾಡುವುದಕ್ಕೆ ಬಹು ಕಷ್ಟದಿಂದ ಯತ್ನಿಸುತ್ತಿದ್ದಳು. ಆಗ ಅವಳು ಸಾಯುತ್ತಿರುವಳೆಂದು ವಾರಣನು ತಿಳಿದನು.

ವಾರಣ—ತಿಲಮೆ, ನೀನು ಏನನ್ನು ತೆಗೆದುಕೊಂಡಿದ್ದೀಯೆ ? ಹೇಳು. ವೈದ್ಯನನ್ನು ಕರೆದುತಂದು ಔಷಧಿ ಕೊಡಿಸುವೆನು.

ತಿಲಮೆ—ಅತಿ ಕಷ್ಟದಿಂದ—ಈ—ಗ—ಏ—ನೂ—ಫ—ಲ—ವಿಲ್ಲ. ನಾ—ನು ಹೋ—ಗು—ತಿ—ದೇ—ನೆ, ಪ್ರಾ—ಣೇ—ಶ—ನ—ಮ—ಸ್ಕಾ—ರ.

ವಾರಣ—ತಿಲಮೆ ನೀನು ಸಾಯಬಾರದು ! ಓಹೋ ! ಸಾಯಲೇಕೂಡದು.

ತಿಲಮೆ—ನಾ—ನು—ಸ—ತ್ತ—ರೆ—ನಿ—ನ—ಗೆ—ಸು—ಖ—ಎಂದು ಹೇಳಿದಳು ಕತ್ತಿನ ಕಲಶವು ಕಳಚಿ ನಿಧಾನವಾಗಿ ಕುಸಿಯಿತು. ಕಣ್ಣುಗಳು ಮಾತ್ರ ಅವನ ಕಡೆಯೇ ತಿರುಗಿದ್ದವು,

ವಾರಣನು ಮಾತಾಡಲಾರದೆ ಹೋದನು. ಅವನಿಗೆ ಮುಗ್ಧತೆ ಮುಚ್ಚಿಕೊಂಡಿತು. ಭಯಂಕರವೂ ವ್ಯಸನಕರವೂ ಆದ ಈ ನೋಟವು ಅವನಿಗೆ ಅಭೂತಪೂರ್ವವಾಗಿದ್ದಿತು.

ತಿಲಮೆಗೆ ಕೈಕಾಲು ಸೇದುತ್ತಬಂದಿತು. ಅವಳು ಪುನಃ—ನ—ಮ—ಸ್ಕಾ—ರ ಎನ್ನುತ್ತ ಮರಣಸಂಕಟದಿಂದ ಗಟ್ಟಿಯಾಗಿ ಒಂದುಸಲ ಚೀರಿದಳು. ಕಣ್ಣು ಮುಚ್ಚಿಹೋಯಿತು. ತೋಳುಗಳು ವಾರಣನಮೇಲೆ ಬಿದ್ದವು ತರುವಾಯ ತಿಲಮೆಯ ದೇಹವು ಶಾಂತವಾಯಿತು.

ವಾರಣನಿಗೆ ಚಿತ್ತಸ್ವಾಸ್ಥ್ಯತಪ್ಪಿತು. ಬಹಳಹೊತ್ತು ಆ ದೇಹದಮೇಲೆ ಬಿದ್ದು ರೋದನಮಾಡಿದನು. ಬಳಿಕ—ಅವಳು ಹೋದಮೇಲೆ ನಾನು ಬದುಕಲಾರೆ ; ಪ್ರಾಣವು ಕತ್ತಲೆಯಾಗುತ್ತಿದೆ. ಇನ್ನು ಮುಂದಿನಾಶೆಯಿಲ್ಲ. ಇದನ್ನು ಮುಗಿಸಿಯೇ ಬಿಡಬೇಕು – ಹೀಗೆಂದುಕೊಂಡು ದೃಢಬುದ್ಧಿಯಿಂದ ದುಡುಕುತ್ತ ಮೇಜಿನಮೇಲಿದ್ದ ಒಂದು ಗಾಜಿನ ಲೋಟವನ್ನು ತೆಗೆದುಕೊಂಡು ಅದರೊಳಕ್ಕೆ ಸ್ವಲ್ಪ ನೀರನ್ನೂ ಏನೋ ಒಂದು ಚೂರ್ಣವನ್ನೂ ಹಾಕಿ ಕಲಕಿದನು.

ಅಯ್ಯೋ ಪಾಪ ! ಆ ಸಮಯದಲ್ಲಿ ಯಾರಾದರೂ ಪುಣ್ಯಾತ್ಮರು ಬಂದು ಸಾಧುಪ್ರಾಣಿಯಾದ ಈ ತರುಣನ ಕೈಯಿಂದ ಅದನ್ನು ಕಿತ್ತುಕೊಂಡು ಪ್ರಾಣ

ವನ್ನು ಳಿಸಬಾರದಾಗಿದ್ದಿತೆ! ಅದು ಹೇಗಾದೀತು! ಕರ್ಮಾನುಸಾರವಾಗಿ ವರ್ತಿಸುವ ಬುದ್ಧಿಗೆ ಪ್ರತಿಕೂಲವಾದ ಸನ್ನಿವೇಶಗಳು ಎರಿದಿಗೂ ಉಂಟಾಗವು.

ವಿಷವನ್ನು ಬೆರಸಿದುದಾಯಿತು. ಆ ಲೋಟವನ್ನು ಕೈಗೆ ತೆಗೆದುಕೊಂಡು ಸಿದ್ಧನಾದನು. ಅಷ್ಟರಲ್ಲೇ ಆ ಕೊಠಡಿಯ ಮುಂದುಗಡೆಯ ಚಿಲುಕವು ಅಲುಗಿದಂತೆ ಸದ್ದಾಯಿತು. ಅವನಿಗೆ ಹಿಂದೆಗೆಯುವುದಕ್ಕೂ ಸಮಯವಿರಲಿಲ್ಲ. ಆಗ್ಗಾಗಲೆ ಅರ್ಧವಿಷವು ಗಂಟಲೊಳಕ್ಕೆ ಹೋಗಿದ್ದಿತು. ಕಡೆಗೆ ಎಲ್ಲವನ್ನೂ ನುಂಗಿಬಿಟ್ಟನು. ವಿದ್ಯುಚ್ಛಕ್ತಿಯು ತಗಲಿದಂತೆ ಥಟ್ಟನೆ ಶೂಲೆಯುಂಟಾಯಿತು. ತಲೆಯು ತಿರುಗಿದಂತಾಗಿ ಅವನಿಗೆ ಆ ಕೊಠಡಿಯೆಲ್ಲ ಗಾಢಾಂಧಕಾರವಾಗಿ ತೋರಿತು. ಅಂತಹ ಕಣ್ಣುಕಾಣದ ಅವಸ್ಥೆಯಲ್ಲೂ ವಾರಣನು ತಡವರಿಸುತ್ತ ಹೋಗಿ ತಿಲಮೆಯ ಶರೀರದ ಬಳಿಗೆ ಸೇರಿದನು. ಎರಡು ಕೈಗಳಿಂದಲೂ ಆ ಶವವನ್ನು ಹಿಡಿದುಕೊಂಡು ಒಂದೇ ಉಸಿರಿನಲ್ಲಿ ಪ್ರಾಣಬಿಟ್ಟನು!

ಸ್ವಲ್ಪ ಹೊತ್ತಿನಮೇಲೆ ಮೂವರು ಪುರುಷರು ಒಳಗೆ ಬಂದು ನೋಡಿದರು. ನೋಡಿದ ಕೂಡಲೆ ಒಂದು ಕ್ಷಣವೂ ಅಲ್ಲಿ ನಿಲ್ಲದೆ ಹಿಂದಕ್ಕೆ ಹೋದರು. ಅವರಲ್ಲಿ ಮಾಧವ ಭಾಸ್ಕರರೇ ಇಬ್ಬರು. ಮೂರನೆಯವನು ನೀಳವಾದ ಮುಖದವನು. ಅವನ ಕೂದಲು ಉದ್ದ. ಕಣ್ಣು ಕ್ರೂರ. ಆಗ ಅವನ ಮುಖವನ್ನು ನೋಡಿದರೆ ಏನೋ ಒಂದು ಬಗೆಯ ವಿಯೋಗದ ಕುರುಹುಗಳು ತೋರುತ್ತಿದ್ದವು. ಬೆಲೆಯಾದ ಉಡುಪುಗಳನ್ನು ಧರಿಸಿದ್ದನು. ಕೈಯಲ್ಲಿ ಸುಂದರವಾದೊಂದು ದೊಣ್ಣೆ.

ಆ ಹೊಸಬನು—ಇದೇನು ವಿಷಯ?

ಮಾಧವ—ಇದೇನೆನ್ನುವಿರೊ? ಕೇಳಿ, ತಿಲಮೆಯೂ ಅವಳ ಪ್ರೀತಿಪಾತ್ರನೂ ಆತ್ಮಹತ್ಯಮಾಡಿಕೊಂಡಿದಾರೆ.

ಈ ಹೊಸಬನೇ ವನಜಚಂದ್ರ. ಈ ನಿರ್ಭಾಗ್ಯಸ್ತ್ರೀಯಾದ ತಿಲಮೆಯ ಮೊದಲಿನ ಯಜಮಾನ. ಅವನು ಆಗತಾನೇ ಲಲಿತಪಟ್ಟಣದಿಂದ ಹಡಗಿನಲ್ಲಿ ಬಂದಿದ್ದನು. ಮಾಧವಭಾಸ್ಕರರು ಜಹಜಿನ ಬಳಿಗೇ ಹೋಗಿ ಎದುರುಗೊಂಡು ಕರೆತಂದಿದ್ದರು.

ತಿಲಮೆಯು ಕಾಲವಾದುದಕ್ಕೆ ವನಜನು ಏನೂ ವ್ಯಥೆಪಡದೆ_ಅಯ್ಯ, ಅವಳು ಈ ಲೋಕದಲ್ಲಿರುವುದಕ್ಕಿಂತ ಹೋದುದೇ ಮೇಲು. ಅವಳು ನಮಗೆ ಸಹಾಯವನ್ನೇನೋ ಮಾಡಿದಳು, ಆದರೂ ನಾವು ಅವಳಿಗೆ ಹೆದರಬೇಕಾಗಿದ್ದಿತು. ಈ ಮತ್ತೊಬ್ಬ ಪ್ರಾಣಿಯಾರು ?

ಮಾಧವ_ಕಾಂತನಾಥನನ್ನು ಮದುವೆಯಾಗಿ ನಮ್ಮಿಂದ ಸದ್ಗತಿಯನ್ನು ಪಡೆದುಹೋದ ಪ್ರಫುಲ್ಲೆಯ ಸಹೋದರ.

ವನಜ_ಇವನೂ ಕೋಟೀಶ್ವರ. ಸರಿ, ಹಾಗಾದರೆ. ಸೌದಾಮಿನಿಯೇ ಪ್ರಫುಲ್ಲೆಯೆಂದು ಆಚರಣೆಗೆ ಬಂದೇ ಇದೆ. ಆದುದರಿಂದ ಇವನ ಆಸ್ತಿಗೂ ಅವಳೇ ಹಕ್ಕುದಾರಳಾಗಬಹುದು. ಆದರೆ ನಾವು ಎಲ್ಲವನ್ನೂ ಸರಿಪಡಿಸಿಕೊಳ್ಳುವ ವರೆಗೂ ಇದನ್ನು ಹೊರಪಡಿಸಕೂಡದು. ಇನ್ನು ನಮಗೆ ಯಾರ ತೊಂದರೆಯೂ ಇಲ್ಲ!

ಮಾಧವ_ಹಾಗೆನ್ನಬೇಡ. ಇನ್ನೊಬ್ಬ ಮೃತ್ಯುವುಂಟು. ಅವನು ಪ್ರಫುಲ್ಲೆಯ ಸೋದರಮಾವ. ಅವನು ಆಗಾಗ್ಗೆ ಬಂದು ಈ ಮನೆಯಲ್ಲೇ ಇರುತ್ತಾನೆ. ನಮಗೆ ಆ ಮುದುಕನಲ್ಲಿ ಕೇವಲ ಸಂಶಯ.

ವನಜ_ಅವನನ್ನು ಪುಸಲಾಯಿಸಿ ಎಲ್ಲಿಗಾದರೊಂದು ಕಡೆಗೆ ಒಯ್ದು ಸರಿ ಮಾಡಿಬಿಟ್ಟರಾಯಿತು.

ಮಾಧವ_ಈಗ ಈ ಶವಗಳನ್ನೇನು ಮಾಡೋಣ ? ಹೊರಕ್ಕೆ ಸಾಗಿಸ ಬಹುದು. ಆದರೆ ಈ ಕೆಲಸದಲ್ಲಿ ನಾವು ಯಾರನ್ನುತಾನೆ ನಂಬುವುದಕ್ಕಾದೀತು !

ಭಾಸ್ಕರ_ಇದಕ್ಕೆ ಇತರರನ್ನು ಕರೆಯುವುದೇತಕ್ಕೆ? ನಾವೇ ಮಾಡಿಬಿಡುವುದು ತಾನೆ ?

ಮಾಧವ_ನಾವುತಾನೇ ಹೇಗೆ ಮಾಡುವುದು ?

ಭಾಸ್ಕರ_ಪೆಟ್ಟಿಗೆಯಲ್ಲಿ ಈಶವಗಳನ್ನು ಭದ್ರಪಡಿಸಿ ಒಂದು ಬಾಡಿಗೆ ಗಾಡಿಯಲ್ಲಿಟ್ಟುಕೊಂಡು ಹೋಗುವುದು. ಸ್ಮಶಾನದ ಕಾವಲುಗಾರನಿಗೆ ಕೇಳಿದಷ್ಟು ಲಂಚವನ್ನು ತೆತ್ತು ಅವನ ವಶಕ್ಕೆ ಆ ಪೆಟ್ಟಿಗೆಯನ್ನು ಕೊಟ್ಟುಬಿಟ್ಟು ಬರುವುದು.

ಮಾಧವ—ಇದನ್ನು ಯಾರಾದರೂ ತಿಳಿದರೆ ನಾವೇ ಅವರನ್ನು ಕೊಲೆ ಮಾಡಿದವರೆಂದಾಗುವುದಲ್ಲಾ!

ಭಾಸ್ಕರ—ಇಲ್ಲ, ಪತ್ತೆಯಾಗದಂತೆ ನಾನು ಸರಿಯಾಗಿ ಏರ್ಪಾಡು ಮಾಡುತ್ತೇನೆ.

ವನಜ—ಇದಕ್ಕೆ ಸುಮಾರು ಎಷ್ಟು ಹಣ ಬೇಕು ?

ಭಾಸ್ಕರ—ಕಡೆಯಪಕ್ಷ ೫೦೦ ರೂಪಾಯಿಗಳಾದರೂ ಆಗಬೇಕು.

ವನಜ—ಅಯ್ಯಯ್ಯೋ ! ಈಗೇನುಮಾಡಬೇಕು ! ನನ್ನಲ್ಲಿ ಐವತ್ತೇ ರೂಪಾಯಿಗಳಿವೆ. ನಾನು ಇಲ್ಲಿ ತಿಲಮೆಯ ಮೂಲಕ ಎಷ್ಟು ಹಣವನ್ನು ಬೇಕಾದರೂ ಸಂಪಾದಿಸಬಹುದೆಂದುಕೊಂಡು ಬಂದೆನು.

ಮಾಧವ—ನನ್ನಲ್ಲಂತೂ ಒಂದು ಬಿಡಿಕಾಸೂ ಇಲ್ಲ, ಭಾಸ್ಕರನೂ ಪಾಪರು.

ಇವರಿಗೆ ಈಗ ಇದೊಂದು ದೊಡ್ಡ ಗಂಡ. ಇದುವರೆಗೂ ತಮಗೆ ದ್ರವ್ಯ ಬೇಕಾದಾಗೆಲ್ಲಾ ತಿಲಮೆಯನ್ನು ಪ್ರೋತ್ಸಾಹಪಡಿಸುತ್ತಲೂ, ಅವಳು ವಾರಣನಿಗೆ ಮಂಕುಬೂದಿಯನ್ನೆರಚಿ ಸಂಪಾದಿಸಿ ತರುತಿದ್ದುದನ್ನು ತೆಗೆದುಕೊಳ್ಳುತ್ತಲೂ ಇದ್ದರು. ಚಿನ್ನದ ಮೊಟ್ಟೆ ಇಡುತ್ತಿದ್ದ ಇವರ ಕೋಳಿಯು ಈಗ ಸತ್ತುಹೋಯಿತು.

ಮಾಧವ—ನಿನ್ನಲ್ಲಿ ಹಣವಿಲ್ಲದಿದ್ದರೆ ಎಲ್ಲಿಯಾದರೂ ಸಾಲಮಾಡಬಹುದಲ್ಲಾ ವನಜ ?

ವನಜ—ಊ, ಹೂ. ಆಗುವುದಿಲ್ಲ.

ಮಾಧವ—ಕಾಂತನಾಥನ ದ್ರವ್ಯವನ್ನೇನುಮಾಡಿದೆ ?

ವನಜ—ಅದು ಬ್ಯಾಂಕಿನಲ್ಲಿದೆ. ವಾರಸು ಸರ್ಟಿಫಿಕೇಟಿಲ್ಲದೆ ದೊರೆಯಲಾರದಷ್ಟೆ ?

ಮಾಧವ—ನಿಮ್ಮ ತಂದೆಯ ಮರಣಕಾಲದಲ್ಲಿ ಅವನ ಬಳಿಯಲ್ಲೇನೂ ಹಣವಿರಲಿಲ್ಲವೆ ?

ವನಜ_ಯಥೇಚ್ಛವಾಗಿದ್ದಿತು. ಆದರೆ ಅತನು ಎಲ್ಲವನ್ನೂ ಲಾಯರ ಬಳಿಯಲ್ಲಿಟ್ಟಿದ್ದನು. ಕಾಗದ ಪತ್ರಗಳನ್ನೆಲ್ಲ ಸರಿಯಾಗಿ ನೋಡಿದ ಹೊರತು ತಾನು ನನಗೊಂದು ಕಾಸನ್ನೂ ಕೊಡುವುದಿಲ್ಲವೆಂದು ಆ ವಕೀಲನು ಹೇಳುತ್ತಿದ್ದಾನೆ.

ಮಾಧವ_ಅದೇನು ? ಹಾಗೆ ಹೇಳುವುದಕ್ಕೆ ಕಾರಣವೇನು ?

ವನಜ_ಇನ್ನೇನೂ ಇಲ್ಲ. ಆತನೇನಾದರೂ ಉಯಿಲು ಬರೆದಿಟ್ಟಿದಾನೆಯೋ ಏನೋ ಎಂದು ವ್ಯಥಾ ಕಿರಿಕಿರಿ ಮಾಡುವುದು. ಲಾಯರ ಚೇಷ್ಟೆಗಳು ಕಂಡೇ ಇದೆಯಷ್ಟೆ. ಈ ವಿಷಯವಾಗಿ ನನ್ನ ಜಾಗರೂಕತೆಯಲ್ಲಿ ನಾನು ಇದ್ದೇ ಇದ್ದೇನೆ !

ಮಾಧವ_ಸರಿ, ನಾವೆಷ್ಟು ಮಾತಾಡಿದರೂ ಪ್ರಕೃತಕ್ಕೆ ಹಣವಿಲ್ಲ. ಈಗೇನು ಮಾಡೋಣ ?

ವನಜ_ಸೌದಾಮಿನಿಯೇ ಪ್ರಫುಲ್ಲೆಯಾಗಿರುವಳಷ್ಟೆ. ಈಗ ಆ ಪ್ರಫುಲ್ಲೆಯ ಹಣವನ್ನು ಇವಳು ಬಳಸಿಕೊಳ್ಳುವುದಕ್ಕೆ ಅಭ್ಯಂತರವೇನು ?

ಮಾಧವ_ಸೌದಾಮಿನಿಗೆ ಪ್ರಫುಲ್ಲೆಯ ರುಜುವು ಗೊತ್ತಿಲ್ಲ. ಆದುದರಿಂದ ಎಲ್ಲಿಗೂ ಹುಂಡೀಚೀಟಿಯನ್ನು ಕಳುಹಿಸುವುದಕ್ಕೂ ಯತ್ನವಿಲ್ಲ.

ವನಜ_ಹಾಗಿದ್ದರೆ ಅವಳು ಎಲ್ಲಿಯಾದರೂ ಸಾಲವನ್ನಾದರೂ ಮಾಡಲೇ ಬೇಕು.

ಮಾಧವ_ಒಳ್ಳೆಯದು. ಅವಳಿಗೆ ಅದಾದರೂ ಸಾಧ್ಯವಾಗುವುದೇನೋ ನೋಡೋಣ.

ಈ ಮೂವರೂ ಸೌದಾಮಿನಿಗೆ ಈಯಂಶಗಳನ್ನು ವಿಶದಪಡಿಸಲು ಅವಳು ಬಹು ತೊಂದರೆಗೊಳಪಟ್ಟಳು. ಬಳಿಕ ಅವಳು_ಈಗ ನಮಗೆ ದ್ರವ್ಯವೇನೋ ಬೇಕೇಬೇಕು. ಆದರೆ ಅದನ್ನು ಹೇಗೆ ಪಡೆಯಬೇಕೆಂಬುದು ನನಗೆ ಗೊತ್ತಿಲ್ಲ. ಅಲ್ಲದೆ ಯಾವುದನ್ನಾದರೂ ಮಾಡುವುದಕ್ಕೂ ನನಗೆ ಬಹಳ ಅಧೈರ್ಯ. ಮತ್ತು

ಇಲ್ಲಿ ಆ ಮುದುಕನ ಕಾಟ ಒಂದು ಕಡೆ ಇದ್ದೇ ಇದೆ. ಅವನಿಂದ ನಮಗೇನೂ ಭಯವಿಲ್ಲವೆಂದು ನಂಬಿಕೆ ತೋರಿದ್ದರೆ ಅವನನ್ನಾದರೂ ಕೇಳಬಹುದಾಗಿದ್ದಿತು.

ವನಜ—ಅವನು ಜತೆಯಲ್ಲಿ ಹಣವನ್ನೇನಾದರೂ ಇಟ್ಟುಕೊಂಡಿರುವುದುಂಟೋ ?

ಸೌದಾಮಿನಿ—ಕೆಲವುವೇಳೆ ಅವನಲ್ಲಿ ಹೆಚ್ಚು ಹಣವಿರುವುದುಂಟೆಂದು ತೋರುವುದು. ಆದರೂ ನಮಗೆ ದೊರೆಯುವುದು ಕಷ್ಟ. ಅವನು ಕಳಿಂಗ—ಹೀಗೆಂದು ಬಳಿಕ ವಾರಣಾವ ಕಿರುಮನೆಗೆ ಹೋಗಿ ಹುಡುಕಿ ಕೆಲವು ಸಣ್ಣ ಪುಟ್ಟ ಒಡವೆಗಳನ್ನು ದೋಚಿಕೊಂಡು ಬಂದು ಭಾಸ್ಕರನ ಕೈಗೆ ಕೊಟ್ಟು—ಸದ್ಯಃ ಇವನ್ನೆಲ್ಲಿಯಾದರೂ ಅಡವಿಟ್ಟು ಹಣವನ್ನು ತೆಗೆದುಕೊಂಡು ಬನ್ನಿರಿ. ಹೆಚ್ಚು ಹಣವನ್ನು ಪಡೆಯುವುದಕ್ಕೆ ಬೇರೊಂದು ದೊಡ್ಡ ಸಾಹಸವನ್ನೇ ಮಾಡಬೇಕಾಯಿತು.

ತಿಲಮೆಯು ಗತಿಸಿಹೋದ ಸಂಗತಿಯು ಸೌದಾಮಿನಿಗೇನೂ ದೊಡ್ಡ ವಿಷಯವೇ ಅಲ್ಲ. ಧನದಾಹವೇ ಪ್ರಬಲತಮವಾಗಿದ್ದಿತು. ಆದರೆ ಅದನ್ನು ತೃಪ್ತಿಪಡಿಸಿಕೊಳ್ಳಲು ಏನೇನು ಮಾಡಬೇಕೆಂಬುದು ತೋರಲಿಲ್ಲ. ಮರುದಿನವೆಲ್ಲ ಯೋಚಿಸಿ ಏನೋ ಒಂದು ಮಾರ್ಗವನ್ನು ನಿಶ್ಚೈಸಿಕೊಂಡು ಪ್ರಫುಲ್ಲೆಯ ಮನೆಗೆ ಪೂರ್ವದಿಂದ ಬಳಕೆಯಾಗಿದ್ದ ಒಬ್ಬ ರಾಯರನ್ನು ಮನೆಗೆ ಕರೆಯಿಸಿಕೊಂಡು ಅವನನ್ನು ಕುರಿತು —ಅಚ್ಯುತರಾಯರೆ, ಈಗ ನನಗೆ ಸ್ವಲ್ಪ ದ್ರವ್ಯ ಅತ್ಯಾವಶ್ಯಕವಾಗಿದೆ—ಎಂದಳು.

ಅಚ್ಯುತನು ರಾಯರ ಕಸಬಿಗೆ ಬಂದಂದಿನಿಂದ ಪ್ರಫುಲ್ಲೆಯ ತವರುಮನೆಯ ಆಡಳಿತವನ್ನೆಲ್ಲ ಚೆನ್ನಾಗಿ ಬಲ್ಲ ವೃದ್ಧ. ಈ ಮಾತನ್ನು ಕೇಳಿದ ಕೂಡಲೆ ಆತನಿಗೆ ಪರಮಾಶ್ಚರ್ಯವುಂಟಾಯಿತು. ಯಾಕೆಂದರೆ—ಪ್ರಫುಲ್ಲೆಯ ಹೆಸರಿನಲ್ಲೇ ಸೇವಿಂಗ್ಸ್ ಬ್ಯಾಂಕಿನಲ್ಲಿ ಒಂದುಲಕ್ಷ ರೂಪಾಯಿವರೆಗೆ ಇರುವುದೆಂಬುದು ಆತನಿಗೆ ಗೊತ್ತು.

ಅಚ್ಯುತ—ಓಹೋ ! ಇದೇನು ! ನಿನ್ನ ಹಣವೆಲ್ಲ ಮುಗಿದುಹೋಯಿತೇ ಮಗು ?

ಸೌದಾಮಿನಿ—ಎಲ್ಲಾ ಖರ್ಚಾಗಿಹೋಯಿತು.

ಅಚ್ಯುತ—ಅಷ್ಟುಹಣವನ್ನೇನುಮಾಡಿದೆ ? ಸುಮಾರು ಒಂದು ಲಕ್ಷ ರೂಪಾಯಿ ನಿನ್ನ ಹೆಸರಿನಲ್ಲಿ ಬ್ಯಾಂಕಿನಲ್ಲಿದ್ದಿತಲ್ಲಾ ?

ಸೌದಾಮಿನಿ—ಹೌದು. ಇದ್ದಿತು. ಈಗ ಎಲ್ಲಾ ವೆಚ್ಚವಾಗಿಹೋಗಿದೆ.

ಅಚ್ಯುತ—ಹಾಗಾದರೆ ಈಗ ಇನ್ನೆಲ್ಲಿಂದ ಹಣ ತರಬೇಕೆನ್ನುತ್ತೀಯೆ ?

ಸೌದಾಮಿನಿ—ನನ್ನ ತಾಯ್ತಂದೆಗಳು ನಿಮ್ಮ ಬಳಿಯಲ್ಲಿ ಕೊಟ್ಟಿರುವ ನಗನಾಣ್ಯಗಳ ಮತ್ತು ಇತರ ಆಸ್ತಿಗಳ ಆಧಾರದಮೇಲೆ ಸಾಲಾ ತರಬೇಕೆಂದಿದ್ದೇನೆ ಅವು ಬಹು ಬೆಲೆ ಬಾಳುತ್ತವೆಯಲ್ಲವೆ ?

ಅಚ್ಯುತ—ಹೌದು.

ಸೌದಾಮಿನಿ—ಹಾಗಾದರೆ ಪ್ರಯತ್ನಪಡುತ್ತೀರಾ ?

ಅಚ್ಯುತ—ನೀನು ಇಷ್ಟಪಟ್ಟರೆ ಆಗಬಹುದು.

ಸೌದಾಮಿನಿ—ನಾನಾಗಿಯೇ ಇಷ್ಟವುಂಟೆಂದು ಹೇಳುತ್ತಿದ್ದೇನಷ್ಟೆ.

ಅಚ್ಯುತ—ಈ ಹಣವು ಏತಕ್ಕೆ ಬೇಕು ?

ಸೌದಾಮಿನಿ—ನಾನು ಈಗ ಅದನ್ನು ಹೇಳಲಾಗುವುದಿಲ್ಲ. ಅದೆಲ್ಲ ರಹಸ್ಯ.

ಅಚ್ಯುತ—ಓಹೋ ! ಒಳ್ಳೆಯದು, ಆಗಲಿ, ಸ್ತ್ರೀಯರು ವಿಚಿತ್ರಸ್ವಭಾವದವರು. ಈಗ ಎಷ್ಟುಬೇಕು ?

ಸೌದಾಮಿನಿ—ಇಪ್ಪತ್ತೈದುಸಾವಿರ ರೂಪಾಯಿಗಳು.

ಅಚ್ಯುತ—ಗಾಬರಿಗೊಂಡು—ಎಷ್ಟು ?

ಸೌದಾಮಿನಿ—ಇಪ್ಪತ್ತೈದುಸಾವಿರ ರೂಪಾಯಿ.

ಅಚ್ಯುತ—ನಿನಗೇನೂ ದ್ರವ್ಯದ ಯೋಗ್ಯತೆಯೇ ಗೊತ್ತಿರುವಂತಿಲ್ಲ.

ಸೌದಾಮಿನಿ—ನನಗೆಲ್ಲಾ ಗೊತ್ತಿದೆ. ನಾಳೆಯೇ ಹಣವು ಬೇಕು.

ಅಚ್ಯುತ—ಮೊದಲು ನನಗೆ ದೊರೆತರೆತಾನೆ ?

ಸೌದಾಮಿನಿ—ನಿನಗೆ ದೊರೆಯದೆ ಏನು ?

ಅಚ್ಯುತನು ವಿಸ್ಮಿತನಾಗಿ ಮರುದಿನ ಹಣವನ್ನು ತಂದುಕೊಡುವುದಾಗಿ ಹೇಳಿ ತನ್ನ ಆಫೀಸಿಗೆ ಹೊರಟುಹೋದನು. ಆತನು ಪ್ರಫುಲ್ಲೆಯು ಒಳ್ಳೆಯವಳೆಂಬುದನ್ನು ಚೆನ್ನಾಗಿ ಬಲ್ಲನು. ಅವಳಲ್ಲಿ ಅವನಿಗೆ ಕೇವಲ ವಾತ್ಸಲ್ಯ. ಅನಂತರ ಆವನು ಬ್ಯಾಂಕಿಗೆ ಹೋಗಿ ಪ್ರಫುಲ್ಲೆಯ ಲೆಕ್ಕವನ್ನು ತೆಗೆಯಿಸಿ ನೋಡುವಲ್ಲಿ ಹಲವು ತಿಂಗಳಿಂದಲೂ ಅವಳು ಒಂದು ಕಾಸನ್ನೂ ತರಿಸಿಕೊಳ್ಳಲಿಲ್ಲವೆಂಬುದೂ, ಅವಳು ತನ್ನ ಸಂಗಡ ಸುಳ್ಳು ಹೇಳಿದಳೆಂಬುದೂ ಗೊತ್ತಾದವು. ಅವಳು ಹೀಗೆ ಹೇಳುವುದಕ್ಕೇನು ಕಾರಣವಿರಬಹುದೆಂದು ಎಷ್ಟು ಊಹಿಸಿದರೂ ಬಗೆ ಹರಿಯಲಿಲ್ಲ. ಕಡೆಗೆ ಓಹೋ ! ಇದೆಲ್ಲ ಮೋಸ. ಇವಳ ಸ್ವಂತಲೆಕ್ಕದಲ್ಲಿರುವ ಹಣವನ್ನು ತರಿಸಿಕೊಳ್ಳದೆ ಸಾಲಮಾಡಬೇಕೆಂದಿರುವುದನ್ನು ನೋಡಿದರೆ ಇವಳು ಯಾರೋ ದುಷ್ಟರ ಜತೆಗೆ ಸೇರಿಕೊಂಡು ಎಲ್ಲಿಗಾದರೂ ಓಡಿಹೋಗಬಹುದಾಗಿ ತೋರುತ್ತಿದೆ, ಆಗಲಿ. ನಾನು ನ್ಯಾಯವಾಗಿ ಅಧಿಕಾರವನ್ನು ಹೊಂದಿದ ಲಾಯರಾದ್ದರಿಂದ ಈಗ ಹಣವು ಏತಕ್ಕೆಂದು ಕೇಳುವ ಹಕ್ಕು ನನಗುಂಟು. ಎಂದು ಆಲೋಚಿಸುತ್ತ ತನ್ನ ಆಫೀಸಿಗೆ ಬಂದು ಆಕ್ಷಣವೇ ತನ್ನ ಪರಮಾಪ್ತನಾದ ವಿಠಲನಿಗೆ ಹೇಳಿ ಕಳುಹಿಸಿದನು.

ಕರೆಯುವುದಕ್ಕೆಹೋದ ಮನುಷ್ಯನು ವಿಠಲನ ಆಫೀಸನ್ನು ಸೇರಿ ನೋಡಲು ಅಲ್ಲಿ ನಟೇಶನು ಕುಳಿತಿದ್ದನು. ವಿಠಲನು ಯಾರೂ ಅರಿಯದಂತೆ ಇನ್ನೂ ಒಳಗೆ ಮರೆಯಲ್ಲಿ ಕುಳಿತಿದ್ದನು. ಯಾಕೆಂದರೆ—ಆ ಪಿತೂರಿಗಾರರು ತಾನು ಇನ್ನೂ ಬದುಕಿರುವನೆಂಬುದನ್ನು ತಿಳಿದುಬಿಡುವರೋ ಏನೋ ಎಂದು ಅವನು ಶಂಕಿಸುತ್ತಿದ್ದನು.

ವಿಠಲನಿಗೆ ಅಚ್ಯುತನ ಸಂಗಡ ಕೇವಲ ಮೈತ್ರಿಯಿದ್ದಿತಾದುದರಿಂದ ಕೂಡಲೇ ಆತನು ಈ ಲಾಯರ ಆಫೀಸಿಗೆ ಬಂದನು. ವಿಠಲನು ಎರಡು ದಿನ

ಗಳಿಂದಲೂ ಇದೇ ಮೊಕದ್ದಮೆಗೆ ಸಂಬಂಧಪಟ್ಟ ಸಾಧನೆ (ಎವಿಡೆನ್ಸ್) ಗಳನ್ನೆಲ್ಲ ಹೊಂದಿಸಿ ಕಾಗದ ಪತ್ರಗಳನ್ನು ಸರಿಮಾಡಿಕೊಳ್ಳುತ್ತಿದ್ದನು. ಆದುದರಿಂದಲೇ ವನಜಚಂದ್ರನು ಬಂದ ಸಂಗತಿಯೂ ಕೂಡ ಅವನಿಗೆ ಗೊತ್ತಿರಲಿಲ್ಲ. ವಿಠಲನು ಬಂದು ಅಚ್ಯುತನು ಆ ಸ್ತ್ರೀಯ ವಿಷಯವನ್ನೆಲ್ಲಾ ಹೇಳಿದುದನ್ನು ಕೇಳಿ_ಅಚ್ಯುತ, ಅವಳು ಪ್ರಫುಲ್ಲೆಯಲ್ಲ.

ಅಚ್ಯುತ_ಹೌದು. ಅವಳು ಪ್ರಫುಲ್ಲೆಯೇ_ಎಂದು ಸಾಧಿಸಿ ಬಳಿಕ ಬೆರಗಾದನು.

ವಿಠಲ_ಅಲ್ಲ, ಅವಳು ಲಲಿತಪಟ್ಟಣದ ಒಬ್ಬ ಸಾಪಸಗಾತಿ_ಎಂದು ಹೇಳಿ ಪೂರ್ವಕಥಾ ವೃತ್ತಾಂತವನ್ನೆಲ್ಲಾ ರಹಸ್ಯವಾಗಿ ವಿಸ್ತರಿಸಿದನು.

ಅಚ್ಯುತನು ಸೋಜಿಗಗೊಂಡು_ಆಹಾ! ಎಂತಹ ಕೃತ್ರಿಮಗಳು! ವಿಠಲ, ನೀನು ಇದನ್ನೆಲ್ಲಾ ಸರಿಯಾಗಿ ಪತ್ತೆ ಮಾಡಿದ್ದೀಯೆ_ಸರಿ. ಪ್ರಫುಲ್ಲೆಯು ಕಾಂತನಾಥನನ್ನು ಮದುವೆಯಾಗಿರುವುದರಿಂದ ವನಜಚಂದ್ರನು ಕುಲಭ್ರಷ್ಟನೆಂಬುದೂ ರುಜುವಾತಾದರೆ ಪ್ರಸಿದ್ಧವಾದ ಆ ಚಾರುಚಂದ್ರನ ಮನೆತನಕ್ಕೆ ನಮ್ಮ ಪ್ರಫುಲ್ಲೆಯೇ ರಾಣಿಯಾಗುವಳು.

ವಿಠಲ_ಹೌದು, ಸಂಶಯವೇನು! ನಾನು ಎಲ್ಲವನ್ನೂ ರುಜುವಾತುಮಾಡುತ್ತೇನೆ. ಈಗ ವನಜನು ಇಲ್ಲಿಗೆ ಬರಬೇಕಾದುದೊಂದನ್ನೂ, ಲಲಿತಪಟ್ಟಣದಿಂದ ನನ್ನ ಬಾತ್ಮಿದಾರನು ಚಾರುಚಂದ್ರನ ಮರಣದ ವಿಷಯವಾಗಿ ಕಾಗದ ಬರೆಯಬೇಕಾದುದೊಂದನ್ನೂ ಮಾತ್ರ ನಾನು ನಿರೀಕ್ಷಿಸಿಕೊಂಡಿದೇನೆ.

ಅಚ್ಯುತ_ಆ ಪಚ್ಚೆಯ ಪೆಟ್ಟಿಗೆಯಲ್ಲಿ ಏನಿರುವುದೆಂದು ತಿಳಿದಿದ್ದೀಯೆ?

ವಿಠಲ_ನನಗೇನೂ ಗೊತ್ತಿಲ್ಲ. ಸಮಯ ಬಂದಾಗ ತೆರೆದುನೋಡಿ ತಿಳಿಯಬೇಕು. ಅಂತು ಏನೋ ಒಂದು ದೊಡ್ಡ ರಹಸ್ಯವಿರಬಹುದು.

ಅಚ್ಯುತ_ಈ ಪಿತೂರಿಗಾರರ ಪೈಕಿ ಒಬ್ಬಳು ವಿಷಕನ್ನೆಯಲ್ಲವೆ? ಅವಳು ನನ್ನ ಹಳೇ ಸ್ನೇಹಿತನಾದ ಪಲ್ಲವನ ಸಾಕುಮಗಳಂತೆ. ಅವಳಿಗೇನಾದರೂ ಮರಣದಂಡನೆಯಾಗುವುದಾದರೆ ಆತನು ಬಹಳವಾಗಿ ನೊಂದುಕೊಂಡಾನು.

ವಿಠಲ_ಆತನು ಅವಳು ಹೇಗಾದರೂ ತೊಲಗಿಹೋದರೆ ಸಾಕೆಂದೂ ಅವ ಳಿಗೆ ಶಿಕ್ಷೆಯಾಗಲೇಬೇಕೆಂದೂ ಇದಾನೆ.

ಅಚ್ಯುತ_ಸ್ವಲ್ಪಹೊತ್ತು ತಲೆದೂಗುತ್ತಾ ಯೋಚಿಸಿ_ಈಗ ಆ ಹೆಂಗಸು ಕೇಳುತ್ತಿರುವ ವಿಷಯವನ್ನು ಹೇಗೆ ನಡೆಯಿಸಬೇಕು ?

ವಿಠಲ_ನಾಳೆ ಮುನ್ನೂರು ಅಥವಾ ನಾನೂರು ರೂಪಾಯಿಗಳನ್ನು ಮಾತ್ರ ಕೊಟ್ಟು ಇನ್ನು ಕೆಲವು ದಿನಗಳವರೆಗೂ ಬಾಕಿ ಹಣ ದೊರೆಯುವುದಿಲ್ಲ ವೆಂದು ಹೇಳಿರಿ. ಆ ಮಧ್ಯೆ ನಾನು ಈ ಕೇಸಿಗೆ ಸಂಬಂಧಪಟ್ಟ ಸಲಕರಣೆ ಗಳನ್ನೆಲ್ಲ ಸಿದ್ಧಪಡಿಸಿಕೊಂಡು ಭಯಂಕರವಾದ ಈ ನಾಟಕದ ಕಡೆಯ ಅಂಕ ವನ್ನು ಆಡಿಸಿಬಿಡುತ್ತೇನೆ.

ಅಚ್ಯುತ_ಈ ಸಾಲ ಮಾಡುವ ವಿಷಯವು ವಾರಣಲಾಲನಿಗೆ ತಿಳಿದಿರುವು ದೋ ಇಲ್ಲವೋ ಗೊತ್ತಿಲ್ಲ.

ವಿಠಲ_ನನಗೂ ತಿಳಿಯದು_ಎಂದು ಹೇಳಿ ತನ್ನ ಆಫೀಸಿಗೆ ಹೋಗಿ ನಟೇ ಶನ ಸಂಗಡ ಮಾತಾಡುತ್ತ ಕುಳಿತನು. ಹಲವು ದಿನಗಳಿಂದಲೂ ಲಲಿತ ಪಟ್ಟ ಣದ ಪತ್ತೇದಾರನ ಕಡೆಯಿಂದ ಉತ್ತರವೇನೂ ಬಂದಿರಲಿಲ್ಲ. ವಿಠಲನು ಬಹು ದಣಿದಿದ್ದನು. ಆ ಮಧ್ಯೆ ನಟೇಶನು ಏನನ್ನೋ ಜ್ಞಾಪಿಸಿಕೊಂಡು ಗಾಬರಿ ಪಟ್ಟು_ವಿಠಲ, ನಾನೊಂದು ವಿಷಯವನ್ನು ಮರೆತಿದ್ದೆ. ವಾರಣನು ಮೊಹರು ಮಾಡಿದ ಒಂದು ಲಕ್ಕೋಟೆಯನ್ನು ನಿನಗೆ ಕೊಡಬೇಕೆಂದೂ ನೀನು ಬರುವ ವರೆಗೂ ಅದನ್ನು ಬಹು ಜೋಕೆಯಾಗಿಟ್ಟಿರಬೇಕೆಂದೂ ಹೇಳಿ ತಂದುಕೊಟ್ಟಿದಾನೆ_ ಎನ್ನುತ ಅದನ್ನು ಒಪ್ಪಿಸಲು ವಿಠಲನು ಕೈಗೆ ತೆಗೆದುಕೊಂಡು_ನಟೇಶ, ಓಹೋ ! ಇದು ನನಗೆ ಬಂದಿದೆ. ಇದೇನು ! 'ನಾನು (ವಾರಣನು) ಸಾಯುವ ವರೆಗೂ ಒಡೆಯ ಕೂಡದು' ಎಂದು ಬರೆದಿದೆ. ನಟೇಶ, ಈ ಕಾಗದವನ್ನು ತಂದಿದ್ದಾಗ ವಾರಣನು ಕೇವಲಭೀತನಾದಂತೆ ತೋರುತ್ತಿದ್ದನೊ ?

ನಟೇಶ_ಅದು ಅವೇಳೆ ; ಸುಮಾರು ೩ ಘಂಟೆಯ ರಾತ್ರಿ. ನಾನು ಅವನ ಮುಖವನ್ನೂ ಸರಿಯಾಗಿ ನೋಡಲಿಲ್ಲ.

ವಿಠಲ_ಅಯ್ಯೋ! ಪಾಪ! ಆ ತರುಣನು ಏನೋ ದುಡುಕಿದಂತೆ ತೋರುತ್ತಿದೆ.

ನಟೇಶ_ಅವನು ಪ್ರಾಣ ಕಳೆದುಕೊಳ್ಳುವುದಕ್ಕೆ ಹಿಂದೆಗೆಯದಂತಹ ಧೀರನೆಂಬುದನ್ನು ನಾನು ನಂಬಲಾರೆ.

ವಿಠಲ_ಅವನಿಗೆ ಅದೇ ಗತಿ ಸಂಭವಿಸಿದಂತಿದೆ. ಆಗಲಿ, ಹೋಗಿ ವಿಚಾರಿಸುವೆನು.

ನಟೇಶ_ಅದನ್ನೇನನ್ನೂ ಕಾಣೆ. ಅವನಿಗೆ ತಿಲಮೊಯೊಬ್ಬಳಿದ್ದರೆ ಸಾಕು. ಪ್ರಾಣ ಬಿಟ್ಟಿರಲಾರನು.

ವಿಠಲ_ಅವಳು ಆತ್ಮಹತ್ಯವನ್ನು ಮಾಡಿಕೊಂಡಿರಬಾರದೇನು ?

ನಟೇಶ_ಅವಳು ಮಾಡಿಕೊಳ್ಳತಕ್ಕವಳಲ್ಲ.

ವಿಠಲ_ನಾನು ನಂಬಲಾರೆ. ಅವಳು ಮಾಡಿರುವ ಕೊಲೆಗಳು,_ತತ್ರಾಪಿ ತನ್ನ ತಂದೆಯನ್ನು ತಾನೇ ಸಾಕ್ಷಾತ್ತಾಗಿ ಕೈಯಾರ ಕೊಂದುದು ನೆನಪಿಗೆ ಬಂದು ಅವಳನ್ನು ಆತ್ಮಹತ್ಯಕ್ಕೇತಕ್ಕೆ ಪ್ರೇರಿಸಿರಬಾರದು ? ಉಂ, ಇನ್ನು ನಾನು ಹೋಗಿ ಇದರ ಪತ್ತೆಯ ವಿಚಾರವನ್ನು ನೋಡುತ್ತೇನೆ.

ನಟೇಶ_ಇದಕ್ಕೆ ಪ್ರವರ್ತಿಸುವುದು ವೃಥಾ ಕಾಲಹರಣವೆಂದು ನನಗೆ ತೋರುವುದು.

ವಿಠಲನು ಹೊರಟೇ ಬಿಟ್ಟನು. ಹೋಗಿ ವಾರಣನ ಮನೆಗೆ ಸ್ವಲ್ಪ ದೂರದಲ್ಲಿರುವ ಬೀದಿಯ ಚೌಕದಲ್ಲಿ ನಿಂತು ನೋಡಲು ಆ ಮನೆಯ ಬಾಗಿಲಬಳಿ ಒಂದು ಬಂಡಿಯು ನಿಂತಿದ್ದಿತು. ಯಾರೋ ಮೂವರು ಬಹು ಆತುರದಿಂದ ಆ ಮನೆಯೊಳಕ್ಕೆ ಹೋದರು. ಅವರಲ್ಲಿಬ್ಬರು ಮಾಧವ ಭಾಸ್ಕರರೆಂಬುದು ವಿಠಲನಿಗೆ ಗೊತ್ತಾಯಿತು. ಮೂರನೆಯವನು ವನಜಚಂದ್ರನೆಂಬುದು ತಿಳಿಯಲಿಲ್ಲ. ಒಳಗಿನಿಂದ ಒಂದು ಪೆಟ್ಟಿಗೆಯನ್ನು ತಂದು ಬಂಡಿಯಲ್ಲಿಟ್ಟುಕೊಂಡು ಆ ಮೂವರೂ ಹೊರಟರು. ವಿಠಲನು ಇದರ ತತ್ತ್ವವನ್ನು ತಿಳಿಯಬೇಕೆಂದು ಸಮ್ಮೋಹನಾಸ್ತ್ರ

ಪ್ರಾಯವಾದ ತನ್ನ ಛದ್ಮವೇಷವನ್ನು ಕೈಗೊಂಡು ಮರೆಯಾಗಿ ಅವರ ಹಿಂದೆಯೇ ಹೊರಟನು. ಬಂಡಿಯು ಕುಮುದ್ವತೀನದಿಯವರೆಗೂ ಹೋಯಿತು. ದಾರಿ ಯುದ್ದಕ್ಕೂ ಪೋಲೀಸಿನವರನೇಕರು ನೋಡುತ್ತಲೇ ಇದ್ದರೂ ಯಾರೂ ಇದೇ ನೆಂದು ಕೂಡ ವಿಚಾರಿಸಲಿಲ್ಲ. ಬಂಡಿಯು ಬಳಸಾದ ಒಂದು ಸೇತುವೆಯ ಮಾರ್ಗವಾಗಿ ಬರಬಹುದೆಂದೂಹಿಸಿ ವಿಠಲನು ಒಂದು ದೋಣಿಯಿಂದ ನದಿ ಯನ್ನು ದಾಟಿ ಆ ಗಾಡಿ ಬರುವುದಕ್ಕಿಂತ ಮೊದಲೇ ಅವರ ಉದ್ದಿಷ್ಟಸ್ಥಾನವಾದ ಸ್ಮಶಾನದ ಬಳಿಗೆ ಹೋಗಿ ಒಂದು ಮರದ ಮರೆಯಲ್ಲಿ ಕುಳಿತು ನೋಡುತ್ತಿ ದ್ದನು. ಆ ಗುಡ್ಡದಮೇಲಕ್ಕೆ ಬಂಡಿಯೂ ಬಂದಿತು. ಅವರು ಅಲ್ಲಿನ ಕಾವ ಲುಗಾರನನ್ನು ಕಂಡು ರಹಸ್ಯವಾಗಿ ಮಾತಾಡಿ ಪೆಟ್ಟಿಗೆಯನ್ನಿಳಿಸಿ ಮಂಟಪದ ಲ್ಲಿಟ್ಟು ಹೊರಟುಹೋದರು. ವಿಠಲನು ಮಾತ್ರ ಅಲ್ಲೇ ಉಳಿದುಕೊಂಡನು.

---

## ಹದಿನೆಂಟನೆಯ ಪರಿಚ್ಛೇದ.

ಮಾಧವಾದಿಗಳು ಹೋದಮೇಲೆ ವಿಠಲನು ಸ್ಮಶಾನದ ಕಾವಲುಗಾರನ ಬಳಿಗೆ ಹೋಗಿ—ಏನಯ್ಯ, ಈಗ ಬಂದಿದ್ದವರು ಈ ಮಂಟಪದಲ್ಲಿಟ್ಟು ಹೋದು ದೇನು ? ಎಂದನು.

ಈ ಮಾತನ್ನು ಕೇಳಿದೊಡನೆಯೇ ಅವನ ಕೈಕಾಲು ನಡುಗಹತ್ತಿತು. ಅವನು ರಾಕ್ಷಸಾಕಾರವುಳ್ಳ ದೀರ್ಘದೇಹಿಯೂ ಕ್ರೂರಸ್ವಭಾವದವನೂ ಸಿಡುಕು ಮೋರೆಯವನೂ ಆಗಿದ್ದನು. ಈ ಸಂದರ್ಭದಲ್ಲಿ ಅವನ ಮನಸ್ಸು ತೃಪ್ತಿಯಾ ಗುವಮಟ್ಟಿಗೂ ಕೈಬೆಚ್ಚಗಾಗಿದ್ದಿತು. ಆದುದರಿಂದ ಈ ರಹಸ್ಯವನ್ನು ಯಾವನೋ ಒಬ್ಬ ಆಗಂತುಕನಿಗೆ ಹೇಳುವುದಕ್ಕೆ ಅವನ ಮನಸ್ಸು ಒಡಂಬಡಲಿಲ್ಲವಾಗಿ ಹುಬ್ಬು ಗಂಟಿನೊಡನೆ—ಇದನ್ನೆಲ್ಲ ಕೇಳುವ ಹಕ್ಕು ನಿನಗಿಲ್ಲ. ಹೊರಕ್ಕೆ ನಡೆ—ಎಂದು ಗದ್ದರಿಸುತ್ತ ಬಲಗೈಯಿಂದ ವಿಠಲನ ರಟ್ಟೆಯನ್ನು ಹಿಡಿದು ಎಡಗೈಯಿಂದ ಕುತ್ತಿ ಗೆಗೆ ಅರ್ಧಚಂದ್ರಪ್ರಯೋಗ ಮಾಡುತ್ತ ಆ ಮಂಟಪದಿಂದ ಹೊರಕ್ಕೆ ತಳ್ಳಬೇಕೆಂ

ದಿರುವಷ್ಟರಲ್ಲೇ ವಿಠಲನು ಥಟ್ಟನೆ ಬಿಡಿಸಿಕೊಂಡು ತನ್ನ ಜೇಬಿನಲ್ಲಿದ್ದ ಕೈಬಂದೂಕವನ್ನು ತೆಗೆದು ಆ ಮನುಷ್ಯನಿಗೆ ತೋರಿಸುತ್ತ_ಎಲೋ ನೀನು ಒಳ್ಳೆಯವನಾಗಿ ಕಾಣುತ್ತೀಯೆ. ನಿನಗೆ ಒಳತತ್ತ್ವವೆಲ್ಲಾ ಗೊತ್ತಿದೆ. ಈಗ ನಾನು ಕೇಳುವ ಪ್ರಶ್ನೆಗೆ ಉತ್ತರ ಹೇಳುತ್ತೀಯಾ ಇಲ್ಲವೆ ?

ಕಾವಲುಗಾರ_ಇಲ್ಲ, ನಾನು ಹೇಳುವುದಿಲ್ಲ.

ವಿಠಲನು ತನ್ನ ಜೇಬಿನಲ್ಲಿದ್ದ ಅಯಸ್ಕಂಕಣ (Hand cuffs ಹಾತ್ ಬೇಡಿ) ಗಳನ್ನು ತೆಗೆದು ಅವನ ಕೈಗೆ ತೊಡಿಸುವುದಕ್ಕೆ ತೊಡಗಿದನು.

ಕಾವಲುಗಾರ_ನಡುಗುತ್ತ_ಸ್ವಾಮಿ, ನೀವು ಯಾರು ?

ವಿಠಲ_ಗೊತ್ತಿಲ್ಲವೆ ? ನಾನೊಬ್ಬ ಅಧಿಕಾರಿ (Officer). ಈಗ ನನ್ನ ಪ್ರಶ್ನೆಗೆ ನೀನು ಉತ್ತರ ಹೇಳದಿದ್ದರೆ ನಿನ್ನನ್ನು ದಸ್ತಗಿರಿ ಮಾಡಿ ಸೆರೆಮನೆಯಲ್ಲಿ ಇಡಿಸುತ್ತೇನೆ.

ಕಾವಲುಗಾರ_ಈಗ ನೀವು ನನ್ನಿಂದ ತಿಳಿಯಬೇಕಾದುದೇನು ?

ವಿಠಲ_ಆ ಮನುಷ್ಯರು ಯಾರು ?

ಕಾವಲುಗಾರ_ಅವರು ಯಾರೋ ನನಗೆ ಗೊತ್ತಿಲ್ಲ.

ವಿಠಲ_ಇದಕ್ಕೆ ಮೊದಲು ನೀನು ಯಾವಾಗಲೂ ಅವರನ್ನು ನೋಡಿರಲಿಲ್ಲವೆ ?

ಕಾವಲುಗಾರ_ಅವರಲ್ಲೊಬ್ಬನನ್ನು ಈ ಮಧ್ಯಾಹ್ನದಲ್ಲಿ ನೋಡಿದ್ದೆ.

ವಿಠಲ_ಅವನಿಗೆ ನಿನ್ನಲ್ಲೇನು ಕೆಲಸವಿದ್ದಿತು ?

ಕಾವಲುಗಾರ_ಅವನು ಈ ರಾತ್ರಿ ಒಂದು ಪೆಟ್ಟಿಗೆಯನ್ನೂ ಶವವನ್ನೂ ತಂದು ಇಲ್ಲಿಡುವುದಾಗಿಯೂ ನಾನೇ ಅದನ್ನು ಹೂಳಿಸಿಬಿಡಬಹುದೆಂದೂ ಅದಕ್ಕಾಗಿ ನನಗೆ ಬೇಕಾದಷ್ಟು ದ್ರವ್ಯವನ್ನು ಕೊಡುವುದಾಗಿಯೂ ಹೇಳಿದನು.

ವಿಠಲ_ಹಾಗೆಯೇ ಆಗಲೆಂದು ನೀನು ಒಪ್ಪಿಕೊಂಡೆಯೇನೊ ?

ಕಾವಲುಗಾರ_ಹೌದು, ಒಪ್ಪಿಕೊಂಡೆ. ಆದರೆ ಅದರಿಂದೇನೂ ಅಪಾಯ ವಿಲ್ಲವೆಂದು ನಾನು ನಂಬಿದೆ.

ವಿಠಲ_ಯಾರದೋ ಶವವನ್ನು ವಾರಸುದಾರರಲ್ಲದ ಮತ್ತಾರೋ ಹೂಳಿ ಡಿಸುವುದು ನ್ಯಾಯವಿರುದ್ಧವೆಂಬುದು ನಿನಗೆ ಗೊತ್ತಿರಲಿಲ್ಲವೊ ?

ಕಾವಲುಗಾರ_ಇಲ್ಲ. ಇದಲ್ಲದೆ ಅದೇನೋ ಒಂದು ಸಾಂಕ್ರಾಮಿಕ ರೋಗ (Contagious) ದಿಂದುಂಟಾದ ಮರಣವೆಂದು ತಿಳಿಸಿದನು.

ವಿಠಲ_ಶವವನ್ನು ಎಲ್ಲಿಂದ ತಂದರು ?

ಕಾವಲುಗಾರ_ನನಗೆ ಗೊತ್ತಿಲ್ಲ.

ವಿಠಲ_ನಾನು ಆ ಪೆಟ್ಟಿಗೆಯೊಳಗಿರುವುದನ್ನು ನೋಡಬೇಕಾಗಿದೆ. ಆದು ದರಿಂದ ನಡೆ. ಆ ಪೆಟ್ಟಿಗೆ ಇಟ್ಟಿರುವ ಕೊಠಡಿಯ ಬಾಗಿಲನ್ನು ತೆರೆ.

ಪೆಟ್ಟಿಗೆಯು ಆ ಕಿರುಮನೆಯಲ್ಲಿ ಭದ್ರಪಡಿಸಲ್ಪಟ್ಟಿದ್ದಿತು. ಆ ಮಂಟ ಪವು ಒಂದು ದೊಡ್ಡ ಸತ್ರದಂತೆ ವಿಸ್ತಾರವಾಗಿ ಅನೇಕ ಕೊಠಡಿಗಳುಳ್ಳದಾಗಿ ದ್ದಿತು. ಪ್ರೇತಕರ್ಮಾದಿಗಳನ್ನು ಮಾಡುವುದಕ್ಕೆಂದೂ, ಶವದ ಹಿಂದೆ ಬರುವ ಅನುಬಂಧಿಗಳಿಗೆ ಮಳೆ ಗಾಳಿ ಬಿಸಿಲು ಚಳಿಗಳಾಗದಿರಲೆಂದೂ ಯಾರೋ ಪುಣ್ಯಾತ್ಮರು ಅನೇಕ ಸಾವಿರ ರೂಪಾಯಿ ವೆಚ್ಚಮಾಡಿ ಅದನ್ನು ಕಟ್ಟಿಸಿದ್ದರು. ಕಾವಲುಗಾರನು ಸರ್‍ರನೆ ಬಾಗಿಲ ಕದವನ್ನು ತೆಗೆಯುವುದಕ್ಕೆ ಹೋದನು. ಅವ ನು ವಿಠಲನು ಹೇಳುವುದನ್ನೆಲ್ಲ ಅತಿ ವಿನಯದಿಂದ ನಡೆಯಿಸುವವನಂತೆ ತೋರಿ ದನು. ಕದವನ್ನು ತೆರೆಯುತ್ತಲೆ ವಿಠಲನು ಬೇಗ ಆ ಕಿರುಮನೆಯೊಳಕ್ಕೆ ಹೋ ದನು. ಆ ಪೆಟ್ಟಿಗೆಯನ್ನು ಪರೀಕ್ಷಿಸಬೇಕೆಂಬ ಆತುರದಲ್ಲಿ ತಾನು ಒಳಗಿರುವೆ ನೆಂದೂ ಅವನಿಂದ ತನಗೇನಾದರೂ ಅಪಾಯವಾದೀತೆಂದೂ ಕೂಡ ಅವನು ಯೋಚಿಸಲಿಲ್ಲ. ಪೆಟ್ಟಿಗೆಯ ಮೊಳೆಗಳನ್ನೆಲ್ಲ ತಾನೇ ತೆಗೆಯುತ್ತಿದ್ದನು. ಅಷ್ಟ ರಲ್ಲೇ ಆ ಕೊಠಡಿಯ ಕದವು ಮುಚ್ಚಲ್ಪಟ್ಟು ಬೀಗ ಹಾಕಲ್ಪಟ್ಟಿತು. ವಿಠಲನಿಗೆ ಆ ಸದ್ದೂ ಕೇಳಿಸಿತು. ಅದು ಸಾಮಾನ್ಯವಾದ ಕದವಲ್ಲ. ಅತ್ತಿಯ ಹಲಿಗೆ ಯಾದುದರಿಂದ ಕೊಡಲಿಯಿಂದ ಸೀಳುವುದಕ್ಕೂ ಅಸಾಧ್ಯ. ಅಲ್ಲದೆ ವಿಠಲನ

ಬಳಿಯಲ್ಲಿ ಯಾವ ಆಯುಧವೂ ಇರಲಿಲ್ಲ. ಇಷ್ಟೇ ಅಲ್ಲದೆ ಆ ಕದಕ್ಕೆ ಕಬ್ಬಿಣದ ರೇಖೂ ಹದ್ದಿಸಲ್ಪಟ್ಟಿದ್ದಿತು.

ಈಗ ವಿಠಲನು ಕೃತ್ರಿಮಿಯಾದ ಆ ಕಾವಲುಗಾರನಿಂದ ತನಗುಂಟಾದ ದುರವಸ್ಥೆಯನ್ನು ತಿಳಿದುಕೊಂಡನು. ಎಷ್ಟೆಷ್ಟೋ ಕಿರುಚಿದನು. ಕಿಟಕಿಗಳಿಲ್ಲ ದುದರಿಂದಲೂ ಗೋಡೆಗಳು ದಪ್ಪವಾಗಿದ್ದುದರಿಂದಲೂ ಹೊರಕ್ಕೆ ಏನೂ ಕೇಳಿಸು ತಿರಲಿಲ್ಲ. ಈಗ ಆ ಕಾವಲುಗಾರನು ಎಲ್ಲೋ ಓಡಿಹೋಗಿರಬಹುದು. ಇನ್ನು ಪುನಃ ಆ ಕೊಠಡಿಯ ಕದವನ್ನು ತೆರೆಯುವುದು ಯಾವ ಕಾಲಕ್ಕೋ ಏನೋ! ಅದುವರೆಗೆ ವಿಠಲನ ಗತಿಯೇನಾಗಬಹುದೆಂಬುದು ಸರ್ವರಿಗೂ ವಿದಿತವೇ! ಈಗ ಅವನು ನೆಲವನ್ನಗೆದು ಹೊರಕ್ಕೆ ಬರಬಹುದಾದುದೊಂದೇ ಉಪಾಯ. ಆದರೆ ನೆಲಕ್ಕೆ ಕಲ್ಲುಚಪ್ಪಡಿಗಳನ್ನು ಹಾಸಿದ್ದುದರಿಂದ ಅದಕ್ಕೂ ಅವಕಾಶವಾಗಲಿಲ್ಲ.

ವಿಠಲನಿಗೆ ಈಗ ಬಲು ಚಿಂತೆ ಸಂಭವಿಸಿತು. ಏನೂ ತೋರಲಿಲ್ಲ. ತನ್ನ ಜೀವಮಾನದ ಕಡೆಯ ಅಧ್ಯಾಯದಲ್ಲಿ ಇದೇ ಸಮಾಪ್ತಿ ಮಂಗಳವೆಂದರಿತು ಅಲ್ಲಿ ತಲೆಯ ಮೇಲೆ ಕೈಯಿಟ್ಟುಕೊಂಡು ಚಿಂತಿಸಿದನು. ಬಳಿಕ ಇದ್ದುದರಲ್ಲಿ ಸ್ವಲ್ಪ ಮಟ್ಟಿಗೆ ಧೈರ್ಯವನ್ನು ತಂದುಕೊಂಡು—ಉಂ, ಇರಲಿ. ನಾನು ಇಲ್ಲಿಗೆ ಬಂದ ಕೆಲಸವನ್ನು—ಪೆಟ್ಟಿಗೆಯಲ್ಲಿರುವ ಹೆಣವು ಯಾರದೆಂಬುದನ್ನು ತಿಳಿದು ನೋಡಿದ ಮೇಲೆ ಹೊರಕ್ಕೆ ಹೋಗುವುದಕ್ಕೇನಾದರೂ ಉಪಾಯವುಂಟೇ ಎಂಬುದನ್ನು ಯೋಚಿಸುವೆನು—ಎಂದುಕೊಂಡು ತನ್ನಲ್ಲಿದ್ದ ಕೈಲಾಂದ್ರವನ್ನು ಹೊತ್ತಿಸಿ ಅಲ್ಲಿ ಬಿದ್ದಿದ್ದ ಒಂದು ದೊಣ್ಣೆಯ ಮತ್ತು ತನ್ನಲ್ಲಿದ್ದ ಚೂರಿಯ ಸಹಾಯದಿಂದ ಬಹು ಕಷ್ಟಪಟ್ಟು ಆ ಪೆಟ್ಟಿಗೆಯ ಮುಚ್ಚಳವನ್ನು ತೆರೆದನು. ಅದರೊಳಕ್ಕೆ ಲಾಂದ್ರ ವನ್ನು ಹಿಡಿದು ನೋಡಲು ಅತಿ ಭಯಂಕರ! ಮತ್ತು ಸಂಕಟಕರ! ವಾರಣ ಲಾಲನ ಮತ್ತು ತಿಲಮೆಯ ದೇಹಗಳು ಒಂದರಮಗ್ಗಲಲ್ಲೊಂದು ಇಡ ಲ್ಪಟ್ಟಿವೆ.

ಆ ಪಾಪಿಗಳು ಈ ಶವಗಳನ್ನು ಪೆಟ್ಟಿಗೆಯಲ್ಲಿಟ್ಟು ಸಾಗಿಸಿದುದನ್ನು ನಮ್ಮ ವಿಠಲಮೂರ್ತಿಯೇನಾದರೂ ನೋಡದಿದ್ದಲ್ಲಿ ವಾರಣನೂ ತಿಲಮೆಯೂ ಏನಾದ ರೆಂಬುದು ಕೂಡ ಮತ್ತಾರಿಗೂ ತಿಳಿಯುತ್ತಿರಲಿಲ್ಲ.

ವಿಠಲ_ಓಹೋ ! ಇದೇನು ! ಎರಡು ಖೂನಿಗಳೋ ಅಥವಾ ಎರಡು ಆತ್ಮಹತ್ಯೆಗಳೋ ! ಎಂದು ತನ್ನಷ್ಟಕ್ಕೆ ತಾನೇ ಪ್ರಶ್ನೆಮಾಡುತ್ತ ಅರ್ಧ ಘಂಟೆಕಾಲ ಆ ದೇಹಗಳನ್ನು ಚೆನ್ನಾಗಿ ಪರೀಕ್ಷಿಸಿ ನೋಡಿ ಕಡೆಗೆ ಅದು ಜೋಡಿಯಾಗಿ ನಡೆದ ಆತ್ಮಹತ್ಯವೇ ಎಂದು ನಿಶ್ಚಯಿಸಿದನು. ತರುವಾಯ ಇದೇನೋ ಭಯಂಕರವಾದ ವಿಷಯವಾದರೂ ನೌಕಾಧ್ಯಕ್ಷನಾದ ಪಲ್ಲವನಿಗೆ ಅನಿಷ್ಟನಿವೃತ್ತಿಯಾಯಿತು. ಅವಳು ಇನ್ನೂ ಬದುಕಿದ್ದರೆ ಆ ದೊಡ್ಡಮನುಷ್ಯನಾದ ಪಲ್ಲವನ ಸಾಕುಮಗಳೆಂದು ಎಲ್ಲರಿಗೂ ಗೊತ್ತಾಗಿಬಿಡುತಿದ್ದಿತು. ಅಯ್ಯೋ! ಅವಳು ತಾನು ಮಾಡಿದ ತಪ್ಪುಗಳನ್ನೆಲ್ಲ ಒಪ್ಪಿಕೊಂಡಿದ್ದರೆ ಎಷ್ಟು ಚೆನ್ನಾಗಿರುತಿದ್ದಿತೋ ! ಅಥವಾ ಮಾರಣನ ಮುಂದೇನಾದರೂ ಒಪ್ಪಿಕೊಂಡಿರುವಳೋ ಏನೋ ! ಪ್ರಾಯಶಃ ಅವಳ ಲಕ್ಕೋಟೆಯಲ್ಲಿ ಒಪ್ಪಿಕೊಂಡಿರುವ ಸಂಗತಿಯೇನಾದರೂ ಇದ್ದೇ ಇದೆಯೋ ! ಏನೋ ! ಎಂದುಕೊಂಡು ಪುನಃ ಮುಚ್ಚಳವನ್ನು ಯಥಾಸ್ಥಿತವಾಗಿ ಮುಚ್ಚಿ ತರುವಾಯ ತಾನು ಹೊರಕ್ಕೆ ಬರುವುದಕ್ಕೇನಾದರೂ ಅವಕಾಶವುಂಟೋ ಎಂಬುದನ್ನು ನೋಡುತ್ತ ಆ ಕೊಠಡಿಯಲ್ಲೆಲ್ಲ ಲಾಂದ್ರವನ್ನು ಹಿಡಿದು ಪರೀಕ್ಷಿಸುತ್ತಿದ್ದನು. ಆ ಕೋಠಡಿಯ ಹಿಂಭಾಗದಲ್ಲಿ ಒಂದು ದೊಡ್ಡ ಕಲ್ಲುಗುಂಡಿರುವುದೆಂಬುದನ್ನೂ, ಅದಕ್ಕಾಚೆ ಒಂದು ರೈಲುರಸ್ತೆ ಇರುವುದೆಂಬುದನ್ನೂ ವಿಠಲನು ಬಲ್ಲನು. ಯಾವವಿಧದಲ್ಲೂ ಹೊರಕ್ಕೆ ಬರುವುದು ಅಸಾಧ್ಯವಾಗಿ ತೋರಿತು. ಕಡೆಗೆ ದೋಣ್ಣೆಯಿಂದ ನೆಲಕ್ಕೆ ಹಾಸಿದ್ದ ಚಪ್ಪಡಿಗಳನ್ನೆಲ್ಲ ಒಂದುಕಡೆಯಿಂದ ಬಡಿಯುತ್ತಬರಲು ಒಂದಾನೊಂದು ಮೂಲೆಯಲ್ಲಿ ಸ್ವಲ್ಪ ಪೊಳ್ಳಾಗಿರುವಂತೆ ದದ್ದಾದ ಸದ್ದು ಕೇಳಿಸಿತು. ಆದರೆ ಅಲ್ಲಿ ಹಾಸಿದ್ದ ಬಂಡೆಯು ಬಹುದೊಡ್ಡದಾಗಿದ್ದಿತು. ಮತ್ತು ಸಂದುಗಾರೆಯಾಗಿ ಹಾಕಿದ್ದ ಸಿಮೆಂಟು ಬಹು ಭದ್ರವಾಗಿ ಕಚ್ಚಿಕೊಂಡಿದ್ದಿತು. ಆದುದರಿಂದ ಅದನ್ನೆತ್ತುವುದಕ್ಕೆ ಯಾವ ಉಪಾಯವೂ ತೋರಲಿಲ್ಲವಾದರೂ ತಾಳ್ಮೆಯ ತವರುಮನೆಯಾದ ವಿಠಲನು ತನ್ನ ಚೂರಿಯಿಂದ ಆ ಬಂಡೆಯ ಒಂದು ಮೂಲೆಯಕಡೆ ಸಂದಿಗೆ ಅಂಟಿಸಿದ್ದ ಸಿಮೆಂಟನ್ನು ಸ್ವಲ್ಪಸ್ವಲ್ಪವಾಗಿ ಎಬ್ಬಿ ಕೆದಕಿ ತೆಗೆಯುತ್ತ ದೊಡ್ಡ ಸಂದನ್ನು ಮಾಡಿದನು. ಅದರಲ್ಲಿ ಸುಲಭವಾಗಿ ದೋಣ್ಣೆಯ ತುದಿಯು ಹಿಡಿಯುವಂತಾಯಿತು. ಆಗ ಅದೇ ದೋಣ್ಣೆಯ ಸಹಾಯದಿಂದ ಸುಮಾರು ಎರಡಂಗುಲದ ಎತ್ತರದವರೆಗೆ ಆ ಮೂಲೆಯನ್ನು ಪೆಳ್ಳಗಿಸಿ ಬಳಿಕ ತನ್ನ ಸರ್ವ ಶಕ್ತಿಯನ್ನೂ ವಿನಿ

ಯೋಗಿಸಿ ಕೈಗಳಿಂದ ಬಲವಾಗಿ ಹಿಡಿದು ಆ ಬಂಡೆಯನ್ನು ಹೊರಕ್ಕೆತ್ತಿಟ್ಟು , ಶಹ ಬಾಸ್, ಈಶ್ವರಕೃಪೆ ಹೇಗಿದೆಯೋ ! ನಾನು ಬದುಕುವೆನೋ, ಸಾಯುವೆನೋ, ಈಗ ಗೊತ್ತಾಗುವುದು. ಎಂದು ಹೇಳುತ್ತ ಸ್ವಲ್ಪ ಸುದಾರಿಸಿಕೊಂಡನು. ಅನಂತರ ನೋಡುವಲ್ಲಿ ಅಲ್ಲಿ ಒಂದುಚೌಕವಾದ ಗುಂಡಿ. ಒಳಕ್ಕೆ ಒಂದು ಸಣ್ಣ ಕಲ್ಲನ್ನೆಸೆದು ನೋಡಲು ಅದು ಸುಮಾರು ಹತ್ತುಅಡಿ ಆಳವುಳ್ಳದಾಗಿ ತೋರಿ ತು. ಲಾಂದ್ರವನ್ನು ಒಳಕ್ಕೆ ಹಿಡಿದು ನೋಡಲು ಕೆಳಗೆ ನೀರಿರಲಿಲ್ಲ. ಒಣ ಗಿದ್ದ ಜಲ್ಲಿಕಲ್ಲುಗಳಿದ್ದುವು. ಆದುದರಿಂದ ಅದು ಬಾವಿಯಲ್ಲವೆಂದು ನಂಬಿಕೊಂ ಡನು. ದಡಗಳ ಕಡೆ ಬೆಳಕು ಹಿಡಿದು ನೋಡಲು ರೈಲುರಸ್ತೆಯಿದ್ದ ಪಾರ್ಶ್ವ ದಲ್ಲಿ ಮಾತ್ರ ದಡವು ಸ್ವಲ್ಪ ಕುಸಿದುಹೋಗಿದ್ದಿತು. ಈ ನೋಟವು ಅವನಿಗೆ ಬಹು ಪ್ರೋತ್ಸಾಹಕರವಾಯಿತು. ಬಳಿಕ ಒಳಕ್ಕಿಳಿದು ಆ ಕುಸಿದು ಹೋಗಿದ್ದ ಭಾಗ ವನ್ನು ತನ್ನ ದೊಣ್ಣೆಯಿಂದ ತಿವಿಯುತ್ತಲೂ ಎರಡು ಕೈಗಳಿಂದಲೂ ಮಣ್ಣನ್ನು ಬಗೆಯುತ್ತಲೂ ಬಂದನು. ಆಮೇಲೆ ಒಬ್ಬನ ಮೈಹಿಡಿಯುವಷ್ಟುಮಟ್ಟಿಗೆ ಅಗ ಲವಾದ ಒಂದು ಕೊರಕಲು ದಾರಿ ಸಿಕ್ಕಿತು. ವಿಠಲನು ಬಹುಪ್ರಯಾಸದಿಂದ ತೆವಳಿಕೊಂಡು ನುಗ್ಗಿದನು. ಆ ಕೊರಕಲು ಇಳಿಜಾರಾಗಿದ್ದುದರಿಂದ ಹೆದರಿ ಪುನಃ ಲಾಂದ್ರವನ್ನುಪಯೋಗಿಸಿಕೊಂಡನು. ಅಂತಹ ಕಲ್ಲಿನ ಪೊಟ್ಟರೆಯಲ್ಲಿ ಮನುಷ್ಯನು ನುಗ್ಗಿಹೋಗುವುದು ಸುಲಭವಾದ ಕೆಲಸವಲ್ಲ. ಮೇಲೂ ಕೆಳಗೂ ಅಕ್ಕಪಕ್ಕಗಳಲ್ಲೂ ಕಲ್ಲುಗಳು ಬಲುಚೂಪಾಗಿದ್ದುವು. ಆದುದರಿಂದ ವಿಠಲನ ಬಟ್ಟೆಬರೆಗಳೆಲ್ಲ ಹರಿದುಹೋದುದಲ್ಲದೆ ಅಲ್ಲಲ್ಲಿ ಮೈ ಕೆತ್ತಿಹೋಗಿ ರಕ್ತಪ್ರವಾ ಹವೂ ಸುರಿಯುತಬಂದಿತು. ಅತ್ಯಾಯಾಯಾಸದಿಂದ ಶರೀರವಾದ್ಯಂತವೂ ಬೆವರಿತು.

ಹಾಗೆಯೇ ಬಹುಶ್ರಮದಿಂದ ಸುಮಾರು ಹತ್ತುಮಾರುದೂರ ದೇಕಿಕೊಂಡು ಹೋದನು. ಅಷ್ಟರಲ್ಲೇ ಸಿಡಿಲುಬಡಿದಂತೆ ಏನೋ ಒಂದು ಸದ್ದು ಕೇಳಿಸಿತು. ಮತ್ತು ತಬ್ಬು ಗಾತ್ರದ ಒಂದು ಗುಂಡು ಕುಸಿದು ತಲೆಯ ಮೇಲೆ ಬೀಳುವಂ ತಾಯಿತು. ಆಗ ಏನು ಮಾಡಬೇಕು ! ಮುಂದುಗಡೆ ಹತ್ತಾನೆಯಗಾತ್ರದ ಗುಂಡು. ಬಂದ ದಾರಿಯು ಇಕ್ಕಟ್ಟಾಗಿದ್ದುದರಿಂದ ಹಿಂದಕ್ಕೆ ತಿರುಗುವುದೂ ಅಸಾಧ್ಯ. ಇಷ್ಟರ ಮೇಲೆ ತಲೆಯಮೇಲೆ ಕಲ್ಲು! ಅಯ್ಯೋ! ಎಂತಹ ಕಷ್ಟ!

ಆದರೂ ವಿಠಲನು ಕೈಯಲ್ಲಿದ್ದ ದೊಣ್ಣೆಯಿಂದ ತಲೆಯ ಮೇಲಿನ ಆ ಗುಂಡನ್ನು ಒಳಕ್ಕೆ ಬೀಳದಂತೆ ತಡೆದುದಲ್ಲದೆ ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಅದನ್ನು ಒಂದು ಪಕ್ಕಕ್ಕೆ ಚಿಮ್ಮಲು ಯತ್ನಿಸಿದನು. ದೈವಕೃಪೆಯಿಂದ ಆ ಗುಂಡಿನ ಮೇಲೆ ಮತ್ತೇನೂ ಭಾರವಿಲ್ಲದುದರಿಂದಲೂ ಅದೇ ಗುಡ್ಡದ ಮೇಲ್ಭಾಗವಾಗಿದ್ದುದರಿಂದಲೂ ಅದು ತಗ್ಗಾದಕಡೆಗೆ ಉರುಳಿಕೊಂಡು ಹೋಯಿತು. ಆಗ ಭೂಮಿ ಗುಡುಗಿದಷ್ಟು ಸೊಪ್ಪಳುಂಟಾಯಿತು. ಆ ಗುಂಡು ಮುಂದಕ್ಕೆ ಸರಿಯುವಾಗ ಮೇಲಿನಿಂದ ಸುಮಾರು ಒಂದು ಬಂಡಿಯಷ್ಟು ಜೆಲ್ಲಿ ಕಲ್ಲೂ ಮಣ್ಣೂ ಝುಲ್ಲನೆ ಒಳಕ್ಕೆ ಸುರಿಯಿತು. ವಿಠಲನು ಕಣ್ಣುಮುಚ್ಚಿಕೊಂಡನು. ಕೆಲವು ನಿಮಿಷಗಳ ನಂತರ ಕಣ್ತೆರೆದು ತಲೆಯೆತ್ತಿನೋಡಲು ಒಂದು ಮಾರಗಲದ ಆಕಾಶವೂ ಅದರಲ್ಲಿ ಸುಮಾರು ಐದಾರು ನಕ್ಷತ್ರಗಳೂ ಕಂಡುಬಂದುವು.

ಆಗ ತಾನು ಪುನಃ ತಾಯಿ ಗರ್ಭದಿಂದ ಜನಿಸಿ ಬಂದವನಂತೆ ಭೂಮಾತೆಯ ಗರ್ಭದಿಂದೀಚೆಗೆ ಹೊರಟುಬಂದು ಕುಳಿತನು. ಸುಮಾರು ಕಾಲು ಘಂಟೆ ಹೊತ್ತು ಜಗದೀಶ್ವರನನ್ನು ಧ್ಯಾನಿಸಿದನು. ತಾನು ಕುಳಿತಿದ್ದ ಸ್ಥಳದ ಬಳಿಯಲ್ಲೇ ರೈಲುರಸ್ತೆಯಿದ್ದಿತು. ವಿಠಲನು ಅಲ್ಲಿಂದ ಒಂದು ಕಾಲುಹಾದಿಯ ಮೂಲಕ ಹೊರಟನು.

ಇನ್ನು ಮುಂದಕ್ಕೆ ಆ ಹತ್ಯಾಕಾರಿಗಳನ್ನು ದಸ್ತಗಿರಿ ಮಾಡುವವರೆಗೂ ವಾರಣನ ಮತ್ತು ತಿಲಮೆಯ ಶವಗಳು ಅಲ್ಲೇ ಇರಲೆಂದುಕೊಂಡನಲ್ಲದೆ ತನ್ನನ್ನು ಕೊಠಡಿಯಲ್ಲಿ ಕೂಡಿ ಬೀಗ ಹಾಕಿಕೊಂಡು ಹೋದ ಆ ಕಾವಲುಗಾರನು ಮಾಧವಾದಿಗಳಿಗೆ ಈ ಸುದ್ದಿಯನ್ನು ಹೇಳುವುದಕ್ಕೆ ಪ್ರಾಯಶಃ ಪ್ರಯತ್ನಪಟ್ಟಿರಲಾರನೆಂದೂ ಸದ್ಯಃ ತನ್ನ ತಲೆಯುಳಿದರೆ ಸಾಕೆಂದು ಅವನೆಲ್ಲೋ ದೇಶಾಂತರ ಓಡಿಹೋಗಿರಬೇಕೆಂದೂ ಊಹಿಸಿಕೊಂಡು ನಿಶ್ಚಿಂತೆಯಾಗಿ ಸುಮಾರು ಬೆಳಗಿನ ಆರುಘಂಟೆಯ ವೇಳೆಗೆ ತನ್ನ ಆಫೀಸಿಗೆ ಬಂದುಬಿಟ್ಟನು.

---

# ಹತ್ತೊಂಭತ್ತನೆಯ ಪರಿಚ್ಛೇದ

ವಿಠಲನು ತನ್ನ ಆಫೀಸಿಗೆ ಬಂದಕೂಡಲೆ ವಾರಣನು ತಂದುಕೊಟ್ಟಿದ್ದ ಲಕ್ಕೋಟೆಯನ್ನೊಡೆದು ನೋಡಿಕೊಂಡನು. ಅದರಲ್ಲಿ ತನ್ನ ಪಾಪಕೃತ್ಯಗಳನ್ನೆಲ್ಲ ಒಪ್ಪಿಕೊಂಡು ಬರೆದಿಟ್ಟ ಕಾಗದವಿದ್ದಿತು. ವಿಠಲನು ಅದನ್ನು ಬಹು ಕುತೂಹಲದಿಂದ ಓದಿಕೊಂಡನು. ಆಕಾಗದದಲ್ಲಿ ಆ ನಿರ್ಭಾಗ್ಯ ಸ್ತ್ರೀಯು ತಾನು ಮಾಡಿದ ನರಹತ್ಯ ಮುಂತಾದ ಎಲ್ಲಾ ಪಾಪಕೃತ್ಯಗಳನ್ನೂ ಮತ್ತು ವನಜಚಂದ್ರನಿಗೆ ಒಡನಾಡಿಯಾಗಿ ಬಾಳುತ್ತಿದ್ದ ರಹಸ್ಯವನ್ನೂ ಸಹ ಬರೆದಿದ್ದಳು. ಆದರೆ ಕಾಂತನಾಥನನ್ನು ಕೊಲೆಮಾಡಿದ ಕ್ರೂರಕೃತ್ಯದ ವಿಷಯವಾಗಿ ಏನೇನಿದೆಯೋ ತಿಳಿಯಬೇಕೆಂದು ವಿಠಲನಿಗೆ ಬಲು ಆಸೆ. ವಿಠಲನು ನಟೇಶನ ಕಡೆ ತಿರುಗಿ—ನಟೇಶ, ನಾನು ಜನ್ಮಪ್ರಭೃತಿಯಾಗಿ ಎಂದೂ ಎಲ್ಲೂ ನೋಡದಂತಹ ನೀಚವಾದೀಘೋರಕೃತ್ಯವನ್ನು ನಡೆಯಿಸಿರುವ ಬಹುಪತಿವ್ರತಾಶಿರೋಮಣಿಯಾದ ಅವಳ ಒಪ್ಪಿಕೆಯ ಕಾಗದವೇ ಇದು.

ನಟೇಶ—ಏನು ಹೇಳುತ್ತಾಳೆ ?

ವಿಠಲ—ಆ ಕಾಗದವನ್ನೇ ಓದಿಬಿಟ್ಟರೆ ಮೇಲಲ್ಲವೆ ?

ನಟೇಶ—ಆಗಬಹುದು.

ವಿಠಲ—" ಈಗ್ಗೆ ಹಿಂದೆ ಎರಡುವರ್ಷಗಳವರೆಗೂ ನನ್ನ ವಲ್ಲಭನಾಗಿದ್ದ ವನಜನು ತನ್ನ ತಂದೆಯಾದ ಚಾರುಚಂದ್ರನಿಗೆ ಪ್ರೀತಿಪಾತ್ರನಾಗಿಯೇ ಇದ್ದನು. ಆಗ ನನ್ನನ್ನು ಕಂಡರೆ ಯಾರಿಗೂ ಲಕ್ಷ್ಯವಿರಲಿಲ್ಲ. ನಾನು ಶಾಸ್ತ್ರೋಕ್ತವಾಗಿ ಮದುವೆಯಾದವಳಲ್ಲವಾಗಿ ಎಲ್ಲರೂ ನನ್ನನ್ನು ತಾತ್ಸಾರವಾಗಿ ಕಾಣುತ್ತಿದ್ದರು. ಕಡೆಗೆ ಚಾರುಚಂದ್ರನಿಗೆ ವನಜಚಂದ್ರನಲ್ಲಿ ಪ್ರೀತಿಯು ಕಡಿಮೆಯಾಗಿ ಕಿರೀಮಗನಲ್ಲೇ ಮಮತೆ ಹೆಚ್ಚುತ ಬಂದಿತು. ಅಲ್ಲದೆ ಆ ಕಾಂತನಾಥನು ತನ್ನ ಅಜ್ಜನ ವಾತ್ಸಲ್ಯವನ್ನು ಪೂರ್ಣವಾಗಿ ಸಂಪಾದಿಸಿಕೊಂಡಿದ್ದುದರಿಂದ ಆತನು ಅವನಿಗೆ ಒಂದು ಪಚ್ಚೆಯ ಪೆಟ್ಟಿಗೆಯನ್ನು ಕೊಟ್ಟಿದ್ದನು. ಅದು ಬಹು ಅಮೂಲ್ಯವಾದುದು. ಅದರಲ್ಲಿ ಅದ್ಭುತವಾದ ಅನೇಕ ಮಹಿಮೆಗಳೂ ಹಲವು ತತ್ವಗಳೂ ಉಂಟೆಂದು

ಲೋಕನೆಲ್ಲ ಕೂಗುತ್ತಿದೆ. ಆದರೆ ಅದು ಯಾರಹತ್ತಿರವಿರುವುದೋ ಅವರನ್ನೇ ಬಲಿಯಾಗಿ ತೆಗೆದುಕೊಳ್ಳುವುದೆಂಬ ಒಂದು ದುನರ್ಾವುೂ ಉಂಟು. ಆ ಪೆಟ್ಟಿಗೆಯನ್ನು ತಾನು ಪಡೆದುಕೊಳ್ಳಬೇಕೆಂದು ವನಜನಿಗೆ ತುಂಬ ಆಶೆಯಿದ್ದುದರಿಂದ ಅವನು ಕಾಂತನಾಥನನ್ನು ದ್ವೇಷಿಸುತ್ತ ಬಂದನು ಆದರೆ ಕಾಂತನಾಥನೇನೋ ಅವನಲ್ಲಿ ಯಾವ ಅಸೂಯೆಯನ್ನೂ ಇಟ್ಟುಕೊಂಡಿರಲಿಲ್ಲ. ಮತ್ತು ವನಜನಿಗೆ ಎಂತೆಂತಹ ಆಪತ್ಕಾಲಗಳಲ್ಲೂ ತಾನೇ ಸಹಾಯಮಾಡಿದ್ದನು.

ನಾನು ನನ್ನ ಯೌವನವುದಕ್ಕೆ ಪರಿವಶಳಾಗಿ ದುಡುಕಿ ತಂದೆಯ ಪ್ರೀತಿಯನ್ನು ಕಳೆದುಕೊಂಡು ಆತನ ಅಗ್ರಹಕ್ಕೆ ಪಾತ್ರಳಾದೆ. ಆದುದರಿಂದ ನನಗೆ ಆತನು ಕೇಡನ್ನೇ ಹಾರಯಿಸುತ್ತಿದ್ದನು. ವನಜನ ತಾಯಿಯು ಪರದೇಶದಿಂದ ಚಾರುಚಂದ್ರನಿಗೆ ಒಂದು ಕಾಗದವನ್ನು ಬರೆದಿದ್ದಳು. ಅದನ್ನು ವನಜನೇ ಒಡೆದು ನೋಡಿಕೊಂಡನು. ಅದು ತನ್ನ ಪ್ರಾಣಕ್ಕೇ ಮೃತ್ಯುವಾಗಿದ್ದುದರಿಂದ ಆ ಕಾಗದವನ್ನು ಚಾರುಚಂದ್ರನಿಗೆ ಕೊಡಲಿಲ್ಲವಲ್ಲದೆ ಕಾಂತನಾಥನನ್ನೂ ಚಾರುಚಂದ್ರನನ್ನೂ ಕೊಲ್ಲಿಸಬೇಕೆಂದು ಯೋಚಿಸಿದನು. ಈ ವಿಷಯಕ್ಕೆ ನಾನೂ ಸಲಹೆ ಹೇಳಿದುದಲ್ಲದೆ ಸಾಧ್ಯವಾದಮಟ್ಟಿಗೂ ಇದು ಪತ್ತೆಯಾಗದಂತೆ ನಾವು ಬಲು ಎಚ್ಚರದಿಂದಿರಬೇಕೆಂಬುದನ್ನೂ ತಿಳಿಸಿದೆನು. ನನಗೆ ಅನೇಕ ವಿಷಗಳ ಸ್ವರೂಪವೂ ಅವುಗಳನ್ನು ಪ್ರಯೋಗಿಸುವ ವಿಧಾನವೂ ಚೆನ್ನಾಗಿ ಗೊತ್ತುಂಟು. ಮತ್ತು ಮಳೆಯಾಳ ದೇಶದ ಮಂತ್ರತಂತ್ರಗಳಲ್ಲೂ ಮಾಟಕೂಟಗಳಲ್ಲೂ ನಾನು ಕೇವಲ ಅನುಭವಶಾಲಿನಿ. ಈ ವಿಧದಿಂದ ನಾನು ಎಷ್ಟೋ ಜನರನ್ನು ಆಹುತಿ ತೆಗೆದುಕೊಂಡಿದ್ದೇನೆ.

ಕಾಂತನಾಥನು ನವನಗರಿಗೆ ಹೋಗಿದ್ದಾಗ ಅಲ್ಲಿ ಕೋಟೀಶ್ವರನ ಮಗಳೂ ಅತ್ಯಂತ ರೂಪವತಿಯೂ ಆದ ಒಬ್ಬ ಕನ್ಯಕೆಯನ್ನು ವರಿಸಿ ಲಗ್ನಮಾಡಿಕೊಳ್ಳುವುದಾಗಿ ಮಾತುಕೊಟ್ಟು ತನ್ನ ತಂದೆಯ ಮತ್ತು ಅಣ್ಣನ ಅನುಮತಿಗೋಸ್ಕರ ಆ ಹುಡುಗಿಯ ಭಾವಚಿತ್ರವನ್ನು (Photo) ಕಳುಹಿಸಿ ಒಂದು ಕಾಗದವನ್ನು ಬರೆದು ಕಳುಹಿಸಿದನು. ಅದೇ ದಿನವೇ ವನಜನ ತಾಯಿಯು ಮರಣ ಕಾಲದಲ್ಲಿ ಚಾರುಚಂದ್ರನಿಗೆ ಬರೆದಿದ್ದ ಕಾಗದವೂ ಬಂದಿತ್ತು.

ಆ ಹುಡುಗಿಯನ್ನು ವನಜನೂ ಎಂದೋ ನೋಡಿದ್ದನಂತೆ. ಅಲ್ಲದೆ ಅವಳ ಭಾವಚಿತ್ರವೂ ಬಂದಿದ್ದಿತು. ಆ ಕನ್ಯಕೆಯು ನಮ್ಮ ವನಜನಿಗೆ ಪರಮಾಪ್ತನಾದ ಭಾಸ್ಕರನ ಪತ್ನಿ ಸೌದಾಮಿನಿಯಂತೆಯೇ ಇದ್ದಳೆಂದು ತಾಳೆ ನೋಡಿಕೊಂಡುದಾಯಿತು. ಸೌದಾಮಿನಿಯ ಅಣ್ಣನಾದ ಮಾಧವನೂ ನಮ್ಮ ಗುಂಪಿನಲ್ಲಿ ಬಹು ಮುಖ್ಯವಾದ ಮನುಷ್ಯ. ಈ ಜನಗಳೆಲ್ಲ ದುಡ್ಡಿನಾಶೆಯುವರು. ಅದೊಂದು ದೊರೆಯುವುದಾದರೆ ಯಾವ ಕೆಲಸವನ್ನಾದರೂ ಹೇಸದೆ ಮಾಡಿಬಿಡತಕ್ಕವರು.

ಕಾಂತನಾಥನನ್ನು ನೋಡಬೇಕೆಂದು ಅವನ ತಾಯಿ ಕಾಗದ ಬರೆಸಿದುದರಿಂದ ಕಾಂತನಾಥನು ಲಲಿತಪಟ್ಟಣಕ್ಕೆ ಹಿಂದಿರುಗಿ ಬರುತ್ತಿದ್ದನು. ಅವನು ಅಲ್ಲಿಗೆ ಬಂದಮೇಲೆ ಸಾವಕಾಶವಾಗಿ ಕೊಲ್ಲುವಂತಹ ವಿಷವನ್ನು ಪ್ರಯೋಗಿಸಿ ಪುನಃ ನವನಗರಿಗೆ ಕರೆದುಕೊಂಡುಹೋಗಿ ಅಲ್ಲಿ ಅವನ ಇಷ್ಟಾನುಸಾರವಾಗಿ ಮದುವೆಯನ್ನು ಮಾಡಿಸಿಬಿಡಬೇಕೆಂದೂ, ಬಳಿಕ ಆ ಸೌದಾಮಿನಿಯೇ ಆ ಹುಡುಗಿಯೆಂದು ನಟಿಸಬೇಕೆಂದೂ, ತರುವಾಯ ಹೇಗಾದರೂ ಮಾಡಿ ಆ ಹುಡುಗಿಯು (ಪ್ರಫುಲ್ಲೆಯು) ತಂದೆಯ ಮನೆಯ ಆಸ್ತಿಗೂ ಹಕ್ಕುದಾರಳಾಗಬೇಕೆಂದೂ ಆಲೋಚನೆ ಮಾಡಿದೆವು.

ಕಾಂತನಾಥನು ಲಲಿತಪಟ್ಟಣಕ್ಕೆ ಬಂದನು. ನಾನು, ಸೌದಾಮಿನಿ, ಭಾಸ್ಕರ, ಮಾಧವ ಎಲ್ಲರೂ ಸೇರಿದೆವು. ನಾನು ಆ ಕಾಂತನಾಥನಿಗೂ ಚಾರುಚಂದ್ರನಿಗೂ ವಿಷವನ್ನು ಸಿದ್ಧಪಡಿಸಿಕೊಟ್ಟೆನು. ಕಾಂತನಾಥನು ದಿನ ದಿನಕ್ಕೂ ಬಾಡುತ್ತ ಬಂದನು. ಅವನು ಘನವೈದ್ಯರಿಂದಲೇ ಚಿಕಿತ್ಸೆ ಪಡೆದನಾದರೂ ಒಂದೂ ಅವನಿಗೆ ಪ್ರಯೋಜನಕಾರಿಯಾಗಲಿಲ್ಲ. ಮಾಧವ-ಭಾಸ್ಕರರು ಕಾಂತನಾಥನಿಗೆ ಎರಡನೆಯ ಪ್ರಾಣವೋ ಎಂಬ ಮಟ್ಟಿಗೂ ಅವನೊಡನೆ ಸ್ನೇಹವನ್ನು ಬೆಳೆಸಿದರು. ಅವನಿಗೂ ಅವರಲ್ಲಿ ಬಹುಪ್ರೀತಿ ಹುಟ್ಟಿ ತನ್ನ ಅಂತರಂಗದ ಆಲೋಚನೆಗಳಲ್ಲೆಲ್ಲ ಅವರ ಸಲಹೆಯನ್ನೇ ಅನುಸರಿಸುತ ಬಂದನು. ಆ ಮಧ್ಯೆ ಅವನು ಸಾಯುವ ಹಾಗಾಗಲು ಸಮುದ್ರಯಾನ ಮಾಡಿದರೆ ಆ ಹವದಿಂದ ಗುಣವಾಗುವುದೆಂದೂ ಇದಕ್ಕಾಗಿ ನವನಗರಕ್ಕೆ ಹೋಗುವುದು ಮೇಲೆಂದೂ ಮಾಧವಭಾಸ್ಕರರು ಪ್ರೇರಿಸಿದರು.

ಕಾಂತನಾಥನು ಆಗ ನನ್ನನ್ನಾಗಲಿ ಸೌದಾಮಿನಿಯನ್ನಾಗಲಿ ನೋಡ ಲಿಲ್ಲ. ಅವನಿಗೆ ಯಾವ ಸಂಶಯವೂ ತೋರಲಿಲ್ಲ. ಆದರೆ ಮಾಧವನೇನೋ ನಿತ್ಯವೂ ತಪ್ಪದೆ ಅವನಿಗೆ ವಿಷಪ್ರಯೋಗ ಮಾಡುತಲೇ ಇದ್ದನು. ತನ್ನಗತಿ ಹೀಗಾಗುವುದೆಂಬುದನ್ನು ಕಾಂತನಾಥನು ತಾನು ವರಿಸಿದ್ದ ಹೆಣ್ಣಿ (ಪ್ರಫುಲ್ಲೆ)ಗೆ ತಿಳಿಸಿರಲಿಲ್ಲ. ಕಾಂತನಾಥ, ಮಾಧವ, ಭಾಸ್ಕರ, ಮತ್ತು ಕಾಂತನಾಥನ ಸೇವಕನಾದ ಹನುಮಂತ ಇಷ್ಟು ಜನವೂ ಜಹಜಿನಲ್ಲಿ ನವನಗರಿಗೆ ಹೊರಟರು. ನಾನೂ ಸೌದಾಮಿನಿಯೂ ಮತ್ತೊಂದು ಜಹಜಿನಲ್ಲಿ ಹೊರಟೆವು. ಚಾರುಚಂ ದ್ರನನ್ನು ಕೊಲ್ಲುವುದಕ್ಕೋಸ್ಕರ ವನಜನನ್ನು ಲಲಿತಪಟ್ಟಣದಲ್ಲಿಯೇ ಬಿಟ್ಟು ಬಂದೆವು. ಕಾಂತನಾಥನ ಬಳಿಯಲ್ಲೇ ಪಚ್ಚೆಯ ಪೆಟ್ಟಿಗೆಯಿದ್ದಿತು. ಅದನ್ನು ಅವನು ಯಾವಾಗ್ಲೂ ತನ್ನ ಹತ್ತಿರವೇ ಇಟ್ಟುಕೊಂಡು ಬಲು ಜೋಕೆಯಾಗಿ ನೋಡಿಕೊಳ್ಳುತಿದ್ದನು. ಮಾಧವನು ಕಾಂತನಾಥನಿಗೆ ಪ್ರಾಣಪ್ರಿಯನಾದ ಮುಖ್ಯಮಂತ್ರಿ. ನವನಗರಿಗೆ ಬಂದನಂತರ............ನೇ ನಂಬರು ಮನೆ ಯನ್ನು ಬಾಡಿಗೆಗೆ ತೆಗೆದುಕೊಂಡರು. ಕಾಂತನಾಥನು ಮಾಧವನ ಮೂಲಕ ಪ್ರಫುಲ್ಲೆಗೆ ಹೇಳಿಕಳುಹಿಸಿ ಅವಳು ತನ್ನನ್ನು ಮದುವೆಯಾಗಬೇಕೆಂದು ಕೋರಿ ದನು. ಅವಳು ಒಪ್ಪಿದಳು.

ಆಗ ಕಾಂತನಾಥನಿಗೆ ಕೇವಲ ನಿಶ್ಶಕ್ತಿ. ಆ ದಿನ ತಾನು ಇನ್ನು ಕೆಲವು ಗಂಟೆಗಳ ಮೇಲೆ ಉಳಿಯಲಾರೆನೆಂದು ತಿಳಿದುಕೊಂಡನು. ಮಾಧವಭಾಸ್ಕ ರರು ಎಲ್ಲೋ ಹೊರಕ್ಕೆ ಹೋಗಿದ್ದಾಗ ಕಾಂತನಾಥನು ತನ್ನ ಸೇವಕನಾದ ಹನು ಮಂತನ ಕೈಯಲ್ಲಿ ಒಂದು ಕಾಗದವನ್ನೂ ಆ ಪಚ್ಚೆಯ ಪೆಟ್ಟಿಗೆಯನ್ನೂ ಸಹ ಆ ಹುಡುಗಿಗೆ ಕಳುಹಿಸಿದನು. ಇದು ಅವನು ಸತ್ತಮೇಲೆ ತಿಳಿಯಿತು. ಆ ದಿನ ರಾತ್ರಿಯಾಯಿತು. ಅವನು ಅಷ್ಟು ದುರ್ಬಲನಾಗಿದ್ದರೂ ಮಾಧವ ಭಾಸ್ಕರರ ಸಂಗಡ ಕುದುರೆಯ ಸಾರೋಟಿನಲ್ಲಿ ಹೊರಕ್ಕೆ ಹೋಗಿ ಪ್ರಫುಲ್ಲೆಯನ್ನು ವಿವಾಹ ಮಾಡಿಕೊಂಡನು. ಸುಮಾರು ಒಂದು ಘಂಟೆಯೊಳಗಾಗಿ ಎಲ್ಲರೂ (ಪ್ರಫು ಲ್ಲೆವಿನಾ) ಹಿಂದಕ್ಕೆ ಬಂದರು. ಬರುವಾಗ್ಗೆ ಕಾಂತನಾಥನು ಗಾಡಿಯಲ್ಲೇ ಸತ್ತುಬಿದ್ದಿದ್ದನು.

ಅದುವರೆಗೂ ನಾನೂ ಸೌದಾಮಿನಿಯೂ ಬೇರೆ ಮನೆಯಲ್ಲಿಳಿದುಕೊಂಡಿ ದ್ದೆವು. ಆಗ ನಮ್ಮನ್ನೂ ಅಲ್ಲಿಗೆ ಕರೆಯಿಸಿಕೊಂಡರು. ಕಾಂತನಾಥನ ಶವವು

ಮನೆಗೆ ಬರುವಾಗ್ಗೆ ನಾವು ಅಲ್ಲಿಗೆ ಬಂದೆವು. ಕಾಂತನಾಥನದೇಹವು ಆಗ್ಗೆ ಇನ್ನೂ ಸ್ವಲ್ಪ ಬೆಚ್ಚಗಿದ್ದಿತು. ನಾಡಿಯು ಅತ್ಯಂತ ದುರ್ಬಲವಾಗಿದ್ದಿತು. ಆ ಮನೆಯ ಹಿಂದುಗಡೆ ಹಿತ್ತಲಿನಲ್ಲಿ ಒಂದು ಆಳವಾದ ಕಾಲುವೆಯಲ್ಲಿ ಸರ್ವದಾ ನೀರು ಹರಿಯುತ್ತಿದ್ದಿತು. ಕಾಂತನಾಥನ ದೇಹವನ್ನು ಅದರೊಳಕ್ಕೆ ಹಾಕಿಬಿಟ್ಟರೆ ಅದು ಸಮುದ್ರದೊಳಕ್ಕೆ ಹೊಡೆದುಕೊಂಡು ಹೋಗುವುದೆಂದು ಭಾಸ್ಕರನು ಸೂಚಿಸಿದನು. ಆರೀತಿಯಾಗಿಯೇ ಎಸೆದುದಾಯಿತು.''

ಆ ಕಾಗದದಲ್ಲಿ ಇಷ್ಟುಮಾತ್ರವಲ್ಲದೆ ತಿಲವೆುಯು ಇತರ ಖೂನಿಗಳ ವಿಷಯದಲ್ಲಿ ಅಂದರೆ ಮುಖ್ಯವಾಗಿ—ವಾರಣಲಾಲನನ್ನು ಕೊಲ್ಲುವ ವಿಷಯದಲ್ಲಿ ತಾನು ಒಪ್ಪಿದುದನ್ನೂ, ಅವನಲ್ಲಿ ಪ್ರೇಮವನ್ನು ತೋರಿಸಿ ಮರುಳುಮಾಡಿದ ಬಗೆಯನ್ನೂ ತನ್ನ ತಂದೆಯಾದ ಪಲ್ಲವನನ್ನು ಕೊಂದು ಆ ಶವವನ್ನು ಇತ್ಯರ್ಥ ಮಾಡುವುದಕ್ಕೆ ಮಾಧವ ಭಾಸ್ಕರರನ್ನು ನೇಮಿಸಿದುದನ್ನೂ ವಿಶದವಾಗಿ ಬರೆದಿದ್ದಳು.

ವಾರಣನ ಕಾಗದದಲ್ಲಿ ಹೆಚ್ಚು ವಿಷಯಗಳೇನೂ ಇರಲಿಲ್ಲ. ಅವನು ಅದುವರೆಗೆ ತಾನು ಮಾಡಿದ್ದ ಕೆಲಸಗಳನ್ನೆಲ್ಲ ಕಾಣಿಸಿದ್ದನಲ್ಲದೆ ಇನ್ನುಮುಂದೆ ಯಾವಾಗಲಾದರೂ ಒಂದುವೇಳೆ ತನ್ನ ತಂಗಿಯು ಸಿಕ್ಕಿದರೆ ತನ್ನ ಆಸ್ತಿಯೆಲ್ಲಾ ಅವಳಿಗೆ ಸೇರುವಂತೆ ನೋಡಿಕೊಳ್ಳಬೇಕೆಂದು ಯಜಮಾನ ವಿಠಲಮೂರ್ತಿಯನ್ನು ಪ್ರಾರ್ಥಿಸಿಕೊಂಡಿದ್ದನು.

ನಾಗೇಶನ ವಾಙ್ಮೂಲ, ವನಜಚಂದ್ರನು ನ್ಯಾಯವಾದ ಹಕ್ಕುದಾರನಲ್ಲವೆಂಬುದಕ್ಕೆ ಬಂದ ರುಜುವಾತುಗಳು, ತಿಲವೆುಯು ಮರಣಕಾಲದಲ್ಲಿ ಬರೆದಿಟ್ಟಿದ್ದ ಪತ್ರಿಕೆ, ಇನ್ನೂ ಇತರ ಸಾಧನ (ಎವಿಡೆನ್ಸ್) ಗಳು ಇವೆಲ್ಲ ಈಗ ವಿಠಲನ ಕೈಗೆ ಸಿಕ್ಕಿದವು. ಲಲಿತಪಟ್ಟಣದಲ್ಲಿರುವ ತನ್ನಕಡೆಯ ಪತ್ತೆದಾರನಿಂದ ಸಮಾಚಾರ ಬರಬೇಕಾದುದೊಂದೇ ಬಾಕಿ.

ಈ ಮಧ್ಯೆ ವನಜಚಂದ್ರನೂ ನವನಗರಕ್ಕೆ ಬಂದಿರುವನೆಂದು ತಿಳಿಯಲು ವಿಠಲನ ಸಂತೋಷಕ್ಕೆ ಪಾರವೇ ಇರಲಿಲ್ಲ.

ವಿಠಲ—ನಟೇಶ, ಈಗೇನುಹೇಳುತ್ತೀಯೆ ? ನಾನು ಈ ಮೊಕದ್ದಮೆಯನ್ನು ಬಿಡದೆ ಸಾಧಿಸಿದುದು ಮೇಲಾಗಲಿಲ್ಲವೆ ? ನೋಡು, ಇದುವರೆಗೆ ನನ್ನ ಪ್ರಾಣಕ್ಕೇನೂ ಕೊರತೆ ಬರಲಿಲ್ಲ.

ನಟೇಶ—ವಿಠಲ, ಇಷ್ಟಕ್ಕೇ ಹಿಗ್ಗಬೇಡ. ಆ ಹಾಳು ಕೆಟ್ಟಪೆಟ್ಟಿಗೆಯು ಇನ್ನೂ ನಿನ್ನ ವಶದಲ್ಲೇ ಇದೆ. ಮುಂದಕ್ಕೇನಾಗುವುದೋ ತಿಳಿಯದು. ಹೇಗೂ ನೀನೇನೋ ಆ ಪೆಟ್ಟಿಗೆಯನ್ನು ನಿನ್ನ ಸ್ವಂತಕ್ಕಿಟ್ಟುಕೊಳ್ಳಕೂಡದೆಂಬುದೇ ನನ್ನ ಇಷ್ಟ.

ಹೀಗೆ ಮಾತಾಡುತಿರುವಷ್ಟರಲ್ಲೇ ಟೆಲಿಗ್ರಾಫ್ ಜವಾನನು ಬಂದು ಒಂದು ಲಕ್ಕೋಟೆಯನ್ನು ತಂದುಕೊಟ್ಟನು. ವಿಠಲನು ಅದನ್ನು ಒಡೆದು ಗಟ್ಟಿಯಾಗಿ ಓದಿದನು.—" ಆದಿವಿಠಲನೆ, ವನಜಚಂದ್ರ, ಅವನ ಪ್ರಿಯಳು, ಮಾಧವ, ಭಾಸ್ಕರ, ಸೌದಾಮಿನಿ ಇವರನ್ನೆಲ್ಲ ಚಾರುಚಂದ್ರನ ಖೂನಿಯ ವಿಷಯವಾಗಿ ನೀನು ದಸ್ತಗಿರಿ ಮಾಡು. ಅವರು ವಿಷಪ್ರಯೋಗ ಮಾಡಿದ್ದರೆಂಬುದಕ್ಕೆ ನೀನು ಕೋರುವ ಸಾಧನ (ಎವಿಡೆನ್ಸ್) ಗಳೆಲ್ಲ ಸಿದ್ಧವಾಗಿವೆ. (ರುಜು) ಸುಶೀಲ."

ವಿಠಲನು ಅತಿ ಸಂತೋಷದಿಂದ ಕುರ್ಚಿಯಿಂದೆದ್ದು ಕುಣಿದಾಡುತ್ತ— ಇನ್ನುಮೇಲೆ ನಾವು ಮುಂದಕ್ಕಡಿಯಿಡಬಹುದು. ಈಗ ನಾಟಕದ ಕಡೆಯ ಅಂಕಕ್ಕೆ ಪ್ರಾರಂಭವಾಯಿತು. ಆ ದುರಾತ್ಮರೆಲ್ಲ ನಮ್ಮ ಬಲೆಗೆ ಸಿಕ್ಕಿದರು. ನನ್ನ ಸಲಕರಣೆಗಳೆಲ್ಲ ಸಿದ್ಧವಾಗಿವೆ. ಇನ್ನು ಅವರನ್ನು ದಸ್ತಗಿರಿ ಮಾಡುತ್ತೇನೆ.

ನಟೇಶ—ಹೇಗೆ ?

ವಿಠಲ—ನಾಳಿದ್ದು ಸೌದಾಮಿನಿಯು ಚಾರುಚಂದ್ರನ ಮರಣನಿಮಿತ್ತವಾಗಿ ವೈಕುಂಠಸಮಾರಾಧನೆ ಮಾಡಿಸುವಳು. ಹತ್ತುಬಗೆಯ ಭಕ್ಷ್ಯಗಳಂತೆ! ಈ ಪಟ್ಟಣದ ಎಲ್ಲಾ ದೊಡ್ಡಮನುಷ್ಯರಿಗೂ ಪ್ರಫುಲ್ಲೆಯ ಗೆಳತಿಯರಿಗೂ ಆಹ್ವಾನ ಪತ್ರಿಕೆಗಳನ್ನು ಬರೆಸಿ ಕಳುಹಿಸಿರುವಳು. ಮಾವನಾದ ನನಗೂ ಪತ್ತೆದಾರನಾದ ನಿನಗೂ ಔತಣ ಬಾರದಿರದು. ಅಲ್ಲಿಗೆ ದೊಡ್ಡ ದೊಡ್ಡ ಉದ್ಯೋಗಸ್ಥರನೇಕರು ಬರುವರು. ಸಾಮಾನ್ಯವಾಗಿ ವೈಕುಂಠ ಸಮಾರಾಧನೆಯ ಊಟಕ್ಕೋಸ್ಕರ

ಅಂತಹವರು ಬರುವುದು ಕಡಮೆಯೇ; ಆದರೂ ವಾರಣಲಾಲನ ಮನೆಯೊಂದ್ದು ಈ ಪಟ್ಟಣದಲ್ಲಿ ಗೌರವಿಸದಿದ್ದವರೇ ಇಲ್ಲ. ಇಷ್ಟರಮೇಲೆ ಪ್ರಫುಲ್ಲೆಯು ಮಹಾ ಗುಣಾಢ್ಯೆಯೆಂಬುದು ಲೋಕಪ್ರಸಿದ್ಧಿ. ಇದು ಅವಳೇ ಮಾಡಿಸುವ ಸತ್ಕಾರ ವೆಂದು ಜನರು ಭಾವಿಸುವರು.

ನಟೇಶ–ನೀನು ಅವರನ್ನು ಸೆರೆಹಿಡಿಯುವೆಯೋ ?

ವಿಠಲ–ಹೌದು. ಅಲ್ಲದೆ ಸತ್ತವರು ಬದುಕಿ ಬಂದಿರುವರೆಂಬ ಆಶ್ಚರ್ಯ ವಿಷಯವನ್ನು ಅತಿಥಿಗಳಿಗೆಲ್ಲ ತಿಳಿಸಿ ವ್ಯಕ್ತಿಗಳನ್ನು ಪ್ರತ್ಯಕ್ಷವಾಗಿ ತೋರಿಸುವುದ ಲ್ಲದೆ ಆ ಪಾಪಿಗಳು ಅನ್ಯಾಯವಾಗಿ ಕೊಲೆಮಾಡುತಿದ್ದುದನ್ನು ಎಲ್ಲರಿಗೂ ತಿಳಿಸಿ ಒಪ್ಪಿಸುತ್ತೇನೆ.

ನಟೇಶ–ಇದು ನನಗೆ ಭಯಂಕರವಾಗಿ ತೋರುವುದು.

ವಿಠಲ–ಆ ರಂಗಸ್ಥಳದಲ್ಲಿ ಏನಾಗಬಹುದೆಂಬುದನ್ನು ಊಹಿಸಿಕೊಂಡರೂ ಕೂಡ ರೋಮಾಂಚವಾಗಿ ಮೈಯೆಲ್ಲ 'ಜುಂ' ಎನ್ನುವುದು. ಉಂ, ಆಗಲಿ, ನಾನು ಸ್ವಲ್ಪಕಾಲ ಹಳ್ಳಿಯಕಡೆಗೆ ಹೋಗಿಬರುತ್ತೇನೆ. ನೀನು ದಸ್ತಗಿರಿ ಮಾ ಡುವುದಕ್ಕೆ ಎಲ್ಲವನ್ನೂ ಸಿದ್ಧಪಡಿಸಿಕೊಂಡಿರು.' ಎಂದು ಹೇಳಿ ಹದಿನಾರುವರ್ಷದ ಹುಡುಗನಿಗಿಂತ ಹೆಚ್ಚಾದ ಲವಲವಿಕೆಯಿಂದ ರಾಗ ಹೇಳಿಕೊಳ್ಳುತ್ತ ಒಂದೇ ಹೆಜ್ಜೆ ಯಲ್ಲಿ ರೈಲ್ವೆಸ್ಟೇಷನ್ನಿಗೆ ಹೋಗಿ ಅಲ್ಲಿಂದ ತನ್ನ ಜಹಗೀರು ಗ್ರಾಮಕ್ಕೆ ತೆರ ಳಿದನು.

ನೌಕಾಧ್ಯಕ್ಷನಾದ ಪಲ್ಲವನಿಗೆ ಚೆನ್ನಾಗಿ ವಾಸಿಯಾಗಿದ್ದಿತು. ಆತನೂ ಪ್ರಫು ಲ್ಲೆಯೂ ವಿಠಲನೂ ಆ ದಿನ ಮನೆಗೆ ಕರೆತಂದಿದ್ದ ಆ ಹೊಸಬನಾದ ತರುಣನೂ ಬಹು ಉಲ್ಲಾಸದಿಂದ ಕಾಲಕ್ಷೇಪ ಮಾಡುತ್ತಿದ್ದರು. ಪಲ್ಲವನಿಗೂ ಆ ತರುಣ ನಿಗೂ ಬಲು ಸ್ನೇಹ. ಅಲ್ಲಿ ಅವರು ಮೊದಲು ಒಬ್ಬರನ್ನೊಬ್ಬರು ನೋಡಿದಾಗ ಕೂಡ ಪರಸ್ಪರ ಹೊಸಬರಂತೆ ತೋರಲಿಲ್ಲ. ಆ ಯುವಕನು ತನ್ನ ಹೃದಯ ವನ್ನೆಲ್ಲ ಪ್ರಫುಲ್ಲೆಗೆ ಅಧೀನ ಮಾಡಿದ್ದನು. ಆಕೆಯೂ ಅದನ್ನು ಅಷ್ಟು ಜೋಕೆ ಯಿಂದ ನೋಡಿಕೊಳ್ಳುತಿದ್ದಳು.

ವಿಠಲನು ಅಲ್ಲಿಗೆ ಹೋಗಿ ಬಹು ದಿನವಾಗಿದ್ದಿತು. ಏನು ವಿಶೇಷ ಸಂಗತಿ ಗಳೋ ತಿಳಿಯಬೇಕೆಂಬುದಾಗಿ ಈ ಮೂವರಿಗೂ ಕೇವಲ ಕುತೂಹಲ. ಭೋಜನ ವಾದ ನಂತರ ವಿಠಲನು ಅವರೆಲ್ಲರೊಡನೆ ಕೊಠಡಿಯಲ್ಲಿ ಕುಳಿತು ನಡೆದ ಸಂಗ ತಿಯನ್ನೆಲ್ಲ, ವಾರಣ ಮತ್ತು ತಿಲವೊಯರ ಆತ್ಮಹತ್ಯವನ್ನು ಕೂಡ_ವಿಸ್ತರಿಸಿ ಹೇಳಿ ಕಡೆಯಲ್ಲಿ_ನಾಳೆ ನೀವೆಲ್ಲ ನವನಗರಿಗೆ ಹೊರಟು ಅಲ್ಲಿ ನಟೇಶನು ಹೇಳಿದಂತೆ ನಡೆದುಕೊಳ್ಳಿ. ನಾನು ಎಂದಿನಂತೆ ಸೋದರಮಾವ ವಾಗೀಶ ನಾಗಿ ಹೋಗಿ ಅವರ ಮನೆಯಲ್ಲೇ ಇಳಿಯುವೆನು. ನಟೇಶನು ನಿಮ್ಮನ್ನು ಅಲ್ಲಿಗೆ ಕರೆತರುವನು. ಸಮಯಸಿಕ್ಕಿದಾಗ ನೀವುಗಳು ಯಾರು ಎಂಬುದನ್ನು ನಾನು ಪ್ರಕಾಶಪಡಿಸುವೆನು.

ಪ್ರಫುಲ್ಲೆಯು ತನ್ನ ಸೋದರಮಾವನಾದ ವಾರಣಲಾಲನ ದುರ್ಮರಣ ಕ್ಕಾಗಿ ಬಹು ದುಃಖಪಟ್ಟಳು. ಅತ್ತಳು, ಚೀರಿದಳು. ವಿಧಿಯನ್ನು ದೂರಿದಳು. ಪಲ್ಲ ವನಾದರೋ ತನ್ನ ದತ್ತಪುತ್ರಿಯ ಮರಣವನ್ನು ಕೇಳಿದ ಕೂಡಲೆ ಜಗದೀಶ್ವರನು ಅಷ್ಟುಮಟ್ಟಿಗೆ ತನ್ನಮೇಲೆ ಅನುಗ್ರಹವಿಟ್ಟು ಆ ಪಾಪಸ್ತ್ರೀಯನ್ನು ಈ ಲೋಕ ದಿಂದ ಹೊರಕ್ಕೆ ಹೊರಡಿಸಿದನಲ್ಲಾ ಎಂದು ಸಂತೋಷಪಟ್ಟು ದೇವರನ್ನು ವಂದಿಸಿ ದನು. ವಿಠಲನು ಹೇಳುತ್ತಿದ್ದುದನ್ನೆಲ್ಲ ಆ ತರುಣನು ಶಾಂತನಾಗಿ ಕೇಳುತ್ತಿ ದ್ದನು. ವಿಠಲನು ಆ ಯುವಕನ ಹೆಸರು ಕುಲಚಂದ್ರನೆಂದು ಇದುವರೆಗೂ ಎಲ್ಲರ ಮುಂದೆಯೂ ಹೇಳುತಿದ್ದನೆಂಬುದು ನಮ್ಮ ವಾಚಕರಿಗೆಲ್ಲ ಪರಿಚಿತ ಪೂರ್ವವೇ ತಾನೆ. ಈಗ ಆ ತರುಣನು ವಿಠಲನ ರಟ್ಟೆಗಳನ್ನು ಹಿಡಿದುಕೊಂಡು_ ಅಯ್ಯಾ, ನೀನು ನಮಗೋಸ್ಕರ ಇಷ್ಟು ತೊಂದರೆಪಟ್ಟುಕೊಂಡು ಮಾಡಿರುವ ಉಪಕಾರಕ್ಕಾಗಿ ನಾವು ಎಷ್ಟು ಜನ್ಮಗಳಲ್ಲಿ ನಿನ್ನ ಸೇವಕರಾಗಿದ್ದರೂ ನಿನ್ನ ಋಣವು ತೀರದು.

ವಿಠಲ_ನೀವೇನೂ ನನಗೆ ಕೊಡಬೇಡಿ. ನಿಮ್ಮ ಕೃತಜ್ಞತೆ, ಮತ್ತು ಅನ್ಯಾಯವನ್ನು ನ್ಯಾಯಮಾಡಿರುವೆನೆಂಬ ನನ್ನ ನಂಬಿಕೆ, ಇವೆರಡೂ ನನಗೆ ಅಮೂಲ್ಯವಾದ ತೃಪ್ತಿಯೆಂಬ ಬಹುಮಾನವನ್ನು ದಯಪಾಲಿಸಿರುವುವು.

ಪ್ರಫುಲ್ಲೆ_ನೀನು ನನ್ನ ತಂದೆಗೆ ಪ್ರತಿ ತಂದೆ. ವಿಠಲ,

ವಿಠಲ—ಮಗು, ಆಗಲಿಯಮ್ಮ, ಇದುವರೆಗೂ ನಿಮ್ಮ ಸೋದರಮಾವ ನೆಂಬ ವೇಷವನ್ನು ಧರಿಸಿದ್ದೆ. ಇನ್ನುಮೇಲೆ ನಿನ್ನ ತಂದೆಯಂತಾಗಬೇಕೆನ್ನು ವೆಯೊ ?—ಎಂದು ಹೇಳಿ ನಗುತ್ತ ಅಭಿನಂದಿಸಿದನು. ಬಳಿಕ—ನಾನು ಮೊದಲು ಹೋಗುತ್ತೇನೆ. ನೀವೆಲ್ಲ ನನ್ನ ಆಫೀಸಿಗೆ ಹೋಗಿ ಈಗ ನಾನು ಹೇಳಿರುವಂತೆ ನಡೆದುಕೊಳ್ಳಿರಿ.

ವಿಠಲನು ಸರ್‍ರನೆ ಹೊರಟುಬಿಟ್ಟನು. ಪ್ರಫುಲ್ಲೆಯು ಅಣ್ಣನನ್ನು ನೆನೆಸಿ ಕೊಂಡು ಪುನಃ ಕಣ್ಣೀರಿಟ್ಟಳು. ಆ ತರುಣನು ಸಮಾಧಾನ ಹೇಳಿ ಆಕೆಯನ್ನು ಹರ್ಷಮಾರ್ಗಕ್ಕೆಳೆದನು.

---

## ಇಪ್ಪತ್ತನೆಯ ಪರಿಚ್ಛೇದ.

ಸೌದಾಮಿನಿಯು ಚಾರುಚಂದ್ರನಿಗೋಸ್ಕರ—ಇಲ್ಲ, ವನಜಮಿತ್ರನು ಲಲಿತ ಪಟ್ಟಣದಿಂದ ಬಂದುದಕ್ಕೋಸ್ಕರ, ಮಾಡಿದ ಔತಣವೇ ಇದು. ಇದೇ ಒಳಗಿನ ಆಶಯ. ಸಮಾರಾಧನೆಯನ್ನು ಮಾಡಿಸಿದ ದಿನವು ಬಹು ನಿರ್ಮಲವಾಗಿದ್ದಿತು. ಅದೇ ಸುದಿವಸ.

ವಿಠಲನು ಕಡುಬಿನ ಹೊತ್ತಿಗೆ ಪಿಡಗಿನಂತೆ ಅಗ್ಗ ಸರಿಯಾಗಿ ಸೋದರ ಮಾವನಾಗಿ ಬಂದಿಳಿದನು. ಇವನ ಮುಖವನ್ನು ಕಂಡಕೂಡಲೆ ಮಾಧವ ಭಾಸ್ಕರರಿಗೆ ಅನಿರ್ವಚನೀಯವಾದ ಸಂಕಟವುಂಟಾಯಿತು. ಅನ್ನುವುದಕ್ಕೂ ಆಗದು, ಅನುಭವಿಸುವುದಕ್ಕೂ ಆಗದು. ಮಾಧವನೂ ಸೌದಾಮಿನಿಯೂ ಬಂದು ವಾಗೀಶನನ್ನು ಕಪಟೋಪಚಾರಗಳಿಂದ ಸಂತಯಿಸಿದ ಬಳಿಕ ಆ ಮಾಧ ವನು ಒಬ್ಬ ಪರಿಚಾರಕನನ್ನು ನೋಡಿ ಮಾತಾಡುತಿದ್ದುದನ್ನು ವಿಠಲನು ಕಂಡು ಹಿಡಿದನು. ಆ ಪರಿಚಾರಕನು ತಮಿಳುದೇಶದವನು.

ಮಾಧವನು ಅವನ ಕಿವಿಯಲ್ಲಿ ಗುಟ್ಟಾಗಿ ಏನನ್ನೋ ಹೇಳಿ ಒಂದು ಕಾಗದದ ಪೊಟ್ಟಣವನ್ನು ಅವನ ಕೈಗೆ ಕೊಟ್ಟು ತಾನು ಬೇರೊಂದು ಕೊಠಡಿಗೆ ಹೊರಟ್ಟ.

ವಿಠಲನು ಅಲ್ಲಿಗೆ ಹೋಗಿ ಬಹು ದಿನವಾಗಿದ್ದಿತು. ಏನು ವಿಶೇಷ ಸಂಗತಿ ಗಳೋ ತಿಳಿಯಬೇಕೆಂಬುದಾಗಿ ಈ ಮೂವರಿಗೂ ಕೇವಲ ಕುತೂಹಲ. ಭೋಜನ ವಾದ ನಂತರ ವಿಠಲನು ಅವರೆಲ್ಲರೊಡನೆ ಕೊಠಡಿಯಲ್ಲಿ ಕುಳಿತು ನಡೆದ ಸಂಗ ತಿಯನ್ನೆಲ್ಲ, ವಾರಣ ಮತ್ತು ತಿಲಮೆಯರ ಆತ್ಮಹತ್ಯವನ್ನು ಕೂಡ_ವಿಸ್ತರಿಸಿ ಹೇಳಿ ಕಡೆಯಲ್ಲಿ-ನಾಳೆ ನೀವೆಲ್ಲ ನವನಗರಿಗೆ ಹೊರಟು ಅಲ್ಲಿ ನಟೇಶನು ಹೇಳಿದಂತೆ ನಡೆದುಕೊಳ್ಳಿ. ನಾನು ಎಂದಿನಂತೆ ಸೋದರಮಾವ ವಾಗೀಶ ನಾಗಿ ಹೋಗಿ ಅವರ ಮನೆಯಲ್ಲೇ ಇಳಿಯುವೆನು. ನಟೇಶನು ನಿಮ್ಮನ್ನು ಅಲ್ಲಿಗೆ ಕರೆತರುವನು. ಸಮಯಸಿಕ್ಕಿದಾಗ ನೀವುಗಳು ಯಾರು ಎಂಬುದನ್ನು ನಾನು ಪ್ರಕಾಶಪಡಿಸುವೆನು.

ಪ್ರಫುಲ್ಲೆಯು ತನ್ನ ಸೋದರಮಾವನಾದ ವಾರಣಲಾಲನ ದುರ್ಮರಣ ಕ್ಕಾಗಿ ಬಹು ದುಃಖಪಟ್ಟಳು. ಅತ್ತಳು, ಚೀರಿದಳು. ವಿಧಿಯನ್ನು ದೂರಿದಳು. ಪಲ್ಲ ವನಾದರೋ ತನ್ನ ಡತ್ತಪುತ್ರಿಯ ಮರಣವನ್ನು ಕೇಳಿದ ಕೂಡಲೆ ಜಗದೀಶ್ವರನು ಅಷ್ಟುಮಟ್ಟಿಗೆ ತನ್ನಮೇಲೆ ಅನುಗ್ರಹವಿಟ್ಟು ಆ ಪಾಪಸ್ತ್ರೀಯನ್ನು ಈ ಲೋಕ ದಿಂದ ಹೊರಕ್ಕೆ ಹೊರಡಿಸಿದನಲ್ಲಾ ಎಂದು ಸಂತೋಷಪಟ್ಟು ದೇವರನ್ನು ವಂದಿಸಿ ದನು. ವಿಠಲನು ಹೇಳುತ್ತಿದ್ದುದನ್ನೆಲ್ಲ ಆ ತರುಣನು ಶಾಂತನಾಗಿ ಕೇಳುತ್ತಿ ದ್ದನು. ವಿಠಲನು ಆ ಯುವಕನ ಹೆಸರು ಕುಲಚಂದ್ರನೆಂದು ಇದುವರೆಗೂ ಎಲ್ಲರ ಮುಂದೆಯೂ ಹೇಳುತಿದ್ದನೆಂಬುದು ನಮ್ಮ ವಾಚಕರಿಗೆಲ್ಲ ಪರಿಚಿತ ಪೂರ್ವವೇ ತಾನೆ. ಈಗ ಆ ತರುಣನು ವಿಠಲನ ರಟ್ಟೆಗಳನ್ನು ಹಿಡಿದುಕೊಂಡು— ಅಯ್ಯಾ, ನೀನು ನಮಗೋಸ್ಕರ ಇಷ್ಟು ತೊಂದರೆಪಟ್ಟುಕೊಂಡು ಮಾಡಿರುವ ಉಪಕಾರಕ್ಕಾಗಿ ನಾವು ಎಷ್ಟು ಜನ್ಮಗಳಲ್ಲಿ ನಿನ್ನ ಸೇವಕರಾಗಿದ್ದರೂ ನಿನ್ನ ಋಣವು ತೀರದು.

ವಿಠಲ—ನೀವೇನೂ ನನಗೆ ಕೊಡಬೇಡಿ. ನಿಮ್ಮ ಕೃತಜ್ಞತೆ, ಮತ್ತು ಅನ್ಯಾಯವನ್ನು ನ್ಯಾಯಮಾಡಿರುವೆನೆಂಬ ನನ್ನ ನಂಬಿಕೆ, ಇವೆರಡೂ ನನಗೆ ಅಮೂಲ್ಯವಾದ ತೃಪ್ತಿಯೆಂಬ ಬಹುಮಾನವನ್ನು ದಯಪಾಲಿಸಿರುವುವು.

ಪ್ರಫುಲ್ಲೆ-ನೀನು ನನ್ನ ತಂದೆಗೆ ಪ್ರತಿ ತಂದೆ. ವಿಠಲ,

ವಿಠಲ–ಮಗು, ಆಗಲಿಯಮ್ಮ, ಇದುವರೆಗೂ ನಿಮ್ಮ ಸೋದರಮಾವ ನೆಂಬ ವೇಷವನ್ನು ಧರಿಸಿದ್ದೆ. ಇನ್ನುಮೇಲೆ ನಿನ್ನ ತಂದೆಯಂತಾಗಬೇಕೆನ್ನು ವೆಯೊ ?–ಎಂದು ಹೇಳಿ ನಗುತ್ತ ಅಭಿನಂದಿಸಿದನು. ಬಳಿಕ–ನಾನು ಮೊದಲು ಹೋಗುತ್ತೇನೆ. ನೀವೆಲ್ಲ ನನ್ನ ಆಫೀಸಿಗೆ ಹೋಗಿ ಈಗ ನಾನು ಹೇಳಿರುವಂತೆ ನಡೆದುಕೊಳ್ಳಿರಿ.

ವಿಠಲನು ಸರ್ರನೆ ಹೊರಟುಬಿಟ್ಟನು. ಪ್ರಫುಲ್ಲೆಯು ಅಣ್ಣನನ್ನು ನೆನೆಸಿ ಕೊಂಡು ಪುನಃ ಕಣ್ಣೀರಿಟ್ಟಳು. ಆ ತರುಣನು ಸಮಾಧಾನ ಹೇಳಿ ಆಕೆಯನ್ನು ಹರ್ಷಮಾರ್ಗಕ್ಕೆಳೆದನು.

---

## ಇಪ್ಪತ್ತನೆಯ ಪರಿಚ್ಛೇದ.

ಸೌದಾಮಿನಿಯು ಚಾರುಚಂದ್ರನಿಗೋಸ್ಕರ–ಇಲ್ಲ, ವನಜಮಿತ್ರನು ಲಲಿತ ಪಟ್ಟಣದಿಂದ ಬಂದುದಕ್ಕೋಸ್ಕರ, ಮಾಡಿದ ಔತಣವೇ ಇದು. ಇದೇ ಒಳಗಿನ ಆಶಯ. ಸಮಾರಾಧನೆಯನ್ನು ಮಾಡಿಸಿದ ದಿನವು ಬಹು ನಿರ್ಮಲವಾಗಿದ್ದಿತು. ಅದೇ ಸುದಿವಸ.

ವಿಠಲನು ಕಡುಬಿನ ಹೊತ್ತಿಗೆ ಪಿಡಗಿನಂತೆ ಆಗ್ಗೆ ಸರಿಯಾಗಿ ಸೋದರ ಮಾವನಾಗಿ ಬಂದಿಳಿದನು. ಇವನ ಮುಖವನ್ನು ಕಂಡಕೂಡಲೆ ಮಾಧವ ಭಾಸ್ಕರರಿಗೆ ಅನಿರ್ವಚನೀಯವಾದ ಸಂಕಟವುಂಟಾಯಿತು. ಅನ್ನುವುದಕ್ಕೂ ಆಗದು, ಅನುಭವಿಸುವುದಕ್ಕೂ ಆಗದು. ಮಾಧವನೂ ಸೌದಾಮಿನಿಯೂ ಬಂದು ವಾಗೀಶನನ್ನು ಕಪಟೋಪಚಾರಗಳಿಂದ ಸಂತಯಿಸಿದ ಬಳಿಕ ಆ ಮಾಧ ವನು ಒಬ್ಬ ಪರಿಚಾರಕನನ್ನು ನೋಡಿ ಮಾತಾಡುತಿದ್ದುದನ್ನು ವಿಠಲನು ಕಂಡು ಹಿಡಿದನು. ಆ ಪರಿಚಾರಕನು ತಮಿಳುದೇಶದವನು.

ಮಾಧವನು ಅವನ ಕಿವಿಯಲ್ಲಿ ಗುಟ್ಟಾಗಿ ಏನನ್ನೋ ಹೇಳಿ ಒಂದು ಕಾಗದದ ಪೊಟ್ಟಣವನ್ನು ಅವನ ಕೈಗೆ ಕೊಟ್ಟು ತಾನು ಬೇರೊಂದು ಕೊಠಡಿಗೆ ಹೊರಟ್ಟು.

ಹೋದನು. ವಿಠಲನು ಪುಣ್ಯವಶಾತ್ ಇದನ್ನು ಕಂಡನು. ಪರಿಚಾರಕನು ಆ ಪುಡಿಯನ್ನು ಸ್ವಲ್ಪ ನೀರಿನಲ್ಲಿ ಬೆರೆಸಿ ಒಂದು ಲೋಟಕ್ಕೆ ಹಾಕಿ ಕಲಕುತ್ತಿದ್ದದನ್ನು ಅಡಿಗೆಯ ಮನೆಯ ಕಿಟಕಿಯ ಮೂಲಕ ಕಂಡಕೂಡಲೆ ಯಾರಿಗೋ ವಿಷಪ್ರಯೋಗ ನಡೆಯುವುದೆಂದು ವಿಠಲನು ಊಹಿಸಿದನು. ಇದನ್ನು ಯಾರಿಗೆ ಕೊಡುವರೋ ಎಂದು ಯೋಚಿಸುತ್ತಿರುವಷ್ಟರಲ್ಲೇ ಆ ಪರಿಚಾರಕನು ಬಂದು—ಸ್ವಾಮಿ, ಬಿಸಿಲಲ್ಲಿ ದಣಿದು ಬಂದಿದ್ದೀರಿ. ತಂಪಾದ ಈ ಪಾನಕವನ್ನು ಸ್ವೀಕರಿಸಿ, ಎಂದನು.

ವಿಠಲ—ಎಲಾ ತಮಿಳ, ನಿನ್ನ ದುರ್ವಿದ್ಯೆ ನನಗೆ ಗೊತ್ತುಂಟು. ನನ್ನಲ್ಲಿ ನಿನ್ನ ಚಮತ್ಕಾರ ನಡೆಯುವುದೆ ?

ಮೇಧಾವಿಯಾದ ಆ ತಮಿಳು ಹುಡುಗನು ಕೆಲವು ಕಾಲ ವಿಠಲನ ಬಳಿಯಲ್ಲಿ ಪರಿಚಾರಕನಾಗಿದ್ದುದರಿಂದ ಈಗ ಈ ಧ್ವನಿಯನ್ನು ಕಂಡಕೂಡಲೆ ಲೋಟವನ್ನು ಅಲ್ಲೇ ಎತ್ತಿ ಕುಕ್ಕಿ—ಅಯ್ಯೊ! ಇನ್ನೇನು ಗತಿ ! ಈತನು ವಿಠಲಮೂರ್ತಿ !—ಎಂದು ಅಳುತ್ತಾ ಓಡತೊಡಗಿದನು.

ವಿಠಲ—ಎಲಾ ! ಎಲ್ಲಿ ಹೋಗುವೆ ? ನಿಲ್ಲು. ನೀನು ನನ್ನ ಹಿಂದೆಯೇ ಬರಬೇಕು.

ತಮಿಳ—ಅಯ್ಯೋ ? ನನ್ನನ್ನೇನು ಮಾಡುವೆಯೊ !

ವಿಠಲ—ಬಾ. ಒಂದುಕಡೆಗೆ ಹೋಗಬೇಕು.

ತಮಿಳ—ನಾನು ಆ ದೊಡ್ಡಮನುಷ್ಯನ ಸಂಗಡ ಒಂದು ನಿಮಿಷದಮಟ್ಟಿಗೆ ಮಾತಾಡಿಕೊಂಡು ಬರಲೋ ?

ವಿಠಲ—ಯಾರೊಡನೆಯೂ ಮಾತಾಡಕೂಡದು.

ತಮಿಳ—ಅಪ್ಪಣೆಯಂತೆ.

ವಿಠಲನು ಹಿಂದುಗಡೆಯ ಬಾಗಿಲಿಂದ ಆ ಪಾನಪಾತ್ರೆಯ ಸಮೇತ ಹೋಗಿ ಒಬ್ಬ ಆಫೀಸರ ವಶದಲ್ಲಿ ವ್ಯೈಗಾವಲಿನಲ್ಲಿಡಿಸಿದನು.

ನಟೇಶನು ಪ್ರತಿಯೊಂದನ್ನೂ ಒಹು ಶ್ಲಾಘ್ಯವಾಗಿ ಏರ್ಪಡಿಸಿದ್ದನು. ಮನೆಯ ಒಳಗೂ ಹೊರಗೂ ಅಧಿಕಾರಿಗಳು ಭೋಜನಕ್ಕೆ ಬಂದ ಅತಿಥಿಗಳಂತೆ ವೇಷಧಾರಿಗಳಾಗಿ ತುಂಬಿದ್ದುದರಿಂದ ಈ ಕೊಲೆಪಾತಕಿಗಳಲ್ಲಿ ಯಾರೊಬ್ಬರೂ ತಪ್ಪಿಸಿಕೊಂಡು ಓಡುವುದಕ್ಕೆ ಆಸ್ಪದವಿರಲಿಲ್ಲ. ಅತಿಥಿಗಳೆಲ್ಲ ಮನೋಹರವಾಗಿ ಉಡುಗ ತೊಡಿಗೆಗಳನ್ನು ಧರಿಸಿ ತಂಡತಂಡವಾಗಿ ಬರುತ್ತಿದ್ದರು.

ಸೌದಾಮಿನಿಯು ಕೆಂಬೂತದಂತೆ ಇಲ್ಲಿಂದಲ್ಲಿಗೂ ಅಲ್ಲಿಂದಿಲ್ಲಿಗೂ ನಡೆಯುತ್ತಲೂ ವೈಯ್ಯಾರದಿಂದ ಕುಲುಕುತ್ತಲೂ 'ಅತ್ತೆಯಮೇಲೆ ಕಣ್ಣು, ಅಂಗಡಿಯ ಮೇಲೆ ನೋಟ' ಎಂಬಂತೆ ಪುರುಷರಕಡೆ ದೃಷ್ಟಿ ಸ್ತ್ರೀಯರಸಂಗಡ ಮಾತು ಮಾಧವ್ಯ ಭಾಸ್ಕರರ ಕಿವಿಯಲ್ಲಿ ಬಾಯಿ ಈ ರೀತಿಯಾಗಿ ಬೆಡಗುಮಾಡುತ್ತಲೂ ಇದ್ದಳು. ಇನ್ನೊಂದು ಘಳಿಗೆಯೊಳಗಾಗಿ ತಮ್ಮ ಗತಿಯೇನಾಗುವುದೆಂಬುದನ್ನು ಆ ಮೂವರಲ್ಲಾರೊಬ್ಬರೂ ಮುಂದರಿತಿರಲಿಲ್ಲ,

ಅತಿಥಿಗಳೆಲ್ಲ ಬಂದು ಸೇರಿದಾಗ ನಟೇಶನು ವಿಠಲನಿಗೊಂದು ಕಾಗದವನ್ನು ಬರೆದು–ಬರಬೇಕಾದವರೆಲ್ಲ ಬಂದರು. ಎವಿಡೆನ್ಸುಗಳೂ ಪಚ್ಚೆಯ ಪೆಟಗೆಯೂ ಸಿದ್ಧವಾಗಿವೆ–ಎಂದು ತಿಳಿಸಿದನು. ವಿಠಲನು ಆ ಕಾಗದವನ್ನು ತಂದಿದ್ದವನನ್ನು ಕುರಿತು–ಅಯ್ಯಾ, ಪ್ರತಿಬಾಗಿಲಲ್ಲೂ ಬಲವಾದ ಕಾವಲಿಡಬೇಕೆಂದೂ, ನಾನು ಹೇಳಿಕಳುಹಿಸಿದ ಕೂಡಲೆ ಆ ಜನರನ್ನು ಒಳಕ್ಕೆ ಕರೆತರಬೇಕೆಂದೂ, ನಟೇಶನಿಗೆ ತಿಳಿಸು ಎಂದನು.

ವಿಠಲನು ಹಿಂದುಗಡೆಯ ಕೊಠಡಿಯಲ್ಲಿ ಶಿಲಾವಿಗ್ರಹದಂತೆ ನಿಶ್ಚಲನಾಗಿ ನಿಂತು ನಟೇಶನ ಉತ್ತರವನ್ನು ನಿರೀಕ್ಷಿಸುತ್ತಿದ್ದನು. ಅದೂ ಬಂದಿತು. ಹೊರಗೆ ಪ್ರಫುಲ್ಲೆ ಮುಂತಾದವರು ಅಂಗರಕ್ಷಕರೊಡನೆ ಬಂದಿರುವುದು ಗೊತ್ತಾಯಿತು. ವಿಠಲನು ತನ್ನ ಕೃತಕವೇಷಕ್ಕಾಗಿ ಕಟ್ಟಿಕೊಂಡಿದ್ದ ಗಡ್ಡ ಮುಂತಾದುವನ್ನು ಬಿಚ್ಚಿ ಕೈಲಿ ಹಿಡಿದುಕೊಂಡು ಬಾಗಿಲಕಡೆಗೆ ತಿರುಗಿ ಪ್ರಫುಲ್ಲೆಯನ್ನು ಕೈಸನ್ನೆ ಮಾಡಿ ಕರೆದನು. ಪ್ರಫುಲ್ಲೆಯೂ ಆ ಜನರೂ ಒಳಕ್ಕೆ ಪ್ರವೇಶಿಸಿದರು. ಆಗ ವಿಠಲನು ಅವರೊಡನೆ ಮಧ್ಯದ ಹಾಲಿಗೆ ಹೋಗಿ ನಿಂತು ಸಿಂಹದಂತೆ ಗಂಭೀರ ಗರ್ಜನೆಯಿಂದ–ಎಲೈ ಮಹಾತ್ಮರಾದ ಸ್ತ್ರೀಪುರುಷರುಗಳಿರಾ, ಈಗ ನೀವು ಮಹಾ

ಸಾಹಸಿಗಳೂ ಕೊಲೆಪಾತಕಿಗಳೂ ಆದ ಕಳ್ಳರ ಗುಂಪಿಗೆ ಸಿಕ್ಕಿಬಿದ್ದಿದ್ದೀರಿ. ಇಗೋ ನೋಡಿ. ತಮ್ಮ ಅಪ್ಪಣೆಯಾದರೆ ಲಲಿತಪಟ್ಟಣದ ಚಾರುಚಂದ್ರನ ನಿಜವಾದ ಪುತ್ರನನ್ನೂ ಆತನ ಧರ್ಮಪತ್ನಿಯನ್ನೂ ತೋರಿಸುತ್ತೇನೆ ಎಂದನು.

ಹೀಗೆ ಸತ್ತುಹೋದ ಮನುಷ್ಯನನ್ನು ತೋರಿಸುತ್ತೇನೆಂದೂ ಇರುವವಳಿಗೆ ಪ್ರತಿಯಾಗಿ ಮತ್ತೊಬ್ಬಳನ್ನು ಕರೆತಂದಿರುವೆನೆಂದೂ ವಿಠಲನು ಆಡಿದ ಮಾತಿಗೆ ಎಲ್ಲರೂ ಬೆರಗಾಗಿ ಮೂಗಿನಮೇಲೆ ಬೆರಳಿಟ್ಟುಕೊಂಡು ಸ್ತಬ್ಧರಾದರು. ಆಗಿನ ಸ್ಥಿತಿಯನ್ನು ವರ್ಣಿಸಿ ಬರೆಯುವುದು ಎಂತಹವರಿಗೂ ಅಸಾಧ್ಯ. ಅಂತು ಎಲ್ಲರಿಗೂ ಅಷ್ಟು ಆಶ್ಚರ್ಯವುಂಟಾಯಿತು. ಸೌದಾಮಿನಿಯು ನೋಡಿದಳು. ತನ್ನ ಅಸಲುಮೂರ್ತಿಯಾದ ಸ್ತ್ರೀವ್ಯಕ್ತಿಯನ್ನು ಕಂಡಳು. ವನಜಮಿತ್ರ ಮಾಧವ ಭಾಸ್ಕರರು ಈ ಮೂವರೂ ಚೆನ್ನಾಗಿ ನೋಡಿ ಕಾತರಸ್ವರದಿಂದ–ಅಯ್ಯೋ ! ದೇವರೇ ! ಕಾಂತನಾಥನು ಸಾಯಲಿಲ್ಲವಲ್ಲಾ! ಎಂದು ನಿಟ್ಟುಸಿರಿಟ್ಟರು.

ಇವರುಗಳು ಊಹಿಸಿದುದು ದಿಟ. ಕಾಂತನಾಥನು ಸಾಯಲಿಲ್ಲ. ಈ ಪಾಪಿಗಳು ಅವನ ದೇಹವನ್ನು ಕಾಲುವೆಯಲ್ಲೆಸೆದಾಗ ಅದು ನದಿಗೆ ಬಿದ್ದು ತನ್ಮೂಲಕ ಸಮುದ್ರಕ್ಕೆ ಹೊಡೆದುಕೊಂಡು ಹೋಗುತಿದ್ದಿತು. ಅಗ್ಗೆ ಸರಿಯಾಗಿ ಶ್ರೀಮತಿಯ ಯಜಮಾನನಾದ ಪಲ್ಲವನು ತೀರದಿಂದ ತನ್ನ ಜಹಜಿನ ಕಡೆಗೆ ದೋಣಿಯಲ್ಲಿ ಹೋಗುತಿದ್ದವನು ಇವನನ್ನು ಕಂಡನು. ಆಗ ಆ ದೇಹದಲ್ಲಿ ಇನ್ನೂ ಪ್ರಾಣನಾಡಿಯು ಅತಿ ಸೂಕ್ಷ್ಮವಾಗಿ ಆಡುತಿದ್ದಿತು. ಪಲ್ಲವನು ಅನೇಕ ವಿಧವಾದ ವಿಷಗಳ ಸ್ವರೂಪವನ್ನೂ ಅವುಗಳ ಪ್ರತೀಕಾರ ವಿಧಾನಗಳನ್ನೂ ತನ್ನ ಮಗಳಿಗಿಂತ ಚೆನ್ನಾಗಿ ಬಲ್ಲವನಾದುದರಿಂದ ವಿಷಪ್ರಯೋಗದಿಂದಲೇ ಹೀಗಾಗಿರುವುದೆಂದು ತಿಳಿದು ತಕ್ಕ ಚಿಕಿತ್ಸೆಗಳಿಂದ ಬೆರಣಿಯ ಬೂದಿಯಂತಿದ್ದ ಆ ದೇಹದಲ್ಲಿ ನೊಂದಿ ಹೋಗುತಿದ್ದ ಪ್ರಾಣಾಗ್ನಿಯನ್ನು ಪುನಃ ಪ್ರಜ್ವಲಿಸುವಂತೆ ಮಾಡಿ ತನ್ನ ಶ್ರಮವು ಸಾರ್ಥಕವಾದುದಕ್ಕೆ ಕೇವಲ ಹರ್ಷಗೊಂಡನು. ಕಾಂತನಾಥನಿಗೆ ಮಾತಾಡುವಷ್ಟು ಚೈತನ್ಯ ಬಂದಮೇಲೆ ಆತನು ತನ್ನ ಚರಿತ್ರೆಯನ್ನೆಲ್ಲ ಪಲ್ಲವನಿಗೆ ವಿಸ್ತರಿಸಿ ಹೇಳಲು ಪಲ್ಲವನು ಆತನು (ಕಾಂತನಾಥನು) ಶ್ರೀಮಂತ ಚಾರುಚಂದ್ರನ ಮಗನೆಂದು ತಿಳಿದು ಮತ್ತಷ್ಟು ಹೆಚ್ಚಾಗಿ ಆನಂದಪಟ್ಟನು.

ಕಾಂತನಾಥನು ಇನ್ನೂ ಕೇವಲ ದುರ್ಬಲನಾಗಿದ್ದುದರಿಂದ ಆತನು ಪಲ್ಲವನಂ ಕುರಿತು—ನೀನು ನವನಗರಿಯಲ್ಲಿ ಪ್ರಸಿದ್ಧ ಪತ್ತೆದಾರನಾದ ವಿಠಲಮೂರ್ತಿಯೆಂಬಾತನ ಬಳಿಗೆ ಹೋಗಿ ಈ ಸಂಗತಿಯನ್ನೆಲ್ಲ ಹೇಳುವುದಲ್ಲದೆ ಆ ನನ್ನ ಪಚ್ಚೆಯ ಪೆಟ್ಟಿಗೆಯ ಮತ್ತು ಪ್ರಫುಲ್ಲೆಯ ವಿಷಯವನ್ನು ಜಾಗರೂಕತೆಯಿಂದ ನೋಡಿಕೊಂಡು ಈ ಕ್ರಿಮಿನಲ್ ಮೊಕದ್ದಮೆಯನ್ನು ನಡೆಯಿಸುವಂತೆ ದಯವಿಟ್ಟು ಏರ್ಪಡಿಸು ಎಂದು ಬೇಡಿಕೊಂಡಿದ್ದನು.

ಪಲ್ಲವನಿಂದ ತಿಳಿದ ರಹಸ್ಯಾಂಶವನ್ನು ವಿಠಲನು ಈ ಕೊನೆಯ ದಿನದವರೆಗೆ ನಟೇಶನಿಗೆ ಕೂಡ ತಿಳಿಸದೆ ಗೋಪ್ಯವಾಗಿಟ್ಟಿದ್ದು ಇವನೇ ಕಾಂತನಾಥನೆಂದು ಪ್ರತ್ಯಕ್ಷವಾಗಿ ವ್ಯಕ್ತಿಯನ್ನು ತೋರಿಸಿದ ಬಳಿಕ ಇದನ್ನು ಹೇಳಿದನು.

ಆ ದಿನ ಸಾಯಂಕಾಲ ಅರಣ್ಯದ ಮಧ್ಯೆ ವಿಠಲನು ನೋಡಿದ ತರುಣನೇ ಕಾಂತನಾಥ. ಅದಕ್ಕೆ ಮೊದಲು ಅವನನ್ನು ವಿಠಲನು ಎಂದೂ ಎಲ್ಲೂ ನೋಡಿರಲಿಲ್ಲ. ಪ್ರಫುಲ್ಲೆಯು ವಿಠಲನ ವಶದಲ್ಲಿ ಸುರಕ್ಷಿತಳಾಗಿರುವಳೆಂಬುದನ್ನು ಕಾಂತನಾಥನು ರಹಸ್ಯವಾಗಿ ವಿಚಾರಿಸಿಕೊಂಡು ಒಂದುದಿನ ವಿಠಲನು ಇಲ್ಲದಾಗ ಆ ಹಳ್ಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲ ಪ್ರಫುಲ್ಲೆಗೆ ತಿಳಿಯಿಸಿದ್ದನು. ಪತಿಯು ಸಾಯಲಿಲ್ಲವೆಂದು ಪ್ರಫುಲ್ಲೆಯು ತನ್ನ ಸೌಮಂಗಲ್ಯವನ್ನು ಕೊಂಡಾಡಿಕೊಳ್ಳುತ ಸುಖವಾಗಿದ್ದಳು. ಈ ರಹಸ್ಯವನ್ನು ವಿಠಲನಿಗೂ ತಿಳಿಯಪಡಿಸಬಾರದೆಂದು ಈ ದಂಪತಿಗಳು ಯೋಚಿಸಿಕೊಂಡಿದ್ದರು. ಸೂಕ್ಷ್ಮಗ್ರಾಹಿಯಾದ ವಿಠಲಮಹಾಶಯನು ಇದನ್ನೂ ಪತ್ತೆಮಾಡಿಬಿಟ್ಟನು. ವಿಠಲನು ಆ ತರುಣನಿಗೂ ಪ್ರಫುಲ್ಲೆಗೂ ಪರಿಚಯಮಾಡಿಸುವ• ಸಂದರ್ಭದಲ್ಲಿ ಆತನ ಹೆಸರು ಕುಲಚಂದ್ರನೆಂದು ತಿಳಿಸಲು ವಿಠಲನಿಗೆ ಆತನು ಯಾರೆಂಬ ನಿಜವಾದ ಸಂಗತಿಯೇ ಗೊತ್ತಿಲ್ಲವೆಂದೂ ಅದು ತಮ್ಮ ದಂಪತಿಗಳಿಷ್ಟಕ್ಕೆ ಪ್ರತಿಬಂಧಕವಲ್ಲವೆಂತಲೂ ಪ್ರಫುಲ್ಲೆಯು ಭ್ರಾಂತಳಾಗಿದ್ದಳು. ಈಗ ಕಾಂತನಾಥನು ವನಜಚಂದ್ರನ ಕೊಲೆಪಾತಕತನವನ್ನು ಕೇಳಿದೊಡನೆಯೇ ಎದೆಬಿಚ್ಚಿಹೋದವನಂತೆ ಬೆಚ್ಚಿದನು.

ಪ್ರಫುಲ್ಲೆ, ಕಾಂತನಾಥ, ವಿಠಲ, ಇವರ ಹಿಂದೆ ಕೈಕಟ್ಟಿಕೊಂಡು ನಿಂತಿದ್ದ ಪಲ್ಲವ, ಹಲಗೂರು ಚಿನ್ನದ ಥೋಡಗಳನ್ನು ತೊಟ್ಟು ಒಬ್ಬ ಆಫೀಸರ ವಶದಲ್ಲಿ

ರುವ ನಾಗೇಶ, ಇವರುಗಳನ್ನು ಈ ಪಿತೂರಿಗಾರರೆಲ್ಲ ಕಂಡರೊ ಇಲ್ಲವೋ! ಪಲಾಯನ ಸೂಕ್ತಪಾರಾಯಣಕ್ಕೆ ಪ್ರಾರಂಭ ಮಾಡಿದರು. ಆದರೆ ಅವರು ನಿಂತಿದ್ದ ಸ್ಥಳದಿಂದ ಆಚೆಗೆ ಎರಡು ಹೆಜ್ಜೆಯಿಟ್ಟು ನಡೆಯುವುದಕ್ಕೂ ಕೂಡ ಅವ ಕಾಶವಿಲ್ಲದಂತೆ ಆಗಲೆ ಸಿದ್ಧರಾಗಿ ಬಂದು ನಿಂತಿದ್ದ ಆಫೀಸರುಗಳು ಅವರ ಮಣಿಕಟ್ಟುಗಳಿಗೆ ಆಯಸ್ಕಂಕಣಗಳನ್ನು ತೊಡಿಸಲು ಹೊರಟರು.

ವಿಠಲನು ತಾನೇ ಸ್ವತಃ ಎರಡು ಆಯಸ್ಕಂಕಣಗಳನ್ನು ತೆಗೆದುಕೊಂಡು ವನಜನಿಗೆ ತೊಡಿಸುವುದಕ್ಕೆ ಹೋಗಲು ಅವನು ದೀನಸ್ವರದಿಂದ–ಇದೇನು ಈ ಕೆಲಸ ? ಎಂದನು.

ವಿಠಲ–ಏನೆನ್ನುತ್ತೀಯೋ ? ನೀನು ಚಾರುಚಂದ್ರನನ್ನು ಕೊಲೆ ಮಾಡಿಸಿ ದುದಕ್ಕೋಸ್ಕರ ನಿನ್ನನ್ನು ನಾನು ದಸ್ತಗಿರಿ ಮಾಡಿದೇನೆ–ಎಂದು ಹೇಳಿ ತೊಡಿಸಿ ದುದಲ್ಲದೆ ಮಾಧವ ಭಾಸ್ಕರರಿಗೂ ಅದೇ ಮರ್ಯ್ಯಾದೆಯನ್ನು ಮಾಡಿ ತಿರಸ್ಕಾರ ಭಾವದಿಂದ ಅವರ ಕಡೆಗೆ ಬೆರಳು ತೋರಿಸುತ್ತ–ನೀವುಗಳು ಕೊಲೆಗೆಲಸಗಳಿಗೆ ಒಳಸಂಚಾದುದರಿಂದಲೂ ಶ್ರೀಮಂತ ಕಾಂತನಾಥನ ಸೇವಕನಾದ ಹನುಮಂತ ನನ್ನು ಕೊಂದುದರಿಂದಲೂ ನಿಮ್ಮನ್ನು ದಸ್ತಗಿರಿ ಮಾಡಿದೇನೆ. ಈ ಹತ್ಯಾಕೃತ್ಯವು ನಿಮ್ಮಿಬ್ಬರನ್ನೂ ಗಲ್ಲಿಗೆ ಕಳುಹಿಸುವುದು ಸಿದ್ಧ–ಎಂದನು.

ಸೌದಾಮಿನಿಯು ಅಭೀತಳಾಗಿ ನಿಂತಿದ್ದಳು. ಧೈರ್ಯದಲ್ಲಿ ಪುರುಷರಿ ಗಿಂತ ಅವಳೇ ಮೇಲು. ವಿಠಲನು ಮಾತಾಡುತ್ತಿದ್ದಾಗ ಅವಳು ಕೇವಲ ವಿಲ ಕ್ಷಿತಳಾಗಿದ್ದರೂ ಮಂದಹಾಸದಿಂದ ತನ್ನ ಪ್ರಸನ್ನತೆಯನ್ನು ನಟಿಸುತ್ತಿದ್ದಳು. ವಿಠಲನು ಸುಮ್ಮನಾದ ಮೇಲೆ ಸೌದಾಮಿನಿಯು ಜನಮಂಡಲಿಯನ್ನು ಕುರಿತು ಗಟ್ಟಿಯಾಗಿ–ನಾನು ಏನೋ ಒಂದು ದೊಡ್ಡ ಫಲಕ್ಕಾಗಿ ಈ ಕೆಲಸ ಮಾಡಿದೆ. ಆದರೆ ಅದು ತಪ್ಪಿಹೋಯಿತು. ಈಗ ಯಾವ ಶಿಕ್ಷೆಗೆ ಬೇಕಾದರೂ ಸಿದ್ಧವಾಗಿ ದೇನೆ–ಎಂದಳು.

ಈಗ ಆ ಬಂದಿಗಳನ್ನೂ ಹೊರಕ್ಕೆ ಕರೆದುಕೊಂಡು ಹೋದರು. ತರು ವಾಯ ವಿಠಲನು ನಟೇಶನನ್ನು ಕುರಿತು–ಅಯ್ಯ, ಎಲ್ಲಿ ? ಆ ಪೆಟ್ಟಿಗೆಯನ್ನು ಈಗ ಎಲ್ಲರ ಮುಂದೆಯೂ ಇಟ್ಟು ತೋರಿಸು ಎಂದನು.

ನಟೇಶನು ಗಡಗಡನೆ ನಡುಗುತ ಅದನ್ನು ಅಲ್ಲಿ ತಂದಿಟ್ಟು ಬೀಗ ತೆಗೆದು ಮರದ ಸಂದೂಕದಿಂದ ಹೊರದೆಗೆದನು.

ವಿಠಲ—ಈಗ ಚಾರುಚಂದ್ರನ ಮನೆತನದಲ್ಲಿ ನ್ಯಾಯವಾದ ಹಕ್ಕುದಾರನಾದ ಕಾಂತನಾಥನು ಮಹಾ ಅದ್ಭುತವಾದ ಈ ಪೆಟ್ಟಿಗೆಯನ್ನು ತೆರೆಯುವನು. ಎಲ್ಲರೂ ನೋಡಿ. ಇದರಲ್ಲಿ ಏನೋ ರಹಸ್ಯವಿರುವುದೆಂದು ಅನೇಕ ವರ್ಷಗಳಿಂದ ಪ್ರತೀತಿಯುಂಟು. ಈಗ ಅದನ್ನೆಲ್ಲ ಪರೀಕ್ಷಿಸಬಹುದು.—ಎಂದು ಹೇಳಿ ವಿಠಲನು ಆ ಪೆಟ್ಟಿಗೆಯ ಕಥೆಯನ್ನೆಲ್ಲ ಆಮೂಲಾಗ್ರವಾಗಿ ವಿಸ್ತರಿಸಿದುದಲ್ಲದೆ ಅದರ ವಿಷಯವಾಗಿ ಆಗಾಗ್ಗೆ ತನಗೂ ನಟೇಶನಿಗೂ ಉಂಟಾಗುತಿದ್ದ ವಾಗ್ವಾದವನ್ನೂ ಒಂದು ರಾತ್ರಿ ತಾವಿಬ್ಬರೂ ಅದನ್ನು ತೆರೆಯಲೆಳೆಸಿದಾಗ ಕಂಡ ಅದ್ಭುತವನ್ನೂ ಅಲ್ಲಿದ್ದವರಿಗೆಲ್ಲಾ ತಿಳಿಸಿದನು.

ಕಾಂತನಾಥನು ಪೆಟ್ಟಿಗೆಯನ್ನು ತೆರೆಯುವುದಕ್ಕೆ ಹೋದನು. ಪ್ರಫುಲ್ಲೆಯು ಗಡಗಡನೆ ನಡುಗುತ್ತ ತನ್ನ ಪತಿಯ ಬೆನ್ನನ್ನು ಹಿಡಿದುಕೊಂಡು ನಿಂತಳು. ತೆರೆದುದಾಯಿತು. ಆ ಸಂದೂಕದ ನಾನಾ ಪಾರ್ಶ್ವಗಳಿಂದಲೂ ಹೊಗೆಯು ಹೊರಡಹತ್ತಿತು. ಎಲ್ಲರೂ ನಿಶ್ಶಬ್ದವಾಗಿ ಬಂದು ಅದರ ಸುತ್ತಲೂ ನಿಂತು ನೋಡಿದರು. ಸ್ಪಷ್ಟವಾಗಿ ಈ ಅಕ್ಷರಗಳು ಕಾಣಬಂದುವು. “ ಈಗ ರಹಸ್ಯವು ಪ್ರಕಟವಾಯಿತು,”

ಉತ್ತರಕ್ಷಣದಲ್ಲೇ ಹೊಗೆ ನಿಂತುಹೋಯಿತು. ಆ ಪೆಟ್ಟಿಗೆಯೊಡೆದು ಸಾವಿರಾರು ಚೂರಾಗಿ ಸಿಡಿದು ಸುತ್ತಲೂ ಚದುರಿತು. ಒಳಗೆ ಒಂದು ಉಕ್ಕಿನ ಪೆಟ್ಟಿಗೆಯಿದ್ದಿತು. ಕಾಂತನಾಥನು ಅದನ್ನೂ ತೆರೆದನು. ಒಳಗೆ ಒಂದು ಪಾರ್ಶ್ವದಲ್ಲಿ ಕೈಬರಹವುಳ್ಳ ಒಂದು ಸನ್ನದೂ ಮತ್ತೊಂದು ಕಡೆ ಅನರ್ಘ್ಯವಾದ ಅನೇಕ ರತ್ನಗಳೂ ಇದ್ದುವು. ಆ ಸನ್ನದನ್ನು ಚೆನ್ನಾಗಿ ಪರಿಶೀಲಿಸಿ ನೋಡಲು “ ಸತ್ಯವೇ ನಿತ್ಯ. ಅನ್ಯಾಯವೇ ಅಪಾಯ ” ಎಂದು ಬರೆದಿದ್ದಿತು.

ಆ ಪೆಟ್ಟಿಗೆಯ ಚೂರುಗಳನ್ನೆಲ್ಲ ಆರಿಸಿ ಅನೇಕ ವಿಧವಾದ ಕನ್ನಡಕಗಳ ಮೂಲಕ ಪರೀಕ್ಷಿಸಿ ನೋಡಲು ಅದು ಸರ್ವೋತ್ತಮವಾದ ಪಚ್ಚೆಯ ರತ್ನವೆಂದು ಗೊತ್ತಾಯಿತು. ಕಾಂತನಾಥನು ಅವುಗಳಲ್ಲೊಂದನ್ನೂ ಬಿಡದೆ ಎಲ್ಲವನ್ನೂ

ಪೆಟ್ಟಿಗೆಯಲ್ಲಿಟ್ಟು ಭದ್ರಪಡಿಸಿದನು. ಮತ್ತು ಒಳಗಿದ್ದ ಆ ದಿವ್ಯರತ್ನಗಳಲ್ಲಿ ಉತ್ತಮವಾದ ಮೂರನ್ನು ಪಲ್ಲವ, ವಿಠಲ ಮತ್ತು ನಟೇಶ ಇವರುಗಳಿಗೆ ಹಂಚಿ ಉಳಿದುದನ್ನು ಪ್ರಫುಲ್ಲೆಯ ವಶಕ್ಕೆ ಕೊಟ್ಟನು. ಆಕೆಯು ಅದನ್ನು ಪ್ರಣಾಮಪೂರ್ವಕವಾಗಿ ಸ್ವೀಕರಿಸಿದಳು. ಬಂದಿದ್ದ ಅತಿಥಿಗಳೆಲ್ಲ ಮೇಲಾದ ಸತ್ಕಾರಗಳನ್ನು ಸ್ವೀಕರಿಸಿ ಸಂತೋಷಪೂರ್ವಕವಾಗಿ ತಮ್ಮ ತಮ್ಮ ಗೃಹಗಳಿಗೆ ತೆರಳಿದರು. ವಾರಣನ ಮತ್ತು ತಿಲಮೆಯ ದೇಹಗಳನ್ನು ಒಪ್ಪಮಾಡುವುದಕ್ಕೂ, ಉತ್ತರಕ್ರಿಯಾದಿಗಳಿಗೂ ಸಹ ವಿಠಲನು ಸರಿಯಾದ ಏರ್ಪಾಡು ನಡೆಸಿದನು. ನವನಗರಿಯ ನ್ಯಾಯಸ್ಥಾನದಲ್ಲಿ ವಿಚಾರಣೆ ನಡೆದು ಮಾಧವ ಭಾಸ್ಕರರು ಕಾಂತನಾಥನ ಸೇವಕನಾದ ಹನುಮಂತನನ್ನು ಕೊಂದವರೆಂದು ದೃಢಪಟ್ಟುದರಿಂದ ಅವರಿಬ್ಬರಿಗೂ ಮರಣದಂಡನೆಯು ವಿಧಿಸಲ್ಪಟ್ಟಿತು. ಸೌದಾಮಿನಿಗೂ ನಾಗೇಶನಿಗೂ ಆಮರಣಾಂತವಾದ ಕಾರಾಗೃಹವಾಸಶಿಕ್ಷೆಯಾಯಿತು. ವನಜಚಂದ್ರನನ್ನು ವಿಚಾರಣೆಗೋಸ್ಕರ ಲಲಿತಪಟ್ಟಣಕ್ಕೊಯ್ದರು. ಆ ಪುಣ್ಯಭೂಮಿಯಲ್ಲಿ ಅದುವರೆಗೂ ಯಾರೂ ಪಿತೃವಧೆಗೈದವರಿರಲಿಲ್ಲವಾಗಿ ಈ ಮೊಕದ್ದಮೆಯನ್ನು ಕೇಳಿದೊಡನೆಯೇ ಅಲ್ಲಿ ಜನಗಳಲ್ಲೆಲ್ಲಾ ಹಾಹಾಕಾರ ಹುಟ್ಟಿತು. ಎಲ್ಲರೂ ಕಣ್ಣೀರಿಟ್ಟರು. ಅವನಿಗೂ ಶೂಲಶಾಂತಿಯಾಯಿತು.

ಈ ಭಯಂಕರವಾದ ನಾಟಕದಲ್ಲಿ ಉಪಪಾತ್ರರಾಗಿದ್ದವರಲ್ಲಿ ಇಂಗಾಲ ಸುಂದರನು ಪರಾರಿಯಾದನು. ನಳಿನಿಯು ನಿರಾತಂಕವಾಗಿದ್ದಳು. ಉಳಿದವರು ನಿರ್ಭಯವಾಗಿ ತಮ್ಮ ತಮ್ಮ ದುರ್ವ್ಯಾಪಾರಗಳನ್ನು ಮಾಡಿಕೊಂಡು ಇದ್ದೇ ಇದ್ದರು. ಕಾಂತನಾಥನೂ ಪ್ರಫುಲ್ಲೆಯೂ ಕ್ರಮವಾಗಿ ತಂದೆಯ ಮತ್ತು ಸಹೋದರನ ಮರಣ ದುಃಖ ಶಾಂತಿಗೋಸ್ಕರವೂ ಪರಲೋಕದಲ್ಲಿ ಅವರುಗಳಿಗೆ ಸದ್ಗತಿಯುಂಟಾಗುವುದಕ್ಕೋಸ್ಕರವೂ ತೀರ್ಥ ಯಾತ್ರೆಗಳನ್ನು ಮಾಡಲೆಳಸಿ ಕಾಶಿ, ಪ್ರಯಾಗ, ಗಯೆ, ಮಧುರಾ, ಗೋಕುಲ, ಬೃಂದಾವನ, ಬದರೀನಾರಾಯಣ ಮೊದಲಾದ ಉತ್ತರ ದೇಶದ ಪುಣ್ಯಕ್ಷೇತ್ರಗಳಲ್ಲೂ ಗೋಕರ್ಣ, ಜಗನ್ನಾಥ, ನಾಸಿಕ, ಕಂಚಿ, ರಾಮೇಶ್ವರ, ಅನಂತಶಯನ ಮುಂತಾದ ದಕ್ಷಿಣದೇಶದ ಮಹಾಸ್ಥಳಗಳಲ್ಲೂ ಸಂಚರಿಸಿ ಅಲ್ಲಲ್ಲಿ ನಡೆಯಿಸಬೇಕಾದ ಪುಣ್ಯಕರ್ಮಗಳನ್ನೆಲ್ಲಾ ನೆರವೇರಿಸಿ ಶಾಂತಚಿತ್ತರಾಗಿ ಹಿಂದಿರುಗಿದರು. ಕಾಂತನಾಥನು ತಾಯಿಯನ್ನು ಸಂಗಡ ಕರೆದೊಯ್ದು ಈ ಪುಣ್ಯಯಾತ್ರೆಯನ್ನು ಮಾಡಿಸಿದನು.

ಕಾಂತನಾಥನಿಗೆ ಲಲಿತಪಟ್ಟಣಕ್ಕಿಂತ ನವನಗರಿಯೇ ಉತ್ತಮವಾಗಿ ತೋರಿದುದರಿಂದ ಆತನು ತನ್ನ ಪಿತ್ರಾರ್ಜಿತವಾದ ಸಮಸ್ತ ಆಸ್ತಿಯ ಆಡಳಿತ ವನ್ನೂ ನೋಡಿಕೊಳ್ಳುವುದಕ್ಕೆ ತನ್ನ ಕಡೆಯವರನ್ನು ನೇಮಿಸಿ ತಾನು ನವನಗರಿ ಯಲ್ಲೆ ವಾಸಿಸುತ್ತಲೂ ಆಗಾಗ್ಗೆ ಅಲ್ಲಿಗೂ ಹೋಗಿ ಮೇಲ್ವಿಚಾರಣೆಯನ್ನು ಮಾಡಿ ಕೊಂಡು ಬರುತ್ತಲೂ ಇದ್ದನು.

ಪಲ್ಲವನು ತನ್ನ ಶ್ರೀಮತಿ ಜಹಜನ್ನು ನೋಡಿಕೊಳ್ಳುವುದಕ್ಕೆ ಆಪ್ತರಾದ ಕೆಲವು ಬಂಧುವರ್ಗದವರನ್ನು ನಿಯಮಿಸಿ ಇನ್ನು ಮುಂದಕ್ಕೆ ತಾನು ಸಮುದ್ರ ಯಾನಮಾಡದೆ ವಿಠಲಮೂರ್ತಿಯ ಜಹಗೀರಿಯ ಮಗ್ಗುಲಲ್ಲೇ ಸ್ವಲ್ಪ ಭೂಮಿ ಯನ್ನು ಕೊಂಡುಕೊಂಡು ಅಲ್ಲೇ ಸುಖವಾಗಿ ವಾಸಮಾಡುತ್ತಿದ್ದನು.

ನಟೇಶನೂ ವಿಠಲನೂ ಇನ್ನು ಮುಂದಕ್ಕೆ ತಮ್ಮ ಪತ್ತೇದಾರಿಯ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಇಬ್ಬರೂ ಆ ಅಲ್ಪಗ್ರಾಮದಲ್ಲಿ ಶಾಂತಿಸಾಮ್ರಾ ಜ್ಯವನ್ನನುಭವಿಸುತಿದ್ದರು.

ಇಷ್ಟಾದರೂ ವಿಠಲನು ತನ್ನ ಸಾಹಸಚರಿತ್ರೆಯ ವಿಷಯವಾಗಿ ಏನೂ ಜಂಭ ಹೇಳಿಕೊಳ್ಳುತಿರಲಿಲ್ಲ. ಒಂದುವೇಳೆ ಯಾರಾದರೂ ತಾವಾಗಿ ತಾವು ಉದ್ದೇಶಪೂರ್ವಕವಾಗಿ ಕೇಳಬಂದರೆ ಕಾಂತನಾಥನ ಪುನರುಜ್ಜೀವನ ಮತ್ತು ಪಚ್ಚೆಯ ಪೆಟ್ಟಿಗೆಯ ಮಹಾಮಹಿಮೆ ಇಂತಹ ವಿಷಯಗಳನ್ನು ಮಾತ್ರ ಹೇಳಿ ವಿನೋದಗೊಳಿಸುತಿದ್ದನು.

## ಸಮಾಪ್ತಿ

